ಸಂಯುಕ್ತ ಸಂಚಿಕೆ

# ಕರ್ನಾಟಕ ಲೋಚನ

ಸಂಪುಟ ೧೮-೧೯; ಡಿಸೆಂ-೨೦೦೫ ಜೂನ್-೨೦೦೬; ಸಂಚಿಕೆ ೨,೧



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

# 'ಕರ್ನಾಟಕ ಲೋಚನ'



**ಲೇಖನಗಳು – ಟಿಪ್ಪಣಿಗಳು**

ಸಂಶೋಧನಾತ್ಮಕ, ಪಾಂಡಿತ್ಯ–ವಿದ್ವತ್ಪೂರ್ಣ ಲೇಖನಗಳನ್ನು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮಮಟ್ಟದ ಸಂಶೋಧಿತ – ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು – ಇವುಗಳ ಮೇಲಣ ವಿಮರ್ಶೆಗಳು, ಟಿಪ್ಪಣಿಗಳು, ವಿದ್ವದ್ವಿಚಾರ ಮತ್ತು ವಿದ್ವತ್‌ಪ್ರಪಂಚದ ವಿದ್ಯಾಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ–ಟಿಪ್ಪಣಿಗಳು ಇವುಗಳಿಗೆ 'ಕರ್ನಾಟಕ ಲೋಚನ' ಮೀಸಲಾಗಿದೆ. ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು; ಅವು ಅವಶ್ಯಕವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

**ಲೇಖನಗಳಿಗೆ ಆಹ್ವಾನ**

ಮೇಲ್ಕಂಡಂತೆ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ–ಸಾಹಿತ್ಯಗಳ ಪ್ರೌಢವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ಲೋಚನದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ 6– 7 ಪುಟಗಳಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಕಡೆ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿ ಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ವಿನಂತಿ.

**ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು**

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು. ಪತ್ರಿಕೆಯ ಆಶಯಕ್ಕೆ ಅನುಗುಣವಾದ ಸಂಶೋಧನ, ಸಂಪಾದಿತ ಮತ್ತು ವಿದ್ವತ್‌ಪೂರ್ಣ ಗ್ರಂಥಗಳ ಎರಡು ಪ್ರತಿಗಳನ್ನು ಕಳುಹಿಸಬೇಕು.





ಡಿ.ಎಲ್.ಎನ್.
ತೀ.ನಂ.ಶ್ರೀ.
ಆ.ನೇ. ಉಪಾಧ್ಯೆ
ರಂ.ಶ್ರೀ. ಮುಗಳಿ

ಶತಮಾನೋತ್ಸವ ವಿಶೇಷಾಂಕ



# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ. ಕಲಾಭವನ**

**3 ನೇ ಮುಖ್ಯ ರಸ್ತೆ, ಎನ್.ಆರ್. ಕಾಲೋನಿ, ಬೆಂಗಳೂರು-560 019**

ದೂರವಾಣಿ : 26615877 ಇಮೇಲ್ : bmsri/trust@yahoo.com

ವೆಬ್ ಸೈಟ್ : http://in.members,tripodosia.com/bmsri/





ಸಂಪುಟ : ೧೮-೧೯, ಡಿಸೆಂಬರ್ ೨೦೦೫-ಜೂನ್ ೨೦೦೬, ಸಂಚಿಕೆ : ೨,೧


## ಪರಿವಿಡಿ

# KARNATAKA LOCHANA

**Half-yearly Research Journal, Published by**

**B.M.Sri. Smaraka Prathisthana**

(B.M. Sri Memorial Foundation)

**B.M.Sri Kala Bhavan**

3rd Main Road, N.R.Colony, Bangalore-560 019.
Ph: 26615877, E-mail: bmsri/trust@yahoo.com
Website: http://in.members,tripodosia.com/bmsri/



VOL: 19,20 Dec- 2005, June-2006 No.2, 1

**CONTENT**

# ಸಮಸ್ಯಾಪೂರಣ

ಇದು ಕನ್ನಡಕ್ಕೆ ಅತಿಶಯ ಲಕ್ಷಣವೆನಿಸುವ ಪ್ರಾಸ-ಪಾದ- ಛಂದೊಬದ್ಧ ಪದ್ಯ ರಚನೆಗೆ ಸಜೀವತೆಯನ್ನು ನೀಡುವ ಉದ್ದೇಶವುಳ್ಳ ಅಂಕಣ. ಇಂದಿಗೂ ಕನ್ನಡದಲ್ಲಿ ಈ ಬಗೆಯ ಪ್ರಾಚೀನ ಕಾವ್ಯರಚನಾ ಪರಂಪರೆ ಮುಂದುವರಿದಿರುವುದಲ್ಲದೆ ಅನೇಕರು ನವೀನ ಕಾವ್ಯ ಪ್ರಯೋಗಗಳನ್ನೂ ಮಾಡುತ್ತಿದ್ದಾರೆ. ಇಂಥವರಿಗೆ ಮತ್ತು ಉದಯೋನ್ಮುಖ ಆಸಕ್ತರಿಗೆ, ಪ್ರಾಚೀನ ಸಾಹಿತ್ಯ ಪ್ರಿಯರಿಗೆ ವೇದಿಕೆಯನ್ನೊದಗಿಸುವ ಆಶಯ ಈ ಅಂಕಣದ್ದು.

ಪ್ರತಿ ಸಂಚಿಕೆಯಲ್ಲಿಯೂ ಒಂದೊಂದು ಸಮಸ್ಯೆಯನ್ನು ಕೊಡಲಾಗುವುದು. ಇದು ಛಂದೋಬದ್ಧ ಕವಿತೆಯೊಂದರ ಒಂದು ಸಾಲು (ಪಾದ) ಆಗಿರುತ್ತದೆ. ಕಾವ್ಯಾಸಕ್ತರು, ಪದ್ಯರಚನಾ ಪರಿಣತರು, ತಮಗೆ ತೋರಿದ ಪದ್ಯ ರಚಿಸಿ, ಕೊಟ್ಟಿರುವ ಪಾದಕ್ಕೆ ಸರಿಹೊಂದಿಸಬೇಕು. ಕಂದ, ವೃತ್ತ, ಷಟ್ಪದಿ, ಚೌಪದಿ, ಅಷ್ಟಪದಿ, ತ್ರಿಪದಿ, ರಗಳೆ, ಯಾವುದೇ ಪದ್ಯಜಾತಿಯಾಗಬಹುದು. ಆಧುನಿಕ ಪದ್ಯವೂ ಆಗಬಹುದು. ಕೊಟ್ಟಿರುವ ಸಮಸ್ಯೆಯ ಪಾದದ ಪ್ರಾಸ, ಲಯ ಅರ್ಥಕ್ಕೆ ಅನ್ವಯಿಸಿ ಛಂದೋಬದ್ಧ ಕವಿತೆಯನ್ನಾಗಿಯೇ ರಚಿಸಬೇಕು. ಒಬ್ಬರು ಒಂದು ಪದ್ಯವನ್ನು ಕಳುಹಿಸಬಹುದು.

**ಸಮಸ್ಯೆ: ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್**

(1) ಸುಖದಿಂದಲಿ ಪಯಣದಿ ಬಳಿ ಮರಳಿಹ
ಸಖನನು ಕಾಣುತ ತಮ್ಮೊಡತಿಯಿರೆ
ಸಖಿಯರು ನಲಿಯುತ ಮಾದೇವನಭಿ
ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್

**– ಅನಾಜಿ, ಬೆಂಗಳೂರು**

(2) ಅಕಟಾ ಮನಗಟ್ಟಿಲೆಯಿಂ
ಸಕಲರ ಕೇಡಿಂಗೆಳಸುವ ಜನಜಂತುಗಳುಂ
ಪ್ರಕಟದಿ ಗುಡಿಗೊಂಬೆಯ ಸ
ಮ್ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್

**– ಡಾ॥ ಪಿ.ವಿ. ನಾರಾಯಣ**

(3) ಮುಖದ ಮುಂದೆ ದೀಪ ಹಚ್ಚಿ ಪೂಜಿಸುವ ಜನರು
ಮುಕುರಕಾಂತಿಗೆ ಮೆಚ್ಚಿ ಮೈಮರೆಯುವಾ ನರರಿಂದು
ನಖಶಿಖಾಂತ ರೋಸಿ ನಗನಾಣ್ಯಕೆ ಮಾಸತಿಯ
ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರು

**– ಪ್ರೊ॥ ನಾ. ಗೀತಾಚಾರ್ಯ**

(4) ಅಕಳಂಕ ವರ್ಧಮಾನರ
ನಿಖಿಲಾಗಮ ಮತದಿ ಬಸದಿಲಿ ಕೀರ್ತಿಮುನಿಗಳ್ ।
ಸಕಲರ ಹಿತರಕ್ಷೇಗೆ ಜಿನ
ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್ ॥

**– ಪಂಡಿತ ಎಂ.ಆರ್. ಅನಂತರಾಮಯ್ಯ**

(5) ನಾಕದ ಸಂತಸ ತುಂಬಿರೆ
ಅಕಾಲ ಸೋನೆಕೊಳೆ ಮಧುವನದಿಯಮರ್ದಿರಲ್ ಮು
ಸುಕೆ ಕಟ್ಟಿಲಲ್ಲಿ ನಲ್ಲರು
ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್

**– ಕೆ. ರಘುರಾಮ ಭಟ್**

(6) ಮದುವೆಯಲಿ ಮುಂಜಿಯಲಿ
ಹೊತ್ತಿಗೆಯ ಬಿಡುಗಡೆಯ ಸಂತಸದ ಚಣಗಳಲಿ
ಸೇರಿಪಾ ಜನರಿಗೆ ಕಾಣಲಿ ಕಾಣದಿರಲಿ
ಛಾಯಾಗ್ರಾಹಕರ್ ವಿಡಿಯೋಪೀಡಕರ್
ಮೊಕದೊಳೆ ದೀವಿಗೆಯ ಹಚ್ಚಿ ಸಂತೋಷಿಸುವರ್
(ಛಂದೋರಹಿತ) **– ಎನ್. ರಾಮನಾಥ್**

* * *

ಮುಂದಿನ ಸಂಚಿಕೆಯ ಸಮಸ್ಯೆ

'ರಾವಣನವನಿಜೆಯಕಾಂತನಿಳೆಯಂ ಪೊರೆವಂ

**– ಅವಧಾನಿ ಡಾ॥ ಆರ್. ಗಣೇಶ್**

## 2. ಆಸೂರಿ ರಾಮಸ್ವಾಮಿದಾಸರ ಕೀರ್ತನ ಸಂಪುಟದಲ್ಲಿ ಬಿಟ್ಟುಹೋದ ಕೀರ್ತನೆಗಳು ಮತ್ತು ಅಂಕಿತವಿಚಾರ

– ಪ್ರೊ॥ ಜಿ.ಅಶ್ವತ್ಥನಾರಾಯಣ

ಸಮಗ್ರ ದಾಸಸಾಹಿತ್ಯವನ್ನು 35 ಸಂಪುಟಗಳಲ್ಲಿ ಸಮರ್ಥ ಸಂಪಾದಕ ವರ್ಗದವರ ನೇತೃತ್ವದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಮೂಲಕ ಕರ್ನಾಟಕ ಸರ್ಕಾರ ಪ್ರಕಟಿಸಿ ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರವಾಗಿದೆ. 23000ಕ್ಕೂ ಹೆಚ್ಚಿನ ಕೀರ್ತನೆ, ಉಗಾಭೋಗ, ಸುಳಾದಿ ಇತ್ಯಾದಿ ಪ್ರಕಟಕೊಂಡು ಸಂಶೋಧಕರ, ದಾಸಸಾಹಿತ್ಯ ಪ್ರೇಮಿಗಳ ಕಣ್ ತೆರೆಸಿವೆ. ಸಂಶೋಧಕರಿಗೆ ವಿಮರ್ಶಕರಿಗೆ ವಿಪುಲ ಆಕರ ಸಾಮಗ್ರಿಯನ್ನು ಈ ಸಂಪುಟಗಳು ಒದಗಿಸಿವೆ. 19ನೇ ಶತಮಾನದ ಒಳಗೆ (1900 ಒಳಗೆ) ಜನಿಸಿದ ಹರಿದಾಸರ ಕೀರ್ತನೆಗಳ ಪ್ರಕಟಣೆಯನ್ನು ಗುರಿಯಾಗಿಟ್ಟು ಕೊಂಡಿದ್ದರಿಂದ ಈ ಪ್ರಕಟಣೆಗಳು 19ನೇ ಶತಮಾನದ ಅಂತ್ಯದ ದಶಕದಲ್ಲಿ ಹುಟ್ಟಿ 20ನೇ ಶತಮಾನದಲ್ಲಿ ರಚನೆ ಆಗಿರುವುದರಿಂದ 20ನೇ ಶತಮಾನದ ಕೀರ್ತನೆಗಳೆಂದೇ ಪರಿಗಣಿಸಬೇಕಾಗಿದೆ. ಆಸೂರಿ ರಾಮಸ್ವಾಮಿದಾಸರು 1886ರಲ್ಲಿ ಜನಿಸಿದರೂ ಅವರ ಎಲ್ಲ ಪ್ರಕಟಿತಕೃತಿಗಳ ರಚನೆ ಆಗಿರುವುದು 20ನೇ ಶತಮಾನದಲ್ಲಿ. ಅದೇನೇ ಇರಲಿ ಶ್ರೀವೈಷ್ಣವದಾಸರ ಶ್ರೇಷ್ಠ ಕೀರ್ತನೆಗಳು ಕನ್ನಡಕ್ಕೆ ದೊರೆತಿವೆ ಎಂಬುದು ಮುಖ್ಯ. ದಾಸ ಸಾಹಿತ್ಯದ ಮೊದಲ ಘಟ್ಟದ ಹರಿದಾಸರ ಕೀರ್ತನೆಗಳ ಮಟ್ಟದಲ್ಲಿ ಇವರ ಕೀರ್ತನೆಗಳಿವೆ. ಲಲಿತ ಬಂಧುರವಾಗಿ ಹಾಡಲು ಮನೋಹರವಾಗಿದೆ, ಭಕ್ತಿಪೂರ್ಣವಾಗಿವೆ. ಇವರ ಕೀರ್ತನೆಗಳ ಬಗ್ಗೆ ನಾ. ಗೀತಾಚಾರ್ಯರು ಸಾಕಷ್ಟು ವಿಸ್ತೃತ ಪ್ರಸ್ತಾವನೆ ಬರೆದಿದ್ದರೂ ಸಾಕಷ್ಟು ಚರ್ಚಿಸಬೇಕಾದ ವಿಷಯಗಳಿವೆ. ಮತ್ತು ನಾನಾ ದೃಷ್ಟಿಗಳಿಂದ ಕೀರ್ತನೆಗಳ ಭಾಷೆ, ವಸ್ತು, ನಿರೂಪಣೆ ಬಗ್ಗೆ ವಿಮರ್ಶೆ ಆಗಬೇಕಾಗಿದೆ. ಈ ಹಿನ್ನೆಲೆಯಲ್ಲಿ ಈ ಸಂಗ್ರಹದಲ್ಲಿ ಬಿಟ್ಟು ಹೋದ ಕೀರ್ತನೆಗಳ ಬಗ್ಗೆ ಮತ್ತು ವಾಗೀಶ್ವರಿ ಅವರ ಹೃದಯ ಸಂಪುಟದಲ್ಲಿ ಪ್ರಸ್ತಾಪಿಸಿದ ವಿಚಾರಗಳ ಬಗ್ಗೆ ಇಲ್ಲಿ ಕೆಲವು ಸಂಗತಿಗಳನ್ನು ವಿಶ್ಲೇಷಿಸಲಾಗಿದೆ.

'ಮಾಂಗಿರೀಶ' ಅಂಕಿತದ ಬಗ್ಗೆ ಅವರ ಹೃದಯ ಸಂಪುಟ ಗ್ರಂಥದಲ್ಲಿ ಶ್ರೀಮತಿ ವಾಗೀಶ್ವರಿ ಶಾಸ್ತ್ರಿ ಅವರ ವಿಚಾರಗಳು ಗಮನಾರ್ಹವಾಗಿವೆ. 1985ರಲ್ಲಿ ಪ್ರಕಟಿಸಿದ ಅವರ ಸಂಪ್ರದಾಯದ ಹಾಡುಗಳು ಬೃಹತ್ ಸಂಪ್ರದಾಯದ ಹಾಡುಗಳ ಗ್ರಂಥದಲ್ಲಿ ರಚನಾಕಾರರನ್ನು ಕುರಿತ ಅನುಬಂಧದಲ್ಲಿ (ಪು.281–282) ಮಾಂಗಿರೀಶನನ್ನು ಕುರಿತು ಹೇಳಿದ ಮುಖ್ಯ ವಿಚಾರಗಳು ಹೀಗಿವೆ:

1. ಉತ್ತಮ ಮಟ್ಟದಲ್ಲೇ ರಚನೆಗಳನ್ನು ಮಾಡಿದ್ದರೂ ಮಾಂಗಿರೀಶನ ಅಂಕಿತವನ್ನು ದಾಸಪಂಥಕ್ಕೆ ಸೇರಿಸಿದಂತೆ ಕಾಣುವುದಿಲ್ಲ.

2. ಈ ಅಂಕಿತ ರಚನೆಗಳು ಬಳಕೆಯಲ್ಲಿದ್ದು ಧ್ವನಿಗಳು ಮೋಹಕವಾಗಿರುವುದೂ, ಶಾಸ್ತ್ರೀಯರಾಗಗಳಲ್ಲಿ ಇರುವುದೂ ಕಂಡುಬರುತ್ತದೆ.

3. ಈ ಕವಿ ಯಾರು? ಎಲ್ಲಿಯವ? ಯಾವ ಕಾಲದಲ್ಲಿದ್ದನು? ಎನ್ನುವ ಯಾವ ವಿಚಾರವೂ ಈವರೆವಿಗೂ ಸರಿಯಾಗಿ ತಿಳಿಯದಿರುವುದು ಆಶ್ಚರ್ಯ.

4. ಅಲ್ಲದೆ ಈ ಕವಿಯ ಹಾಡುಗಳನ್ನು ಸಂಗ್ರಹಿಸಿ ಒಂದು ಹೊತ್ತಿಗೆಯನ್ನು ತಂದಂತಿಲ್ಲ.

5. ಈತನ ಕವನ ಚಾತುರ್ಯವನ್ನು ಕಂಡಾಗ ಈತ ಇನ್ನೂ ಹೆಚ್ಚಿನ ಬಳಕೆಯ ರಚನೆಗಳನ್ನು ಮಾಡಿರಬಹುದೆಂದು ಊಹಿಸಲು ಅವಕಾಶವಿದೆ.

6. ಶಾಸ್ತ್ರದ ಹಾಡುಗಳಲ್ಲಿ ಇವನ ರಚನೆಗಳೆಲ್ಲಾ ನಮ್ಮ ಹಳೆಯ ಮೈಸೂರು ಪ್ರಾಂತದ ಆಚಾರವಿಚಾರಗಳನ್ನು ಬಹುವಾಗಿ ಪ್ರತಿಬಿಂಬಿಸುತ್ತದೆ. ಶಾಸ್ತ್ರಗಳ ಉದ್ದೇಶವೆಲ್ಲಾ ಒಂದೇ ಆದರೂ ಆಚಾರ, ಸಂಪ್ರದಾಯ ನಡವಳಿಕೆಗಳಲ್ಲಿ ದೇಶಾಚಾರವನ್ನು ತಿಳಿಸುತ್ತದೆ.

ಆದ್ದರಿಂದ ಮಾಂಗಿರೀಶ ಕವಿಯು ಹಳೇ ಮೈಸೂರು ಪ್ರಾಂತದವನೇ ಆಗಿದ್ದು ಮಾವಿನಕೆರೆ ರಂಗನಾಥನು ಈತನ ಕುಲದೈವವಾಗಿದ್ದರೂ ಇರಬಹುದು.

ವಾಗೀಶ್ವರೀಶಾಸ್ತ್ರಿ ಅವರ ಈ ಆರು ಊಹೆಗಳಿಗೂ ಪ್ರೊ॥ ನಾ. ಗೀತಾಚಾರ್ಯರು ಸಂಪಾದಿಸಿರುವ ಆಸೂರಿ ರಾಮಸ್ವಾಮಿದಾಸರು ಮತ್ತು ಇತರ ಶ್ರೀವೈಷ್ಣವ ಹರಿದಾಸರ ಕೀರ್ತನೆಗಳು ಸಮಗ್ರ ದಾಸ ಸಾಹಿತ್ಯ. ಸಂಪುಟ: 35 ಭಾಗ – 2 (ಪ್ರಕಟನೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟನೆ ವರ್ಷ 2003) ಸಂಪಾದಿತ ಗ್ರಂಥದ ಪ್ರಸ್ತಾವನೆಯ ಆಧಾರದ ಮೇಲೆ ಉತ್ತರಿಸಬಹುದಾಗಿದೆ. ನಾ. ಗೀತಾಚಾರ್ಯರು ಮೊದಲ ಬಾರಿಗೆ ಆಸೂರಿ ರಾಮಸ್ವಾಮಿ ಅವರ ಅಪ್ರಕಟಿತ ಕೀರ್ತನೆಗಳನ್ನು ಅವರ ಕುಟುಂಬ ವರ್ಗದಿಂದ ಸಂಗ್ರಹಿಸಿ ಸಂಪಾದಿಸಿ ಶ್ರೀವೈಷ್ಣವ ದಾಸಸಾಹಿತ್ಯಕ್ಕೆ ಉತ್ತಮ ಕೊಡುಗೆ ನೀಡಿದ್ದಾರೆ. ಈ ಗ್ರಂಥದಲ್ಲಿ ಇರುವ ಪ್ರಸ್ತಾವನೆ ಆಧರಿಸಿ ವಾಗೀಶ್ವರೀ ಶಾಸ್ತ್ರಿ ಅವರ ಊಹೆಗಳಿಗೆ ಹೀಗೆ ಉತ್ತರಿಸಬಹುದಾಗಿದೆ.

1. ದಾಸಪಂಥಕ್ಕೆ ಮಾಂಗಿರೀಶ ಅಂಕಿತವನ್ನು ಸೇರಿಸಿಲ್ಲ ಎಂಬ ಮಾತು ನಿಜ. ಇದಕ್ಕೆ ಕಾರಣ ವಿಶಿಷ್ಟಾದ್ವೈತ ಸಿದ್ಧಾಂತದ ಹಿನ್ನಲೆಯಲ್ಲಿ ಆಸೂರಿಯವರ ಕೀರ್ತನೆಗಳು ರಚನೆ ಆಗಿರುವುದರ ಜತೆಗೆ, ನಾ. ಗೀತಾಚಾರ್ಯರು ಹೇಳುವಂತೆ "ಶ್ರೀವೈಷ್ಣವ

ಕೀರ್ತನಕಾರರು ಹರಿದಾಸ ವೃತ್ತಿಯನ್ನು ವೃತ್ತಿಯನ್ನಾಗಿ ಸ್ವೀಕರಿಸಿದವರಲ್ಲ, ಪ್ರವೃತ್ತಿಯ ಮಾರ್ಗವಾಗಿ ಕಂಡುಕೊಂಡವರು. ಯಾವುದೇ ಗುರುವಿನ ಮೂಲಕ ಅಂಕಿತವನ್ನಾಗಲೀ ದೀಕ್ಷೆಯನ್ನಾಗಲೀ ಪಡೆದಿಲ್ಲ. ಅರ್ಚಾಮೂರ್ತಿಯನ್ನೇ ಅಂಕಿತವಾಗಿಟ್ಟುಕೊಂಡು ಮೋಕ್ಷ ಸಾಧನೆಯ ರೂಪವಾದ ಭಗವನ್ನಾಮಸ್ಮರಣೆಯನ್ನು ಆತ್ಮನಿವೇದನೆಯ-ಆತ್ಮ ಸಮರ್ಪಣೆಯ ಮೂಲಕ ಮಾಡುವ ಅಂತರಂಗಭಕ್ತಿ ಈ ಕೀರ್ತನೆಗಳಲ್ಲಿ ಹೊಮ್ಮಿದೆ. ಇವರಿಗೆ ಶ್ರೀಹರಿಯೇ ಗುರು, ತಂದೆ, ಅಂಕಿತ, ಆರಾಧ್ಯ ದೈವ, ಸರ್ವಸ್ವ, ಆದ್ದರಿಂದಲೇ ಇದರಲ್ಲಿ ಗುರುಮುಖೇನ ಅಂಕಿತ-ಹರಿದಾಸ ವೃತ್ತಿಯನ್ನು, ದೀಕ್ಷೆಯನ್ನು ಸ್ವೀಕರಿಸಿರುವ ನಿದರ್ಶನಗಳು ಕಂಡುಬರುವುದಿಲ್ಲ. ಅದ್ವೈತ ಕೀರ್ತನಕಾರರಿಗೂ ಈ ಮಾತು ಅನ್ವಯವಾಗುತ್ತದೆ. ಅಲ್ಲದೆ ದ್ವೈತ ಕೀರ್ತನಕಾರರಲ್ಲೂ ಕೆಲವರಿಗೆ ಅನ್ವಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಹರಿದಾಸರು ಎಂಬ ಪದದ ಅರ್ಥ ವ್ಯಾಪ್ತಿಯನ್ನು ಪುನರ್ ವ್ಯಾಖ್ಯಾನಿಸಬೇಕಾದ ಅಗತ್ಯವಿದೆ". (ಪ್ರಸ್ತಾ. ಪು. 47)

ಈ ದೃಷ್ಟಿಯಿಂದ ಹರಿದಾಸರು ಎಂದಾಗ ಕೇವಲ ದ್ವೈತ ಸಿದ್ಧಾಂತದ ತಳಹದಿಯ ಮೇಲೆ ಕೀರ್ತನೆ, ಉಗಾಭೋಗ, ಸುಳಾದಿ, ಖಂಡಕಾವ್ಯ, ದಂಡಕ, ಸ್ತೋತ್ರ ಇತ್ಯಾದಿ ರಚಿಸಿದವರು. ಗುರುವಿನಿಂದ ಅಥವಾ ಸ್ವಪ್ನ ಮೂಲಕ ಅಂಕಿತ ಪಡೆದವರಷ್ಟೇ ಹರಿದಾಸರಲ್ಲ. ದೈವಪ್ರೇರಣೆಯಿಂದ ಇಷ್ಟದೇವತೆಯ ಅಥವಾ ಕುಲದೇವತೆಯ ಇಲ್ಲವೇ ಸ್ಥಳದೇವತೆಯ ಅಂಕಿತದಲ್ಲಿ ಕೀರ್ತನೆ ಇತ್ಯಾದಿ ರಚಿಸಿದ ದೈವಭಕ್ತರು ಅದ್ವೈತ, ವಿಶಿಷ್ಟಾದ್ವೈತ ಮತ್ತು ವೀರಶೈವ ಅನುಭಾವಿಗಳು ಮತ್ತು ಇತರ ವೈದಿಕೇತರ ಶರಣರು, ದಾಸರು ರಚಿಸಿದ ಧಾರ್ಮಿಕ ಹಾಗೂ ಸಾಮಾಜಿಕ ಕೀರ್ತನ ಸಾಹಿತ್ಯವನ್ನು ಹರಿದಾಸ ಸಾಹಿತ್ಯವೆಂದೂ ಈ ರಚಯಿತರನ್ನು ಹರಿದಾಸರೆಂದೂ ಪುನರ್ ವ್ಯಾಖ್ಯಾನಿಸ ಬಹುದಾಗಿದೆ. ಸಿದ್ಧಾಂತದ ತಳಹದಿ ಮೇಲೆ ಕೀರ್ತನಸಾಹಿತ್ಯ ನಿಂತಿರುವುದರಿಂದ, ಈ ಹಿನ್ನೆಲೆಯಲ್ಲಿ ದ್ವೈತ (ಮಾಧ್ವ) ಹರಿದಾಸರು, ವಿಶಿಷ್ಟಾದ್ವೈತ (ಶ್ರೀವೈಷ್ಣವ) ಹರಿದಾಸರು ಅದ್ವೈತ (ಸ್ಮಾರ್ತ ಅಥವಾ ಭಾಗವತ) ಹರಿದಾಸರು ಶಕ್ತಿ ವಿಶಿಷ್ಟಾದ್ವೈತ (ವೀರಶೈವ ಅಥವಾ ಶರಣ) ಹರಿದಾಸರು ಮತ್ತು ಇತರ ಅನುಭಾವೀ ಪಂಥಗಳ (ವೈದಿಕೇತರ ಧಾರ್ಮಿಕ ಪಂಥಗಳು) ತತ್ವ ಪದಗಳ ಹರಿದಾಸರು ಎಂದು ಅಧ್ಯಯನಾನುಕೂಲಕ್ಕಾಗಿ ವರ್ಗೀಕರಿಸಿಕೊಳ್ಳಬಹುದು. ಆಗ ಕೀರ್ತನಕಾರರ ಅಧ್ಯಯನ ಸುಗಮವಾಗಬಲ್ಲುದು ಎಂದು ನನ್ನ ಅಭಿಮತ. ಈ ದೃಷ್ಟಿಯಿಂದ ನಾ. ಗೀತಾಚಾರ್ಯರು ಹೇಳುವ ಈ ಮಾತನ್ನು ಒಪ್ಪಬಹುದಾಗಿದೆ.

"ಹರಿದಾಸ ಸಾಹಿತ್ಯವನ್ನು ಸಮಷ್ಟಿ ದೃಷ್ಟಿಯಿಂದ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಭೇದ ವಿವಕ್ಷೆಯಿಲ್ಲದೆ ಸಮನಾಗಿ ನೋಡಬೇಕಾಗುತ್ತದೆ. ದೀಕ್ಷಾಬದ್ಧರಾದವರ ರಚನೆಗಳು ಮಾತ್ರ ಕೃತಿಗಳು ಉಳಿವರವು ಪದಗಳು ಎಂಬ ಭೇದ ತೋರದೆ ಕೀರ್ತನೆಗಳ ರಚನೆ

ಮಾಡಿರುವವರೆಲ್ಲರೂ ಕೀರ್ತನಕಾರರು, ಹರಿದಾಸರು, ಅವರು ರಚಿಸಿದ ಕೃತಿಗಳೆಲ್ಲವೂ, ಕೀರ್ತನೆಗಳು, ಹರಿದಾಸರ ಹಾಡುಗಳು ಎಂಬ ಧೋರಣೆಗೆ ಬರಬೇಕಾಗುತ್ತದೆ". (ಪುಟ 47)

ಇಲ್ಲಿ ಒಂದು ಎಚ್ಚರಿಕೆಯನ್ನು ಗಮನಿಸಬೇಕಾಗುತ್ತದೆ. ಅದೆಂದರೆ ಹರಿದಾಸರು ಧಾರ್ಮಿಕ ಸಾಹಿತ್ಯದ ಜತೆಗೆ ಲೌಕಿಕ ಕೀರ್ತನೆಗಳನ್ನೂ ರಚಿಸಿದ್ದಾರೆ ನಿಜ. ಹಾಗೆಂದು ಸಿನಿಮಾ – ನಾಟಕಗಳಿಗೆ ಬರೆದ ಕೀರ್ತನೆಗಳೆನ್ನೆಲ್ಲಾ ಸಾಹಿತ್ಯದ ಪ್ರಕಾರದ ದೃಷ್ಟಿಯಿಂದ, ಸಂಗೀತ ಒಳಗೊಂಡ ಶಾಸ್ತ್ರೀಯ ರಚನೆಯುಳ್ಳ ಕೀರ್ತನೆ ಎನಿಸಿದರೂ ಅವು ದಾಸ ಸಾಹಿತ್ಯ ಆಗುವುದಿಲ್ಲ. ಏಕೆಂದರೆ ಅಲ್ಲಿಯ ಆಶಯಕ್ಕೆ ಧಾರ್ಮಿಕನೆಲೆ, ಸೈದ್ಧಾಂತಿಕ ನೆಲೆ ಇರುವುದಿಲ್ಲ. ಇಂತಹ ರಚನಾಕಾರರು ಹರಿದಾಸರಾಗಿರುವುದಿಲ್ಲ. ಈ ದೃಷ್ಟಿಯಿಂದ ಜಿ. ವರದರಾಜರಾವ್ ಅವರ ಮಾತು (ಶ್ರೀಪಾದರಾಜರ ಕೃತಿಗಳು ಪುಟ.20) ಸಮರ್ಥನೀಯವೆನಿಸುತ್ತದೆ.

"ಹರಿದಾಸಸಾಹಿತ್ಯ ಪ್ರಧಾನವಾಗಿ ಭಕ್ತಿಪರವಾದದ್ದು. ಭಗವದ್ಭಕ್ತನು ಆತ್ಮಶೋಧನೆಯನ್ನು ಮಾಡಿಕೊಂಡು ಭಗವಂತನ ಅನುಗ್ರಹಕ್ಕಾಗಿ ಹಗಲಿರುಳೂ ಹಂಬಲಿಸುತ್ತ ಇಷ್ಟಾರ್ಥಸಿದ್ಧಿ ಆದ ಮೇಲೆ ದಿವ್ಯಾನುಭವವನ್ನು ಇತರರಿಗೂ ತಿಳಿಯ ಹೇಳಿ, ಸಮಸ್ತರನ್ನೂ ಸಮಷ್ಟಿ ದೃಷ್ಟಿಯಿಂದ ಸಮೀಕ್ಷಿಸಬೇಕು. ಆಗ, ಅಲ್ಲಿ ಆಯಾ ಆ ಹರಿದಾಸರ ಆತ್ಮಶೋಧನೆ, ಅಪರೋಕ್ಷಾನುಭವ, ಭಗವಂತನನ್ನು ಆರಾಧಿಸುವ ನಾನಾ ವಿಧಾನಗಳು ಮೊದಲು ನಮ್ಮ ಮನಸ್ಸನ್ನು ಸೆಳೆಯುತ್ತವೆ". [ಶ್ರೀಪಾದರಾಜರ ಕೃತಿಗಳು (ಪಂಡಿತ ಆವೃತ್ತಿ) ಪು. 20. ಸಂ: ಜಿ. ವರದರಾಜರಾವ್]

2. ಮಾಂಗಿರೀಶರ ರಚನೆಗಳು ಬಳಕೆಯಲ್ಲಿವೆ, ಧ್ವನಿಗಳು ಮೋಹಕವಾಗಿವೆ. ಶಾಸ್ತ್ರೀಯ ರಾಗಗಳಲ್ಲಿ ಇವೆ ಎಂಬ ಮಾತು ತುಂಬ ಸಮಂಜಸವಾಗಿದೆ. ಕೇವಲ ಅವರ 22 ಕೀರ್ತನೆಗಳನ್ನು ಹಾಡುವ ವಾಗೀಶ್ವರೀಶಾಸ್ತ್ರಿ ಅವರು ಆಸೂರಿಯವರ ಕೀರ್ತನೆಗಳ ಸಮಗ್ರ ಲಕ್ಷಣವನ್ನು ನಿರೂಪಿಸಿದ್ದಾರೆ.

"ಸರಳ ಶೈಲಿಯ ಕೀರ್ತನೆಗಳಿಂದ ಹಿಡಿದು ರಾಗ – ತಾಳ – ಪ್ರಾಸಬದ್ಧ, ಶಾಸ್ತ್ರನಿಷ್ಠ ಸಂಗೀತ – ನಾಟ್ಯ ಪ್ರಧಾನ ಕೃತಿಗಳವರೆಗೆ ಇವರ ಕೀರ್ತನೆಗಳಿವೆ" ಎಂಬ ಮಾತು ಮೇಲಿನ ಮಾತಿಗೆ ಪೂರಕವಾಗಿದೆ. (ಪ್ರಸ್ತಾವನೆ: ಪು. 47 ನಾ. ಗೀತಾಚಾರ್ಯ)

3. ಈ ಕವಿ ಯಾರು? ಎಲ್ಲಿಯವ? ಯಾವ ಕಾಲದಲ್ಲಿದ್ದವನು ಎನ್ನುವ ಯಾವ ವಿಚಾರವೂ ಈವರೆವಿಗೂ ಸರಿಯಾಗಿ ತಿಳಿಯದಿರುವುದು ಆಶ್ಚರ್ಯ ಎಂಬ ವಾಗೀಶ್ವರೀಶಾಸ್ತ್ರಿ ಅವರ ಮಾತು ನಮ್ಮ ಕಾಲದ ಕನ್ನಡ ಸಾಹಿತ್ಯದ ಮಾಹಿತಿ ಕೊರತೆಗೆ ಸಾಕ್ಷಿಯಾಗಿದೆ.

ಈ ಕವಿಯ ಬಗ್ಗೆ, ಅನೇಕ ಕೃತಿಗಳ ಬಗ್ಗೆ ಸಾಕಷ್ಟು ಜನರಿಗೆ ತಿಳಿದಿದ್ದರೂ ಕೀರ್ತನೆಗಳನ್ನು ಬಲ್ಲವರಿಗೆ ಇವರ ಪರಿಚಯ ಇರಲಿಲ್ಲ ಎಂಬುದಕ್ಕೆ ಈ ಮಾತು ಸಾಕ್ಷಿ ಆಗಿದೆ. ಆಸೂರಿ ಅವರ ಬಗ್ಗೆ ಗೀತಾಚಾರ್ಯರು ನೀಡಿರುವ ಮಾಹಿತಿ ಮೇಲಿನ ಪ್ರಶ್ನೆಗಳಿಗೆ ಉತ್ತರ ನೀಡುತ್ತದೆ.

"ಆಸೂರಿ ಕೆ. ರಾಮಸ್ವಾಮಿ ಅಯ್ಯಂಗಾರ್ ಅರಕಲಗೂಡು ತಾಲ್ಲೂಕು ಕೇರಳಾಪುರದವರು. ಹಾಸನ ಜಿಲ್ಲೆಯವರು. ಇವರ ಹೆಸರಿನಲ್ಲಿರುವ ಕೆ ಎಂಬ ಅಕ್ಷರ ಕೇರಳಾಪುರವನ್ನು ಸಂಕೇತಿಸುತ್ತದೆ. ಕೇರಳಾಪುರ ವಿದ್ವಾಂಸರ ಬೀಡಾಗಿತ್ತು ಎಂಬುದು ಇತಿಹಾಸದಿಂದ ತಿಳಿಯುತ್ತದೆ. ರಾಮಸ್ವಾಮಿ ಅಯ್ಯಂಗಾರ್ ಅವರು ಶ್ರೀವೈಷ್ಣವ ಮತದ ತೇಂಗಲೆ ಸಂಪ್ರದಾಯದವರು. ಆಸೂರಿ ಮಠ ಪರಂಪರೆಗೆ ಸೇರಿದವರು. ಭಾಗವತ ಭಕ್ತರಾದ ಶ್ರೀನಿವಾಸಯ್ಯಂಗಾರ್ ಮತ್ತು ವೆಂಕಟಲಕ್ಷಮ್ಮ ದಂಪತಿಗಳಿಗೆ ಜೇಷ್ಠಪುತ್ರರಾಗಿ 8.6.1886ರಂಲ್ಲಿ ರಾಮನವಮಿಯ ದಿನದಂದು ಜನಿಸಿದರು. ಇವರ ಮನೆತನದಲ್ಲಿ ಹಿರಿಯರೊಬ್ಬರು ಇದೇ ಹೆಸರಿನವರು ಸಂಗೀತಗಾರರೂ, ಕವಿಗಳೂ ಆಗಿದ್ದರೆಂದು, ಅವರಂತೆ ಇವರೂ ಕವಿಗಳೂ, ಗಾಯಕರೂ ಆಗಬೇಕೆಂಬ ಅಭಿಲಾಷೆಯಿಂದಲೂ ರಾಮನವಮಿ ದಿನ ಹುಟ್ಟಿದ ಕಾರಣದಿಂದಲೂ ಇವರಿಗೆ ರಾಮಸ್ವಾಮಿ ಎಂದು ಹೆಸರಿಟ್ಟರಂತೆ. ಇವರು ತಾಯಿ ತಂದೆಗಳ ಅಭಿಲಾಷೆಯಂತೆ 'ಸರಳಕವಿ', 'ಕವಿರತ್ನ' ಬಿರುದುಗಳನ್ನು ಪಡೆದಿದ್ದಾರೆ. ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆ. 'ರಾಮದಾಸ' ಅಂಕಿತದಲ್ಲೂ ಕುಲದೈವ 'ಮಾಂಗಿರೀಶ' ಅಂಕಿತದಲ್ಲೂ ಕೀರ್ತನೆ ರಚಿಸಿದ್ದಾರೆ. ಈ ಎರಡೂ ಅಂಕಿತಗಳು ಅವರದೇ ಎಂಬುದು ಅವರ ಕೀರ್ತನೆಗಳಿಂದಲೂ ಅವರ ಕುಟುಂಬದವರ ಹೇಳಿಕೆಯಿಂದಲೂ ಸಮರ್ಥಿಸಲ್ಪಟ್ಟಿದೆ.

ಬಾಲ್ಯದಿಂದಲೇ ಕೀರ್ತನಕಲೆ ಇವರಿಗೆ ಸಿದ್ಧಿಸಿತ್ತು. ಕೇರಳಾಪುರದ ನರಸಿಂಹ ದೇವರನ್ನು ಕುರಿತು ಅಕ್ಷರಾಭ್ಯಾಸ ಆಗುವ ಮೊದಲೇ ಹಾಡುಗಳನ್ನು ರಚಿಸಿ ಇತರರ ಕೈಲಿ ಬರೆಸುತ್ತಿದ್ದರಂತೆ. ಇವುಗಳನ್ನು ಕಂಡ ಚಾಮರಾಜನಗರದ ಸರಗೂರಿನ ವೆಂಕಟವರದಾರ್ಯರೆಂಬ ಕೀರ್ತನಕಾರರು ಇವರ ಗುರುಗಳಾಗಿದ್ದರು. ಅವರ ಪ್ರೋತ್ಸಾಹದಿಂದ ಪ್ರಭಾವಿತರಾದರು ಎಂದು ಹೇಳುತ್ತಾರೆ. ಬಾಲ್ಯವನ್ನು ತಂದೆಯ ಊರಿನಲ್ಲಿ ಕಳೆದ ಮೇಲೆ ವಿದ್ಯಾಭ್ಯಾಸಕ್ಕಾಗಿ ತಾಯಿಯ ಊರಾದ ಸಾಲಿಗ್ರಾಮಕ್ಕೆ ಬಂದರು. ಅಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆ ಪಾಸಾದರು. ಆಗ ಬೆಂಗಳೂರಿನ ಕಬ್ಬನ್‌ಪೇಟೆಯಲ್ಲಿದ್ದು ಶ್ರೀವೈಷ್ಣವ ಕುಟುಂಬದ ವೇದವಲ್ಲಿ ಎಂಬುವರೊಡನೆ ಮದುವೆ ಆಯಿತು. ಆಗ 19 ವರ್ಷ. ಅವರಿಗೆ ಶಾಲೆಯೊಂದರಲ್ಲಿ ಉಪಾಧ್ಯಾಯ ವೃತ್ತಿ ದೊರೆತು ಬೆಂಗಳೂರಿನಲ್ಲಿ ಮಾವನ ಮನೆಯಲ್ಲಿಯೇ ನೆಲೆಸಿ ಇಡೀ ಕುಟುಂಬದ 8-10 ಜನರ ಹೊಣೆ ಹೊತ್ತರು. ಸ್ವರ್ಣವಲ್ಲಿ ಎಂಬ ಮಗಳು ಜನಿಸಿದ ಸ್ವಲ್ಪ ಕಾಲದಲ್ಲೇ ಹೆಂಡತಿ

ವೇದವಲ್ಲಿ ಅವರು ನಿಧನರಾದರು. ಅನಂತರ ಹಿರಿಯರ ಅಪೇಕ್ಷೆ ಮೇರೆಗೆ ಮಾಗಡಿ ಕೃಷ್ಣಯ್ಯಂಗಾರರ ಪುತ್ರಿ ಸೀತಮ್ಮನನ್ನು ತಮ್ಮ 28ನೇ ವಯಸ್ಸಿನಲ್ಲಿ ಮದುವೆ ಆದರು. ಇವರಿಗೆ ವೇದವಲ್ಲಿ ಎಂಬ ಹೆಣ್ಣು ಮಗಳು, ಗೋಪಾಲಯ್ಯಂಗಾರ್, ನರಸಿಂಹಾಚಾರ್ ಎಂಬ ಇಬ್ಬರು ಗಂಡು ಮಕ್ಕಳು ಜನಿಸಿದರು.

ಈ ಮಧ್ಯೆ ವಿದ್ಯಾಭ್ಯಾಸವನ್ನು ನ್ಯಾಷನಲ್ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಪಾಸು ಮಾಡಿದರು. ಅನಂತರ ಇಂಟರ್ ಪಾಸೂ ಮಾಡಿದರು. ಅನಂತರ ಲೋಕೋಪಯೋಗಿ ಇಲಾಖೆಯಲ್ಲಿ ಉದ್ಯೋಗಿಯಾದರು. ಅಕೌಂಟ್ಸ್ ಪರೀಕ್ಷೆ ಮಾಡಿ ಅಕೌಂಟೆಂಟ್ ಆದರು. ಅನಂತರ ಆಡಿಟರ್ ಆಗಿ ಹಲವಾರು ವರ್ಷ ಕಾರ್ಯ ನಿರ್ವಹಿಸಿ ನಿವೃತ್ತರಾದರು. ಅನಂತರ ಕೆಲವು ಕಾಲ ಶಾನುಭೋಗಿಕೆ ಮಾಡಿದ್ದುಂಟು. ಅನಂತರ 98 ವರ್ಷಗಳವರೆಗೆ ವಿಶ್ರಾಂತ ಜೀವನ ನಡೆಸಿ 9.4.1984ರಲ್ಲಿ ನಿಧನರಾದರು." ಈ ಜೀವಿತ ವಿವರಗಳನ್ನು ಸಂಗ್ರಹಿಸಿ ನಾ. ಗೀತಾಚಾರ್ಯರು ಕನ್ನಡಕ್ಕೆ ಉಪಕಾರ ಮಾಡಿದ್ದಾರೆ.

4. ಈ ಕವಿಯ ಹಾಡುಗಳನ್ನು ಸಂಗ್ರಹಿಸಿ ಒಂದು ಹೊತ್ತಿಗೆಯನ್ನು ತಂದಂತೆ ಇಲ್ಲ ಎಂಬ ವಾಗೀಶ್ವರಿ ಅವರ ಮಾತು 2003 ರ ವರೆಗೆ ನಿಜವಾಗಿತ್ತು. ಸಮಗ್ರ ದಾಸ ಸಾಹಿತ್ಯದ ಸಂಪುಟಗಳು ಹೊರಬಿದ್ದಾಗ ಅದರಲ್ಲಿ 50ನೇ ಸಂಪುಟದಲ್ಲಿ ಆಸೂರಿ ರಾಮಸ್ವಾಮಿ ದಾಸರು ರಚಿಸಿದ 447 ಕೀರ್ತನೆಗಳನ್ನು ಆಸೂರಿ ರಾಮಸ್ವಾಮಿ ಅವರ ಮಗಳು ವೇದವಲ್ಲಿ ಅವರ ಬಳಿ ಇದ್ದ ಹಸ್ತಪ್ರತಿಯಿಂದ ಗೀತಾಚಾರ್ಯರು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸಿದ್ದಾರೆ. ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಆಸೂರಿ ರಾಮಸ್ವಾಮಿದಾಸರ ಕೀರ್ತನೆಗಳ ಸಂಗ್ರಹ ಸಂಪುಟದಲ್ಲಿ ಸಾಕಷ್ಟು ಕೀರ್ತನೆಗಳು ಸೇರಿಲ್ಲ. ಬಿಟ್ಟು ಹೋಗಿವೆ. ಈ ಬಗ್ಗೆ ಅವರು "ಪ್ರಕಟಿತ ಗ್ರಂಥಗಳಲ್ಲಿ ಪುನರಾವರ್ತನೆ ಆಗದೆ ಇರಬಹುದಾದ ಇನ್ನೂ 50 ಕೀರ್ತನೆಗಳನ್ನು ಅಂದಾಜಿಸಿದರೆ ಸುಮಾರು 500 ಕೀರ್ತನೆಗಳು ಲಭ್ಯ ಎಂದು ಊಹಿಸಿದ್ದಾರೆ".

"1925ರಲ್ಲಿ ಮೈಸೂರು ಕೃಷ್ಣ ಮುದ್ರಣಾಲಯದಿಂದ ಪ್ರಕಟವಾದ ಹರಿಭಜನ ಕುಸುಮವಲ್ಲರಿಯ 2 ಭಾಗಗಳಲ್ಲಿ (41+71 ಪುಟಗಳು) ಸುಮಾರು 100 ಕೀರ್ತನೆಗಳಿರಬಹುದೆಂದು ಊಹಿಸಿದ್ದಾರೆ. ಭಜನವಲ್ಲರಿ ಎಂಬ ಅಪೂರ್ಣ ಅಚ್ಚಿನ ಪ್ರತಿ ಸಿಕ್ಕಿದ್ದು ಅದರಲ್ಲಿ 37 ಕೀರ್ತನೆಗಳು ಸಾಯಿ ಭಜನಾಸ್ತುತಿಗಳಾಗಿವೆ. ಈ ಎಲ್ಲ ಹಾಡುಗಳು ಸಮಗ್ರದಾಸ ಸಾಹಿತ್ಯ ಸಂಪುಟದಲ್ಲಿ ಸೇರಿಲ್ಲ. ಹರಿಭಜನ ಕುಸುಮವಲ್ಲರಿಯ 2 ಭಾಗಗಳೂ ಸಂಪಾದಕರಿಗೆ ಸಿಕ್ಕಿಲ್ಲ". ಎಂದು ಹೇಳುತ್ತ, ಇನ್ನೊಂದು ಕುತೂಹಲಕಾರಿ ಅಂಶವನ್ನೂ ಸಂಪಾದಕರು ಹೇಳಿದ್ದಾರೆ. (ಪುಟ. 75)

1. ಕೇಳಿದವರಿಗೆ ಕೇಳಿದಾಗ ಕೀರ್ತನೆಗಳನ್ನು ಹೇಳುತ್ತಿದ್ದರು, ಬರೆದು ಕೊಟ್ಟರು, ಬರೆಸಿಕೊಟ್ಟರು. ಅವುಗಳೆಲ್ಲವೂ ಸಂಗ್ರಹವಾಗಿಲ್ಲ.

2. ಸಾಯಿ ಭಜನ ಮಂದಿರದವರು ಇವರ ಸಾಯಿ ಭಜನಾವಳಿಯ ಕೃತಿಗಳಲ್ಲಿ ಅನೇಕವನ್ನು ಹೆಸರು – ಅಂಕಿತ ತೆಗೆದು ತಮ್ಮವಾಗಿ ಮಾಡಿಕೊಂಡಿದ್ದಾರೆ.

3. ಹರೇಕೃಷ್ಣ ಪಂಥದವರೂ ಕೆಲವು ಹಾಡುಗಳನ್ನು ಬಳಸಿಕೊಂಡಿದ್ದಾರೆ.

4. ಇವರಿದ್ದಾಗಲೇ ಇವರ ಸೋದರಮಾವ ಇವರ ಒಪ್ಪಿಗೆ ಪಡೆದೇ ಎಷ್ಟೋ ಕೃತಿಗಳನ್ನು ತಮ್ಮ ಹೆಸರಿನಲ್ಲಿ ಮಾಡಿಕೊಂಡಿದ್ದಾರೆ.

ಈ ಎಲ್ಲ ಅಂಶಗಳು ಇವರ ಕೀರ್ತನೆಗಳ ಸೊಗಸನ್ನು ಜನಪ್ರಿಯತೆಯನ್ನು ಸಾರುತ್ತವೆ. ಸಾಕಷ್ಟು ಕೀರ್ತನೆಗಳನ್ನು ರಚಿಸಿರುವುದಕ್ಕೆ ಈ ಅಂಶಗಳು ಸಾಕ್ಷಿಯಾಗಿವೆ. ಮತ್ತು ಅನೇಕರು ಮಾಂಗಿರೀಶ ಅಂಕಿತದ ಕೀರ್ತನೆಗಳನ್ನು ಕಲಿತು ಸಂಪ್ರದಾಯದ ಹಾಡುಗಳ ಮಹಿಳೆಯರು ಹಾಡುತ್ತಿದ್ದರು. ಅವುಗಳು ಯಾವಾಗ ರಚನೆಯಾಗಿ ಯಾವ ರೀತಿ ಇವರ ಕಂಠಸ್ಥವಾದವೋ ತಿಳಿಯದು. ಆದರೆ ಆ ಹಾಡುಗಳಲ್ಲಿ ಬಹುಪಾಲು ಅಪ್ರಕಟಿತ – ಅಪ್ರಸಿದ್ಧವೆನ್ನಬಹುದು. ಆದ್ದರಿಂದ ಆಸೂರಿಯವರ ಕೀರ್ತನೆಗಳು ಸಾವಿರಕ್ಕೂ ಅಧಿಕವಾಗಿವೆಯೆಂದು ಸಂಪ್ರದಾಯ, ಶಿಷ್ಯರ ಹೇಳಿಕೆಯಲ್ಲಿ ತಪ್ಪಿಲ್ಲ ಎನ್ನಿಸುತ್ತದೆ. ಸಂಪ್ರದಾಯದ ಹಾಡುಗಳ ಸಂಗ್ರಹಗಳನ್ನು ಹಾಡುಗಾರ್ತಿಯರನ್ನು ಸಮೀಕ್ಷಿಸಿದಾಗ ಈ ಸಂಪುಟದಲ್ಲಿ ಪ್ರಕಟವಾಗದೆ ಇರುವ ಹಾಡುಗಳು ಸಾಕಷ್ಟು ಸಿಗುತ್ತವೆ. ಆ ಸಮೀಕ್ಷೆ ನಡೆಯಬೇಕು. ಈ ಹಾದಿಯಲ್ಲಿ ನಡೆಸಿದ ಒಂದು ಪ್ರಯತ್ನವಾಗಿ ವಾಗೀಶ್ವರಿಶಾಸ್ತ್ರಿ ಅವರ ಸಂಪ್ರದಾಯ ಹಾಡುಗಳ ಬೃಹತ್ ಪ್ರಕಟನೆಯನ್ನು ಪರಿಶೀಲಿಸಿದಾಗ ನಾ. ಗೀತಾಚಾರ್ಯರಿಗೆ ದೊರಕದ 20 ಹಾಡುಗಳು ಮಾಂಗಿರೀಶರ ರಚನೆಗಳು ಕಣ್ಣಿಗೆ ಬಿದ್ದವು. ಅವು ಹೀಗಿವೆ:

ಸಮಗ್ರ ದಾಸಸಾಹಿತ್ಯದ ಸಂಪುಟ 35 – ಭಾಗ 2ರಲ್ಲಿ ಇಲ್ಲದ ಮಾಂಗಿರೀಶರ ಹಾಡುಗಳ ಪಟ್ಟಿ :

(ಪೂರ್ತಿ ಹಾಡುಗಳಿಗಾಗಿ ನೋಡಿ: 'ಹೃದಯ ಸಂಪುಟ' (ಸಂಪ್ರದಾಯದ ಹಾಡುಗಳು) 848 ಪುಟಗಳು, ಬೆಲೆ 80=00 ಪ್ರಕಟನೆ ವರ್ಷ 1985. ಪ್ರಕಾಶನ : ವಾಗ್ದೇವಿ ಕಲಾನಿಕೇತನ ನಂ.45, 1ನೇ ಮಹಡಿ, 1ನೇ ಮುಖ್ಯರಸ್ತೆ, ತ್ಯಾಗರಾಜನಗರ, ಬೆಂಗಳೂರು 560028)

| ಕ್ರ.ಸಂ. | ಹಾಡಿನ ಸಂಖ್ಯೆ | ಕೀರ್ತನೆ ಮೊದಲಸಾಲು | ಪುಟಸಂಖ್ಯೆ |
|---|---|---|---|
| 172 | ತೈಲವ ನೊತ್ತಿದರೆ | ಪು.114 | 2 |
| 77 | ಪರಿಮಳದೆಣ್ಣೆಯ | ಪು.117 | 3 |
| 93 | ತರುಣಿ ರುಕ್ಮಿಣಿ ತಾನು | ಪು.127 | 4 |

| | | | |
|---|---|---|---|
| 100 | ಮನದನ್ನ ತವಪಾದ | ಪು.133 | 5 |
| 103 | ಚಿಕ್ಕ ಬಾಲಕಿಯೊಳೀ | ಪು.135 | 6 |
| 108 | ಕೋಪವೇಕೆನ್ನೊಳು | ಪು.137 | 7 |
| 118 | ಇಂದಿರೆಯ ಕರವ | ಪು.143 | 8 |
| 119 | ಉಂಜಲಾಡಿದ ರಾಮಚಂದ್ರ | ಪು.144 | 9 |
| 120 | ಇರದೀವರಾಕ್ಷ ಗೋವಿಂದ | ಪು.145 | 10 |
| 129 | ಏಕದಂತನೆ ವರವ ಕರುಣಿಸು | ಪು.150 | 11 |
| 136 | ಸಾಕು ಈ ಹರಟೆ ಕಟಿಳಟಿ | ಪು.153 | 12 |
| 144 | ಶ್ರೀ ಮಣಿ | ಪು.161 | 13 |
| 162 | ಸುಖಿಯಾಗು ಭೋಗಿಯಾಗ್ಯೆ | ಪು.178 | 14 |
| 163 | ಸಂತತ ಸುಖಿಯಾಗ್ಯೆ | ಪು.179 | 15 |
| 181 | ದೃಷ್ಟಿತಾಕಿತೇ ರಂಗಾ | ಪು.207 | 16 |
| 183 | ಬಾರೋ ಮಾಧವಾ | ಪು.209 | 17 |
| 199 | ಸಕಲ ಲೋಕವಾಸ | ಪು.227 | 18 |
| 234 | ನೀರಜೋದ್ಭವಗಾರತಿಯ | ಪು.268 | 19 |
| | ಶಾಂತಗುಣಮನ್ಮನೋಕಾಂತ | ಪು.282 | |
| | ಅನುಬಂಧ) | | 20 |
| 128 | ವರವನೀಡು ಗಣಾಧೀಶ | ಪು. 150 | |

ಈ ಗ್ರಂಥದಲ್ಲಿ 22 ಮಾಂಗರೀಶ. ರಚನೆಗಳಿವೆ ಎಂದು ವಾಗೀಶ್ವರಿಶಾಸ್ತ್ರಿ ಹೇಳುತ್ತಾರೆ. ನನ್ನ ಕಣ್ಣಿಗೆ ಬಿದ್ದುದ್ದು 20 ಮಾತ್ರ.

5. "ಈತನ ಕವನಚಾತುರ್ಯವನ್ನು ಕಂಡಾಗ ಈತ ಇನ್ನೂ ಹೆಚ್ಚಿನ ಒಳ್ಳೆಯ ರಚನೆಗಳನ್ನು ಮಾಡಿರಬಹುದೆಂದು ಊಹಿಸಲು ಅವಕಾಶವಿದೆ". (ಅನುಭವ, ಪುಟ 282)

ಇದು ನಿಜ. ಇದಕ್ಕೆ ಆಸೂರಿ ರಾಮಸ್ವಾಮಿ ಅಯ್ಯಂಗಾರರು ಕೀರ್ತನೆಗಳಲ್ಲದೆ ಇತರ ಗ್ರಂಥಗಳನ್ನು ರಚಿಸಿರುವುದೇ ಸಾಕ್ಷಿ ಆಗಿದೆ. ಇದಕ್ಕೆ ಗೀತಾಚಾರ್ಯರ ಮಾತುಗಳು :

"ಶ್ರೀನಿವಾಸ ಲೀಲಾವಿಲಾಸ (1963); ಗೋಕರ್ಣಮಹಿಮಾದರ್ಶ; ಮಾರುತಿ ಭಕ್ತಿ ದರ್ಪಣ (1979); ಭರತಭಕ್ತಿ ಕಾವ್ಯ, ಶ್ರೀ ಆಳ್ವಾರರ ಚರಿತ್ರೆ, ಈ ಐದೂ ಕೃತಿಗಳು ಷಟ್ಪದಿ ಕಾವ್ಯಗಳಾಗಿವೆ. ಮಾರುತಿಭಕ್ತಿ ಸ್ತವ (9ವಾರ್ಧಕ ಷಟ್ಪದಿ ಪದ್ಯಗಳು) ಅಭಿನಂದನಾ ಪದ್ಯ ರತ್ನಮಾಲಿಕೆ (7 ವಾರ್ಧಕ ಷಟ್ಪದಿಗಳು); ಶ್ರೀ ವೆಂಕಟೇಶ್ವರ ಸುಪ್ರಭಾತ (45 ಚೌಪದಿಗಳು) ಮುಂತಾದವು ಬಿಡಿಕೃತಿಗಳಾಗಿವೆ.

1925ಕ್ಕೆ ಮುಂಚೆ ಇವರೇ ಕಟ್ಟಿದ್ದ ಕಮಲಾಕರ ಡ್ರಮಾಟಿಕ್ ಕಂಪನಿಗಾಗಿ 9 ನಾಟಕಗಳನ್ನೂ ರಚಿಸಿದ್ದಾರೆ. 1. ಪ್ರಹ್ಲಾದ ಚರಿತ್ರೆ, 2. ಕೃಷ್ಣಲೀಲಾ, 3. ಮದಾಲಸಾ, 4. ಸುಪ್ರಭಾವಿಲಾಸ (ಪ್ರಮೀಳಾರ್ಜುನ ನಾಟಕ) 5. ಕಬೀರದಾಸ 6. ಬಭ್ರುವಾಹನ, 7. ಹರಿಮಾಯಾ, 8. ಗೀತ ಕುಸುಮಾಕರ, 9. ಸಂಗೀತ ಕಲ್ಯಾಣ ಪಾರಿಜಾತ. ಹರಿಸ್ತುತಿಗಳು, ಭಜನಾವಳಿ, ಭಜನವಲ್ಲರಿ, 3 ಹಾಡುಗಳು ಒಟ್ಟನಲ್ಲಿ 17 ಕೃತಿಗಳು ಇವರ ಹೆಸರಿನಲ್ಲಿ ದೊರೆಯುತ್ತವೆ". ಕೀರ್ತನೆಗಳು, ನಾಟಕಗಳು, ಕಾವ್ಯಗಳು ಈ ಮೂರು ಸಾಹಿತ್ಯ ಪ್ರಕಾರದಲ್ಲಿ ವಿಶಿಷ್ಟ ಸೇವೆಯನ್ನು ಕನ್ನಡಕ್ಕೆ ಸಲ್ಲಿಸಿದ್ದಾರೆ ಎಂದು ಇದರಿಂದ ವಿದಿತವಾಗುತ್ತದೆ. ಈ ಎಲ್ಲ ಸಾಹಿತ್ಯದ ವಿಸ್ತೃತ ವಿಮರ್ಶೆ ಆಗಬೇಕಾಗಿದೆ.

6. ಇವರ ಕೀರ್ತನೆಗಳಲ್ಲಿ ಮತ್ತು ಸಂಪ್ರದಾಯದ ಹಾಡುಗಳಲ್ಲಿ ವಾಗೀಶ್ವರಿ ಅವರು ಹೇಳುವ ಮಾತು ಸರಿ. "ನಮ್ಮ ಹಳೆಯ ಮೈಸೂರುಪ್ರಾಂತದ ಆಚಾರ ವಿಚಾರಗಳನ್ನು ಬಹುವಾಗಿ ಪ್ರತಿಬಿಂಬಿಸುತ್ತದೆ. ಶಾಸ್ತ್ರಗಳ ಉದ್ದೇಶವೆಲ್ಲಾ ಒಂದೇ ಆದರೂ ಆಚಾರ ಸಂಪ್ರದಾಯ ನಡವಳಿಕೆಗಳಲ್ಲಿ ದೇಶಾಚಾರವನ್ನು (ಶ್ರೀವೈಷ್ಣವ ಸಂಪ್ರದಾಯವನ್ನು) ತಿಳಿಸುತ್ತದೆ".

7. ಮಾಂಗಿರೀಶ ಅಂಕಿತ ವಿಚಾರ ಈ ಬಗ್ಗೆ ವಾಗೀಶ್ವರಿ ಮತ್ತು ಗೀತಾಚಾರ್ಯರ ವಿಚಾರಧಾರೆಯಲ್ಲಿ ಸ್ವಲ್ಪ ಭಿನ್ನತೆಯಿದೆ.

ಗೀತಾಚಾರ್ಯರು (ಪು.85 ಪ್ರಸ್ತಾವನೆ) – "ಆಸೂರಿಯವರು ತಮ್ಮ ಮನೆದೈವ ಮಾವಿನಕೆರೆ ರಂಗನಾಥನ ಅಂಕಿತದಲ್ಲಿ ಮಾಂಗಿರೀಶ" 'ಮಾಂಗಿರಿರಂಗ' ಎಂಬ ಮುದ್ರಿಕೆಗಳನ್ನು ಸ್ವೀಕರಿಸಿ ಕೀರ್ತನೆಗಳನ್ನು ರಚಿಸಿದ್ದಾರೆ. ಇವರ ಎಲ್ಲ ಕೃತಿಗಳಲ್ಲೂ ಈ 'ಮಾಂಗಿರಿ'ಯ ಮುದ್ರೆ ಇದ್ದೇ ಇರುತ್ತದೆ. ಆದರೂ ಕೆಲವು ಕೃತಿಗಳಲ್ಲಿ ರಾಮದಾಸ ಅಂಕಿತವನ್ನೂ ಬಳಸಿದ್ದಾರೆ. (ಈ ಮಾತಿಗೆ ಆಧಾರ ಆಸೂರಿ ಅವರ ಮಗಳ ಹೇಳಿಕೆ) ಆದ್ದರಿಂದ 'ಮಾಂಗಿರೀಶ ರಾಮದಾಸ' ಅಂಕಿತವಿರುವ ಎಲ್ಲ ಕೀರ್ತನೆಗಳೂ ಆಸೂರಿ ರಾಮಸ್ವಾಮಿ ಅಯ್ಯಂಗಾರರ ಕೃತಿಗಳು ಎಂದು ಸ್ವೀಕರಿಸಲಾಗಿದೆ'.

ವಾಗೀಶ್ವರೀ ಶಾಸ್ತ್ರಿ (ಅನುಬಂಧ ಪುಟ 281–282) ಪದ್ಯ – "ಮಾಂಗಿರೀಶ ಅಂಕಿತದ ಕವಿಯೇ ಬೇರೆ ಮಾವಿನಕೆರೆರಂಗ ಎಂಬ ಅಂಕಿತವೇ ಬೇರೆ. ಈ ಗ್ರಂಥದಲ್ಲಿ (ಹೃದಯ ಸಂಪುಟ ವಾಗೀಶ್ವರೀ ಶಾಸ್ತ್ರಿ ಅವರ ಸಂಪ್ರದಾಯ ಹಾಡುಗಳ ಪುಸ್ತಕ) ಇರುವ 22 ರಚನೆಗಳಲ್ಲಿ ಮಾಂಗಿರಿನಿವಾಸ, ಮಾಂಗಿರಿವಾಸ, ಮಾಂಗಿರಿರಂಗ ಇತ್ಯಾದಿ ಅಂಕಿತಗಳಿವೆ. ಮಾವಿನಕೆರೆರಂಗ ಎಂದು ಯಾವ ರಚನೆಯಲ್ಲೂ ಇಲ್ಲ. ಇದೂ ಅಲ್ಲದೆ ಮಾವಿನಕೆರೆರಂಗ ಎಂಬ ಅಂಕಿತದ ಹಾಡು ಮಾಂಗಿರೀಶರ ಶೈಲಿಗಿಂತ ಭಿನ್ನವಾಗಿದೆ. ಆದ್ದರಿಂದ ಮಾಂಗಿರೀಶ ಅಂಕಿತ ಕವಿಯು ಮಾವಿನಕೆರೆರಂಗ ಎಂಬ

ಅಂಕಿತವನ್ನು ಬಳಸಿಲ್ಲ".

ಈ ಇಬ್ಬರ ವಿಚಾರದಲ್ಲಿ 'ಮಾಂಗಿರೀಶ'ದ ಬಗ್ಗೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಮಾಂಗಿರೀಶರು ಯಾರು ಎಂಬುದು ನಾ. ಗೀತಾಚಾರ್ಯರಿಗೆ ತಿಳಿದಿದೆ. ವಾಗೀಶ್ವರಿ ಶಾಸ್ತ್ರಿಗಳಿಗೆ ತಿಳಿದಿಲ್ಲ.

'ಮಾವಿನಕೆರೆರಂಗಯ್ಯ' ಎಂಬ ಅಂಕಿತವನ್ನು ಕನ್ನಡದಲ್ಲಿ ಆಧುನಿಕ ವಚನಗಳನ್ನು ರಚಿಸಿದ್ದ ಎಸ್.ವಿ. ರಂಗಣ್ಣನವರು ತಮ್ಮ ವಚನಗಳಿಗೆ ಬಳಸಿದ್ದಾರೆ. ಆಸೂರಿ ಅವರನ್ನು ಬಿಟ್ಟರೆ ಮತ್ತಾರೂ ಮಾವಿನಕೆರೆರಂಗ ಅಂಕಿತವನ್ನು ಬಳಸಿದಂತೆ ಕಾಣುವುದಿಲ್ಲ.

**ಆಸೂರಿ ರಾಮಸ್ವಾಮಿ ದಾಸರ ಕೃತಿಗಳಲ್ಲಿ ಅಂಕಿತ ವಿಚಾರ**

ವಾಗೀಶ್ವರಿಶಾಸ್ತ್ರಿ ಅವರು ಆಸೂರಿ ಅವರ ಅಂಕಿತದ ಬಗ್ಗೆ ಮಾಂಗಿರಿ ಪದಕ್ಕೆ ಉತ್ತರ ಪ್ರತ್ಯಯಗಳು ಸೇರಿ ಮಾಂಗಿರೀಶ, ಮಾಂಗಿರಿಯರಸ, ಮಾಂಗಿರಿನಿವಾಸ, ಮಾಂಗಿರಿವಾಸ, ಮಾಂಗಿರಿರಂಗ ಇತ್ಯಾದಿ ಅಂಕಿತಗಳನ್ನು ಕವಿ ಬಳಸಿದ್ದರೂ ಅವೆಲ್ಲಾ ಒಬ್ಬನೇ ಕವಿಯದು ಎಂದು ಒಪ್ಪುತ್ತಾರೆ. ಆದರೆ 'ಮಾವಿನಕೆರೆರಂಗ' ಎಂಬ ಅಂಕಿತ ಮಾತ್ರ ಬೇರೆ ಕವಿಯದು ಎನ್ನುತ್ತಾರೆ. ಇದಕ್ಕೆ ಅವರು ಕೊಡುವ ಕಾರಣವೆಂದರೆ ಈ ಅಂಕಿತವಿರುವ ಕೀರ್ತನೆಯ ಶೈಲಿ ಭಿನ್ನವಾಗಿದೆ ಮತ್ತು ತಮಗೆ ದೊರೆತ ಯಾವ ರಚನೆಯಲ್ಲೂ ಇಲ್ಲ ಎಂದು. ಇದು ಅರ್ಥವಿಲ್ಲದ ವಾದ. ಕವಿಯ ಪೂರ್ಣ ಕೀರ್ತನೆಗಳು ಸಿಕ್ಕಿಲ್ಲ ಎಂದು ಒಪ್ಪಿಕೊಂಡು ಈ ವಾದ ಮುಂದಿಟ್ಟಿರುವುದು ಸರಿಯಲ್ಲ. ಈಗ ಅವರ ಬಹುಪಾಲು ಕೀರ್ತನೆಗಳು ಪ್ರಕಟವಾಗಿವೆ. ಅದರಲ್ಲಿ ಮಾಂಗಿರೀಶ ಅಂಕಿತದ ಆಸೂರಿ ಅವರು ಮಾಂಗಿರಿ ಪದಕ್ಕೆ ಪೂರ್ವ ಪ್ರತ್ಯಯಪದ ಉತ್ತರ ಪ್ರತ್ಯಯಪದಗಳನ್ನು ಸೇರಿಸಿ ಹತ್ತಾರು ಬಗೆಯಲ್ಲಿ ಅಂಕಿತವನ್ನು ಬಳಸಿದ್ದಾರೆ. ಈ ಪೈಕಿ ಮಾವಿನಕೆರೆರಂಗ ಸಹ ಒಂದಾಗಿದೆ.

ಕೀರ್ತನೆ 276, 357, 370, 213, 238, 258, 269 ಇವುಗಳಲ್ಲಿ ಮಾವಿನಕೆರೆರಂಗ ಎಂಬ ಅಂಕಿತ ಬಳಸಿದ್ದಾರೆ. ಈ ಕೀರ್ತನೆಗಳು ಅವರು ಹೇಳಿ ಬರೆಸಿದ ಅಥವಾ ಕೇಳಿ ಬರೆದ ಹಸ್ತಪ್ರತಿಯಲ್ಲಿರುವುದರಿಂದ ಅವರದೇ ಆಗಿದೆ ಮತ್ತು ಈ ಕೀರ್ತನೆಗಳ ಶೈಲಿ ವಾಗೀಶ್ವರಿಶಾಸ್ತ್ರಿ ಅವರು ಹೇಳುವ ಮಾವಿನಕೆರೆರಂಗ ಅಂಕಿತದ ಕೀರ್ತನೆ ಶೈಲಿ ಭಿನ್ನವಾಗೇನೂ ಇಲ್ಲ. ಆದ್ದರಿಂದ ವಾಗೀಶ್ವರಿ ಅವರ ನಿರ್ಧಾರ ಸರಿಯಿಲ್ಲ. ಮಾವಿನಕೆರೆರಂಗ ಅಂಕಿತವೂ ಮಾಂಗಿರೀಶ ಅಂಕಿತದ ಕೀರ್ತನೆಕಾರರಾದ ಆಸೂರಿ ರಾಮಸ್ವಾಮಿ ಅಯ್ಯಂಗಾರ್‌ರ ರಚನೆಗಳೇ ಆಗಿವೆ.

ಇನ್ನು ಗೀತಾಚಾರ್ಯರು ಈ ಅಂಕಿತದ ಬಗ್ಗೆ ಹೇಳಿದ ಸಂಗತಿಗಳಿಗೆ ಪೂರಕವಾಗಿ ಮತ್ತೆ ಕೆಲವು ಸಂಗತಿಗಳನ್ನು ಇಲ್ಲಿ ಹೇಳಬಹುದಾಗಿದೆ.

ಮೊದಲನೆಯದಾಗಿ ಗೀತಾಚಾರ್ಯರು ಸಂಗ್ರಹಿಸಿರುವ ಕೀರ್ತನೆಗಳಲ್ಲಿ ಅಂಕಿತವಿಲ್ಲದ ಕೀರ್ತನೆಗಳಿವೆ. (ನೋಡಿ ಕೀರ್ತನೆ ಸಂಖ್ಯೆ 20, 167, 169, 170, 203, 308, 309, 344) ಇವುಗಳ ರಚನಾವೈಖರಿ ಕಂಡರೆ ಇವು ಆಸೂರಿ ಅವರು ರಚಿಸಿದ ನಾಟಕಗಳಲ್ಲಿನ ಹಾಡುಗಳಂತೆಯೇ ತೋರುತ್ತಿವೆ.

ಎರಡನೆಯದಾಗಿ ಕೀರ್ತನೆಗಳಲ್ಲಿ ಸಾಮಾನ್ಯವಾಗಿ ಅಂಕಿತ ಕೊನೆಯ ಸಾಲಿನಲ್ಲಿ ಅಥವಾ ಕೊನೆಯ ಚರಣದಲ್ಲಿ ಬರುತ್ತದೆ. ಆದರೆ ಆಸೂರಿಯವರಲ್ಲಿ ಎಲ್ಲಾ ಕಡೆಯೂ ಈ ನಿಯಮ ಕಂಡು ಬರುವುದಿಲ್ಲ. ಒಟ್ಟಿನಲ್ಲಿ ಅಂಕಿತ ಬಳಸುತ್ತಾರೆಯೇ ಹೊರತು ಅದನ್ನು ಕೊನೆಯಲ್ಲಿಯೇ ಬಳಸಬೇಕೆಂಬ ನಿಯಮ ಇಟ್ಟುಕೊಂಡಿಲ್ಲ. ಉದಾಹರಣೆಗೆ ಪಲ್ಲವಿಯಲ್ಲಿ ಅಂಕಿತ ಬಳಸುತ್ತಾರೆ (ಕೀ.152, ಕೀ.354, ಕೀ.380, ಕೀ.416, ಕೀ.261) ನೋಡಿ. ಅನುಪಲ್ಲವಿಯಲ್ಲಿ ಅಂಕಿತ ಬಳಸಿದ್ದಾರೆ. (ಕೀ.129) ಪಲ್ಲವಿ ಅನುಪಲ್ಲವಿ ಎರಡರಲ್ಲೂ ಅಂಕಿತ ಬಳಸಿರುವುದುಂಟು (ಕೀ.229) ಮಧ್ಯದ ಚರಣಗಳಲ್ಲಿ ಅಂಕಿತ ಬಳಸಿದ್ದಾರೆ. (ಕೀ.230 ಮತ್ತು 231 ಕೀ.238, 385) ರಾಮದಾಸ ಮತ್ತು ಮಾಂಗಿರೀಶ ಎರಡೂ ಅಂಕಿತಗಳನ್ನು ಒಂದೇ ಕೀರ್ತನೆಯಲ್ಲಿ ಬಳಸಿರುವುದೂ ಉಂಟು (ಕೀ.231, ಕೀ.238) ಹೀಗೆ ತಮ್ಮದೇ ಆದ ಪದ್ಧತಿಯಲ್ಲಿ ಆಸೂರಿಯವರು ಅಂಕಿತ ಬಳಸಿರುವುದು ಒಂದು ವಿಶೇಷವಾಗಿದೆ.

ಮೂರನೆಯದಾಗಿ ಇವರ ಅಂಕಿತ 'ಮಾಂಗಿರಿ' ಎಂದು ಹೇಳಬಹುದು. ಮಾಂಗಿರೀಶ, ಮಾಂಗಿರಿರಂಗ ಎಂಬ ಅಂಕಿತ ರೂಪಗಳು ಅತಿ ಹೆಚ್ಚು ಬಾರಿ ಬಳಕೆ ಆಗಿದೆ. ಇವು ಜನಪ್ರಿಯ ಅಂಕಿತಗಳಾಗಿವೆ. ಮಾಂಗಿರಿ ಎಂದಷ್ಟೇ ಬಳಸಿದ ಕೀರ್ತನೆಗಳು ಸಾಕಷ್ಟಿವೆ. 23 ಕೀರ್ತನೆಗಳಿವೆ. (ಕೀ.2, 5, 6, 19, 21, 23, 27, 29, 32, 33, 37, 38, 49, 78, 89, 133, 144, 172, 175, 313, 315, 318, 319 ನೋಡಿ). ಮಾಂಗಿರೀಶ ಎಂಬ ಅಂಕಿತ 73ಕ್ಕಿಂತ ಹೆಚ್ಚು ಕೀರ್ತನೆಗಳಲ್ಲಿ ಬಳಕೆ ಆಗಿದ್ದರೆ ಮಾಂಗಿರಿರಂಗ 120ಕ್ಕಿಂತ ಹೆಚ್ಚು ಬಾರಿ ಬಳಕೆ ಆಗಿದೆ.

ಇನ್ನು ರಾಮದಾಸ ಅಂಕಿತ (444) ರಾಮದಾಸನುತ (290, 55, 403) ರಾಮದಾಸಜೀವ (288) ರಾಮದಾಸಾರ್ಚಿತ (4, 8, 231, 239, 267, 279, 331, 418) ರಾಮದಾಸಸನ್ನುತ (123), ರಾಮದಾಸವಿನುತ (361) ಬಾಲರಾಮದಾಸನುತ (338) ಹೀಗೆ 15ಕ್ಕಿಂತ ಹೆಚ್ಚು ಬಾರಿ ಕೀರ್ತನೆಗಳಲ್ಲಿ ರಾಮದಾಸ ಅಂಕಿತ ಬಳಕೆ ಆಗಿದೆ. ಇವರ ಕೀರ್ತನೆಗಳ ಪುಸ್ತಕದಲ್ಲೇ ಈ ಕೀರ್ತನೆಗಳಿರುವುದರಿಂದ ಇವು ಇವರದೇ ಆಗಿದೆ.

ಮಾಂಗಿರಿ ಅಂಕಿತಕ್ಕೆ ಉತ್ತರ ಪದವಾಗಿ ವಿಶೇಷ್ಯಗಳನ್ನು ಸೇರಿಸಿರುವ ಅಂಕಿತರೂಪಗಳು ಹತ್ತಾರಿವೆ. ಬಹುಶಃ ಇಷ್ಟೊಂದು ಅಂಕಿತರೂಪಗಳನ್ನು ಬಳಸಿರುವ

ಶ್ರೀವೈಷ್ಣವ ಹರಿದಾಸರು ಇನ್ನೊಬ್ಬರಿಲ್ಲ ಎನ್ನಬಹುದು. ಇಲ್ಲಿನ ಅಂಕಿತದ ಸಮಾಸಪದದ ವಿವಿಧ ರೂಪಗಳು ಅಚ್ಚರಿ ಉಂಟು ಮಾಡುತ್ತವೆ.

ಮಾಂಗಿರೀಶ್ವರ (342), ಮಾಂಗಿರಿವಿಜಯರಂಗ (345), ಮಾಂಗಿರಿಯಭಕ್ತ (369), ಮಾಂಗಿರಿಯ ಅಡಿ (366), ಮಾಂಗಿರಿರಂಗರತ್ನ (382), ಮಾಂಗಿರಿಯಣ್ಣ (383), ಮಾಂಗಿರಿರಂಗೇಶ (159), ಮಾಂಗಿರೀಂದ್ರ (34, 147), ಮಾಂಗಿರಿ ನಿವಾಸ (54, 82, 92, 250, 255, 435) ಮಾಂಗಿರಿವಾಸ (15, 31, 113, 118, 184, 200, 204, 210, 278, 280, 284, 292), ಮಾಂಗಿರಿ ರಂಗ ವಿಠಲ (140), ಮಾಂಗಿರಿ ರಂಗೇಶ (159), ಮಾಂಗಿರಿನಾಥ (9, 11, 17, 24, 48, 74, 77, 85. 87, 102, 126, 166, 183, 353, 408), ಮಾಂಗಿರಿನಿಕೇತನ (7, ಮಾಂಗಿರಿ ರಂಗಧಾಮ (76, 81, 289), ಮಾಂಗಿರಿವರನರಸಿಂಹ (94), ಮಾಂಗಿರಿ ವಿಹಾರಿ (95), ಮಾಂಗಿರಿಶೃಂಗ ಸ್ಮಿತ (132), ಮಾಂಗಿರಿ ಶೃಂಗವಿಹಾರಿ (97), ಮಾಂಗಿರಿಶೃಂಗವಿರಾಜಿತ (176), ಮಾಂಗಿರಿ ಶೃಂಗನಿವಾಸ (436), ಮಾಂಗಿರಿ ಶೃಂಗಾಭರಣ (171), ಮಾಂಗಿರಿಶಿಖರ (67), ಮಾಂಗಿರಿ ಸದನ (441), ಮಾಂಗಿರಿರಾಮ 68 93, ಮಾಂಗಿರಿ ಪುರವಾಸ (363, 378), ಮಾಂಗಿರಿ ಗೋಪಾಲ (69), ಮಾಂಗಿರಿ ಮಂದಿರ 63 79, ಮಾಂಗಿರಿ ನಿಲಯ 61 73 112 139, 281, 437, 440), ಮಾಂಗಿರಿ ವರಮಿಹಿರ (392), ಮಾಂಗಿರಿನಾಯಕ (57, 98 124, 130, 135, 249, 431, 432, 434), ಮಾಂಗಿರಿಯರಸ (52, 244, 268, 321, 323, 401, 438), ಮಾಂಗಿರಿಧಾಮ (45, 56, 86, 105, 129, 137, 142, 191, 209), ಮಾಂಗಿರಿ ವರಧಾಮಾ (70, 91, 391), ಮಾಂಗಿರಿಪತಿ (39, 50, 58, 62, 100, 108, 177, 178, 190, 286, 298, 336, 350, 362 385, 404), ಮಾಂಗಿರಿವರ (35, 43, 72, 111, 116, 134 141, 157, 187, 189, 301 439), ಮಾಂಗಿರಿಶ್ರಾವರ (107), ಮಾಂಗಿರಿವರಬಾಲಾ (109), ಮಾಂಗಿರಿಯೊಡೆಯಾ (114, 272, 291, 380), ಮಾಂಗಿರಿಯೊಡೆಯನ ರಾಣಿ (146), ಮಾಂಗಿರಿಯ ಗೋವಿಂದ (260, 307, 337), ಮಾಂಗಿರಿ ವರದಾ (121, 165, 208), ಮಾಂಗಿರಿವರತೋಕ್ಷಿಣಿ (188), ಮಾಂಗಿರಿರಂಗಪ್ರೀತೆ (145), ಮಾಂಗಿರಿಯಂದಿರೆ (149), ಮಾಂಗಿರಿಹರಿ (162), ಮಾಂಗಿರಿಶ್ರಾವರ (107), ಮಾಂಗಿರಿರಂಗಾಖ್ಯ (127), ಮಾಂಗಿರಿಯ ಕೋದಂಡಧರ (388), ಮಾಂಗಿರಿಯ ಮಾಧವ (390).

ಕೆಲವು ಸಂದರ್ಭಗಳಲ್ಲಿ ಪೂರ್ವಪದಗಳನ್ನು ವಿಶೇಷಣವಾಗಿ ಬಳಸಿರುವುದುಂಟು. ವರಮಾಂಗಿರಿಬಾಲಾ (125), ಶ್ರೀಮಾಂಗಿರಿ (412, 402, 405), ಶ್ರೀಮಾಂಗಿರಿ ರಂಗರತ್ನ (382), ಮೂಲ ಮಾಂಗಿರೀಶ (12). ಹೀಗೆ ವೈವಿಧ್ಯ ಪೂರ್ಣ

ಉತ್ತರಪದಗಳಿಂದ ಒಡಗೂಡಿದ ಮಾಂಗಿರಿ ಅಂಕಿತ ಬಳಸಿದ್ದಾರೆ. ಈ ಎಲ್ಲ ಅಂಕಿತ ರೂಪಗಳನ್ನು ಕಂಡಾಗ ಮಾಂಗಿರಿ ಎಂಬುದೇ ಅವರ ಅಂಕಿತ ಎನ್ನಬಹುದು. ಈ ದೃಷ್ಟಿಯಿಂದ "ಇವರ ಎಲ್ಲ ಕೃತಿಗಳಲ್ಲೂ ಮಾಂಗಿರಿಯ ಮುದ್ರೆ ಇದ್ದೇ ಇರುತ್ತದೆ" ಎಂಬ ಮಾತು ಅರ್ಥಪೂರ್ಣವಾಗಿದೆ.

ಗಮಕಿಗಳಲ್ಲಿ ಇವರ ಷಟ್ಪದೀಕಾವ್ಯ, ಗೃಹಿಣಿಯರಲ್ಲಿ ಸಂಪ್ರದಾಯದ ಹಾಡುಗಳು, ಭಜನಾಮಂಡಳಿ, ಹರಿದಾಸರಲ್ಲಿ ಕೀರ್ತನೆಗಳು ನಾಟಕ ಪ್ರಿಯರಿಗೆ ಇವರ ನಾಟಕಗಳು ಜನಪ್ರಿಯವಾಗಿದ್ದು ಇತ್ತೀಚಿನವರೆಗೂ ನಮ್ಮ ನಡುವೆ ಇದ್ದವರಾದರೂ ಅವರಿಗೆ ಸಾಕಷ್ಟು ಮನ್ನಣೆ ಸಿಗಲಿಲ್ಲವೆಂದೇ ಹೇಳಬೇಕು. ಅವರ ಸಮಗ್ರ ಕೃತಿಗಳು ಪ್ರಕಟನೆ ಆಗುವುದು ಅಗತ್ಯವಿದೆ. ಈಗ ಪ್ರಕಟವಾಗಿರುವ ಅವರ ಕೀರ್ತನೆಗಳ ಸಂಪುಟ ನಿಜಕ್ಕೂ ದಾಸ ಸಾಹಿತ್ಯಕ್ಕೆ ಒಂದು ಶ್ರೇಷ್ಠ ಕೊಡುಗೆ ಆಗಿದೆ. ವಾಗೀಶ್ವರಿ ಅಂಥವರ ಅನುಮಾನಗಳನ್ನು ಊಹೆಗಳನ್ನು ನಿವಾರಿಸಲು ನೆರವಾಗುವ ಆಕರ ಗ್ರಂಥವಾಗಿದೆ.

* * *

# 3. ಗುಲ್ಬರ್ಗಾ ತಾಲೂಕಿನ ಸ್ಥಳನಾಮಗಳು : ಭಾಷಿಕ, ಸಾಂಸ್ಕೃತಿಕ ಅಧ್ಯಯನ

– ಡಾ॥ ವ್ಹಿ.ಜಿ. ಪೂಜಾರ

ಗುಲ್ಬರ್ಗಾ ನಗರ ಜಿಲ್ಲಾಸ್ಥಳವೂ, ವಿಭಾಗ ಸ್ಥಳವೂ ಆಗಿದ್ದು, ಭಾಷಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ಕರ್ನಾಟಕದಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಸಾಹಿತ್ಯಿಕ ದೃಷ್ಟಿಯಿಂದಲೂ ಇದು ಕ್ರಿ.ಶ. 9ನೆಯ ಶತಮಾನದಿಂದ ತುಂಬ ಮಹತ್ವ ಪಡೆಯುತ್ತ ಬಂದಿದೆ. ರಾಷ್ಟ್ರಕೂಟ ನೃಪತುಂಗ ದೊರೆ ಈ ಜಿಲ್ಲೆಯ ಮಳಖೇಡದಲ್ಲಿದ್ದು, ಸಾಹಿತ್ಯ ಸಂವರ್ಧನೆಗೆ ಶ್ರಮಿಸಿದುದು ಎಲ್ಲರಿಗೂ ತಿಳಿದ ವಿಷಯವೇ. 14ನೆಯ ಶತಮಾನದಿಂದೀಚೆ ಈ ಭಾಗವು ಮುಸ್ಲಿಂ ರಾಜರ ಆಡಳಿತಕ್ಕೊಳಪಟ್ಟಿತು. ಇದರ ಪರಿಣಾಮವಾಗಿ ಆ ಸಂಸ್ಕೃತಿಯ ಪ್ರಭಾವ ಈ ಭಾಗದ ಮೇಲಾಯಿತು. ಉರ್ದು ಭಾಷೆಯ ಪ್ರಭಾವವಂತೂ ಈ ಭಾಗದ ಮೇಲೆ ಅತ್ಯಂತ ಗಾಢವಾಗಿ ಆಯಿತು. ಅಚ್ಚಗನ್ನಡ ಭಾಗವಾದ ಇದು ನಿಜಾಮನ ಆಡಳಿತಕ್ಕೊಳಪಟ್ಟಾಗಲಂತೂ ಉರ್ದುವನ್ನೇ ತನ್ನ ಆಡಳಿತ ಭಾಷೆಯನ್ನಾಗಿ ಸ್ವೀಕರಿಸಿತ್ತು. ಇಂದಿಗೂ ಇಲ್ಲಿನ ಜನ ದೈನಂದಿನ ಮಾತುಗಳಲ್ಲಿ, 'ಕಿಲಾ, ಸವಾರಿ, ಜಲಸಾ, ದೋಬಿ, ರಜಾಯಿ, ದುಕಾನ್, ಖಾರಿಖ್, ಹಿತಮತ್, ನಜರ್, ಕಿರಾಯಾ, ತೇಜ; ಬತಾಯಿ, ಖರಾಬ್, ದುನಿಯಾದ್, ಗುಂಜಾಯಿಸ್, ಮುಷ್ಕಿಲ್, ಮಜಬೂರ್, ಷಿಕಾಯತ್'[1] ಮುಂತಾದ ಉರ್ದುಪದಗಳನ್ನು ಹೇರಳವಾಗಿ ಬಳಸುವುದುಂಟು ಇದಕ್ಕೆ 'ಕಾರಣವೆಂದರೆ ಸುಮಾರು 600 ವರ್ಷಗಳ ಸುದೀರ್ಘ ಅವಧಿಯ ಮುಸ್ಲಿಂ ಅರಸರ ಆಳ್ವಿಕೆ'[2] . ಉರ್ದುವಿನ ಇಂಥ ಅನೇಕ ಶಬ್ದಗಳು ನಮಗೆ ಅರಿವಿಲ್ಲದಂತೆ ನಮ್ಮ ಭಾಷಾಕೋಶದಲ್ಲಿ ಸೇರಿಹೋಗಿವೆ. ಇದು ಸಹಜ ಮತ್ತು ಇದು ಜೀವಂತವಾದ ಎಲ್ಲ ಭಾಷೆಗಳಲ್ಲೂ ನಡೆಯುವ ಪ್ರಕ್ರಿಯೆಯಾಗಿ ಉರ್ದುವಿನ ಪ್ರಭಾವ ಕೇವಲ ಈ ಭಾಗದ ಜನತೆಯ ಸ್ಥಳನಾಮಗಳ ಮೇಲೂ ಆದುದನ್ನು ಗುರುತಿಸಬಹುದು. ಇಲ್ಲಿನ ಕೆಲವು ಊರುಗಳ ಹೆಸರುಗಳನ್ನು ಹೊಂದಿ ಇಂದಿಗೂ ಪ್ರಚಲಿತದಲ್ಲಿರುವುದನ್ನು ಕಾಣುವೆವು. ಈ ಭಾಗದ ಭಾಷೆಯ ಬಗೆಗೆ ನಡೆದಷ್ಟು ಅಧ್ಯಯನ ಸ್ಥಳನಾಮಗಳ ಮೇಲೆ ನಡೆದಿಲ್ಲ. ಇದನ್ನು ಗಮನಿಸಿ. ಗುಲಬರ್ಗಾ ತಾಲೂಕಿನ ಸ್ಥಳನಾಮಗಳನ್ನು ಭಾಷಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ನೋಡುವ ಅಧ್ಯಯನ ಮಾಡುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಗುಲಬರ್ಗಾ ತಾಲೂಕಿನ ಸ್ಥಳನಾಮಗಳನ್ನು ನೋಡುವುದಕ್ಕಿಂತ ಮೊದಲು ಸ್ಥಳನಾಮ ಎಂದರೇನು? ಈ ಅಧ್ಯಯನದ ಕ್ರಮ ಹಾಗೂ ಮಹತ್ವ ಈ ಅಂಶಗಳನ್ನಿಲ್ಲಿ

ಸ್ವಲ್ಪದರಲ್ಲಿ ನೋಡಬಹುದು. 'ಸ್ಥಳನಾಮ'ವೆಂದರೆ ಊರ ಹೆಸರುಗಳು. ಗ್ರೀಕ್ ಭಾಷೆಯಲ್ಲಿ 'ಟೋಪೋಸ' ಎಂದರೆ ಸ್ಥಳಗಳು. 'ನೋಮೋಸ' ಎಂದರೆ ಹೆಸರುಗಳು. ಆದ್ದರಿಂದ ಸ್ಥಳಗಳ ಹೆಸರುಗಳನ್ನು ಅಧ್ಯಯನ ಮಾಡುವ ವಿಜ್ಞಾನಕ್ಕೆ 'ಟೋಪೋನೋಮಿ' ಎಂದು ಕರೆಯಲಾಗಿದೆ. 'ಟೋಪೋಸ' ಮೂಲತಃ ಭೂವಿವರವನ್ನು ಸೂಚಿಸುವ ಅರ್ಥ ಹೊಂದಿದ್ದರೂ, ಇಲ್ಲಿ ಪಾರಿಭಾಷಿಕವಾಗಿ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ವೈಲಕ್ಷಣಗಳೆರಡನ್ನೂ ಇದು ಒಳಗೊಂಡಿದೆ. ಭಾರತದಲ್ಲಿ ಇಂಥ ಭೌಗೋಲಿಕ ನಾಮ ಅಥವಾ ದೇಶನಾಮಗಳಿಗೆ ಪ್ರಾದೇಶಿಕ ಭಾಷೆಗಳಲ್ಲಿ ಗ್ರಾಮನಾಮ (ಹಿಂದುಸ್ಥಾನಿ) ಊರ್ಲಪೇರ್ಲು (ತೆಲುಗು), ಇಡಪ್ಪೆಯ ರಾಯವು (ತಮಿಳು) ಊರ ಹೆಸರು (ಕನ್ನಡ) ಮುಂತಾದ ಪರ್ಯಾಯಪದಗಳನ್ನು ಬಳಸಲಾಗಿದೆ. ಊರು, ಗ್ರಾಮ, ದೇಶ ಮುಂತಾದ ಪದಗಳಿಗೆ ಪಾರಂಪರಿಕವಾದ ಸೀಮಿತ ಅರ್ಥಗಳಿರುವುದರಿಂದ ಉಳಿದ ಸಾಮುದಾಯಿಕ ಮಾನವ ನೆಲೆಗಳ ಅರ್ಥವನ್ನು ಅವು ಒಳಗೊಳ್ಳುವುವು. ಆದುದರಿಂದ ಇಲ್ಲಿ ಹೊಸದಾಗಿ ಬಳಕೆಗೆ ಬಂದಿರುವ ಸ್ಥಳನಾಮವೆಂಬ ಪದವನ್ನು ಹೆಚ್ಚು ಸಮರ್ಪಕವೆಂದು ಬಳಸಬಹುದು. ಸ್ಥಳನಾಮಗಳು ಮಾನವರ ಸಣ್ಣ ನೆಲೆಯಿಂದ ಆರಂಭಿಸಿ ಅತಿದೊಡ್ಡ ಮಾನವ ವಸಾಹತು ನೆಲೆಗಳ ಅರ್ಥವನ್ನು ಹೊಂದಿವೆ.

ಸ್ಥಳನಾಮಗಳನ್ನು ಎರಡು ರೀತಿಯಲ್ಲಿ ಅರ್ಥಯಿಸಬಹುದಾಗಿದೆ. ಒಂದು, ಭೌಗೋಳಿಕ ವೈಲಕ್ಷಣ್ಯವನ್ನು ಸೂಚಿಸುವ ಸಾಮಾನ್ಯಾರ್ಥ. ಈ ಬಗೆಯ ಹೆಸರುಗಳು ಹೆಚ್ಚಾಗಿ ರೂಢನಾಮಗಳ ಸ್ವರೂಪದಲ್ಲಿ ಮಾತ್ರ ಉಳಿಯುತ್ತವೆ. ಎರಡು, ಸಾಂಸ್ಕೃತಿಕ ವೈಶಿಷ್ಟ್ಯವನ್ನು ಸೂಚಿಸುವ ವಿಶೇಷಾರ್ಥ. ಆಯಾ ಜನಸಮುದಾಯವು ನೆಲೆನಿಂತ ಒಂದೊಂದು ಸ್ಥಳದ ವಿಸ್ತೀರ್ಣ, ಅಲ್ಲಿನ ಜನಸಂಖ್ಯೆ ಮುಂತಾದ ಆಧಾರಗಳ ಮೇಲಿಂದ ಅದನ್ನು ಒಂದು ಹಳ್ಳಿ, ಊರು, ಗ್ರಾಮ, ನಗರ, ಖೇಡ, ಪುರ, ಪಟ್ಟಣ ಎಂದು ಮುಂತಾಗಿ ಕರೆಯಲಾಗುತ್ತದೆ. ಇದರೊಂದಿಗೆ ಆಯಾ ಸ್ಥಳಕ್ಕೆ ಪ್ರಾಪ್ತವಾದ ಒಂದು ರೀತಿಯ ವಿಶಿಷ್ಟ ಘಟಕಗಳು ಬರುತ್ತವೆ. ಇಂಥ ನಿರ್ದಿಷ್ಟ ಹೆಸರುಗಳುಳ್ಳ ಪದಗಳೇ ಸ್ಥಳನಾಮಗಳು. ನಿರ್ದಿಷ್ಟ ಮತ್ತು ವಾರ್ಗಿಕ ಎಂಬೆರಡು ಘಟಕಗಳು ಕೂಡಿ ಸಾಮಾನ್ಯವಾಗಿ ಸ್ಥಳನಾಮಗಳು ಸಿದ್ಧಗೊಳ್ಳುತ್ತವೆ. ಎರಡಕ್ಕಿಂತ ಹೆಚ್ಚು ಘಟಕಗಳು ಇರಬಹುದು ಮತ್ತು ಒಂದೇ ಘಟಕವೂ ಕೂಡ ಅದರಲ್ಲಿರಬಹುದು.

ಸ್ಥಳನಾಮಾಧ್ಯಯನಕ್ಕೆ ದೇಶ ವಿದೇಶಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯ ದೊರಕಿದೆ. ಭಾರತದಲ್ಲೂ ತಕ್ಕಮಟ್ಟಿಗೆ ಈ ಅಧ್ಯಯನ ನಡೆದಿದೆ. ಕನ್ನಡದಲ್ಲೂ ಈ ವಿಷಯ ಕುರಿತು ಅಧ್ಯಯನವನ್ನು ಡಾ॥ ದೇ. ಜವರೇಗೌಡ, ಶಂಬಾ ಜೋಶಿ, ಡಾ॥ ಸಂಗಮೇಶ ಸವದತ್ತಿಮಠ, ಡಾ॥ ಆರ್.ಸಿ. ಹಿರೇಮಠ, ಡಾ॥ ಎಂ. ಚಿದಾನಂದಮೂರ್ತಿ, ಡಾ॥ ಎಂ.ಎಂ. ಕಲಬುರ್ಗಿ, ಡಾ॥ ಆರ್ಕೆ. ಮಣಿಪಾಲ, ವಿ. ಗೋಪಾಲಕೃಷ್ಣ, ಡಾ॥ ಚೆನ್ನಕ್ಕ

ಎಲಿಗಾರ ಮುಂತಾದವರು ನಡೆಸಿದ್ದಾರೆ. ಆದರೆ ಕನ್ನಡದಲ್ಲಿ ಇನ್ನೂ ಇದು ಸ್ಥಳನಾಮ ವಿಜ್ಞಾನವೆಂಬ ಪ್ರತ್ಯೇಕ ಅಧ್ಯಯನ ಶಾಖೆಯನ್ನೇನೂ ಹೊಂದಿಲ್ಲ. ಹೊಂದಬೇಕಾಗಿದೆ. ಈ ಅಧ್ಯಯನ ನಿಜಕ್ಕೂ ಮಹತ್ವಪೂರ್ಣವಾದುದು. ಸ್ಥಳನಾಮದ ಹಿಂದೆ ಆ ಊರಿನ ಇತಿಹಾಸವೇ ಅಡಗಿರಬಹುದು. ಪ್ರತಿಯೊಂದು ಊರ ಹೆಸರಿನ ಹಿಂದೆ ಸಾಮಾನ್ಯವಾಗಿ ಒಂದು ವಿಧದ ವಿಶೇಷತೆ ಇರುತ್ತದೆ. ಜನತೆಯ ಜೀವನ ವಿಧಾನ, ಅವರ ಸಂಸ್ಕೃತಿ ಅದರಲ್ಲಿ ಅಡಗಿರುತ್ತದೆ. 'ಒಂದು ಊರಿಗೆ, ಸಾಮಾಜಿಕ, ಧಾರ್ಮಿಕ ಅಥವಾ ರಾಜಕೀಯ ಇತ್ಯಾದಿ ವಿಶೇಷ ಘಟನೆಯ ನೆನಪಿಗಾಗಿ ಹೆಸರು ಇಟ್ಟಿರಲು ಸಾಧ್ಯವಿದೆ'[3].

ಊರುಗಳಿಗೆ ಆಯಾ ಹೆಸರುಗಳು ಬರಬೇಕಾದರೆ ಏನಾದರೂ ಐತಿಹ್ಯಗಳು, ದಂತಕಥೆಗಳು, ಪುರಾಣ ಕಥೆಗಳು ಕಾರಣವಾಗಬಹುದು. ಅಲ್ಲಿನ ಮಣ್ಣು, ಕಲ್ಲು, ಪೈರು, ಗುಡ್ಡ, ಹೊಳೆ, ಹಳ್ಳ, ತೊರೆ ಮುಂತಾದ ನೈಸರ್ಗಿಕ ಹಿನ್ನೆಲೆಯನ್ನೂ ಅವು ಹೊಂದಿರಬಹುದು ಹಾಗೂ ಯಾರಾದರೂ ರಾಜ, ರಾಣಿ, ಮಂತ್ರಿ, ಧಾರ್ಮಿಕ ಮಹಾಪುರುಷ, ಸಾಧು ಸತ್ಪುರುಷರು ಅಲ್ಲಿ ಆಗಿಹೋಗಿದ್ದರೆ ಅವರ ಪ್ರಭಾವವಾಗಿದ್ದರೆ ದೇವರ ಜಾತ್ರೆ, ಉತ್ಸವ ವಿಶೇಷವಾಗಿ ನಡೆಯುತ್ತಿದ್ದರೆ ಸಾಮಾನ್ಯವಾಗಿ ಇವೆಲ್ಲ ಆಯಾ ಊರುಗಳಿಗೆ ಆಯಾ ಹೆಸರುಗಳು ಬರಲು ಕಾರಣವಾಗುತ್ತವೆ. ಊರುಗಳಿಗೆ ಹೆಸರುಗಳು ಬರಲು ಇಂಥವೇ ಕಾರಣಗಳಿರುತ್ತವೆಯೆಂದು ಖಚಿತವಾಗಿ ಬೊಟ್ಟುಮಾಡಿ ಹೇಳಲಿಕ್ಕೆ ಬರದು. ಆದರೂ ಕೆಲವಾದರೂ ಊರುಗಳಿಗೆ ಹೆಸರು ಬರಲು ಇರುವ ಕಾರಣಗಳನ್ನು ಗುರುತು ಮಾಡಬಹುದು. ಆಯಾ ಊರುಗಳಿಗೆ ಆಯಾ ಹೆಸರುಗಳು ಹೇಗೆ ಬಂದುವು ಎಂಬುದನ್ನು ಅಧ್ಯಯನ ಮಾಡಿದರೆ ಅದೊಂದು ರೀತಿಯಲ್ಲಿ ಆ ಊರಿನ ಹಿನ್ನೆಲೆಯಲ್ಲಿ, ಸಂಸ್ಕೃತಿಯನ್ನು ತಿಳಿದುಕೊಂಡಂತಾಗುತ್ತದೆ. ಭಾಷಾದೃಷ್ಟಿಯಿಂದ ಅಧ್ಯಯನ ಮಾಡಿದಾಗಲಂತೂ ಆ ಊರ ಹೆಸರಿನ ಮೇಲೆ ಹೊಸಬೆಳಕು ಚೆಲ್ಲಿದಂತಾಗುತ್ತದೆ.

ಗುಲಬರ್ಗಾ ತಾಲೂಕಿನಲ್ಲಿ ಬರುವ ಒಟ್ಟು ಊರುಗಳು 160. ಅವುಗಳಲ್ಲಿ ಕೆಲವು ಊರುಗಳ ಹೆಸರುಗಳನ್ನು ಅಂದರೆ ಸ್ಥಳನಾಮಗಳನ್ನು ಇಲ್ಲಿ ಭಾಷಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಈ ರೀತಿ ಅಳವಡಿಸಿರುವೆ.

**ಭಾಷಿಕ ಅಧ್ಯಯನ:**

ಭಾಷಿಕ ವಿಜ್ಞಾನಿಗಳು ಊರ ಹೆಸರುಗಳನ್ನು ನಿರ್ದಿಷ್ಟ ಮತ್ತು ವಾರ್ಗಿಕ ಎಂಬೆರಡು ಘಟಕಗಳಲ್ಲಿ ವಿಭಜಿಸಿ ಅಧ್ಯಯನ ಮಾಡುವುದುಂಟು. ಹಿಂದೆ ಹೇಳಿದಂತೆ ಕೆಲ ಊರ ಹೆಸರುಗಳು ಎರಡಕ್ಕಿಂತ ಹೆಚ್ಚು ಘಟಕಗಳನ್ನು ಹೊಂದಿರಲೂಬಹುದು. ಅವು ವಿಶಿಷ್ಟದ ಹಿಂದೆ (ಪ್ರಿಫಿಕ್ಸ್) ವಿಶೇಷಣ ಅಥವಾ ಯಾವುದೋ ವಿಷಯಸೂಚಕ ಪದಗಳಾಗಿ ಸೇರಿಕೊಂಡಿರುತ್ತವೆ. ಹೀಗೆ ಸೇರಿಕೊಂಡಂಥವುಗಳನ್ನೂ ನಿರ್ದಿಷ್ಟವೆಂದೇ

ಪರಿಗಣಿಸುವುದುಂಟು. ಇಂಥ ಕ್ರಮವನ್ನೇ ಇಲ್ಲಿ ಅನುಸರಿಸಲಾಗಿದೆ. ನಿರ್ದಿಷ್ಟವೆಂದರೆ ವಿಶಿಷ್ಟ (ಸ್ಪೆಸಿಫಿಕ) ಎಂದರ್ಥ. ಅಂದರೆ ಯಾವುದಾದರೂ ವಿಷಯವನ್ನು ಒಳಗೊಂಡಂಥದು ವಾರ್ಗಿಕ (ಜನರಿಕ್) ಎಂದರೆ ಊರುಗಳ ಹೆಸರುಗಳ ಉತ್ತರಾರ್ಧಘಟಕ. ಇದರಲ್ಲಿ ವಿಷಯ ಪ್ರಸ್ತಾಪವಿರದು. ಉದಾ: ಊರು, ಹಳ್ಳಿ, ಪುರ, ಗ್ರಾಮ, ಖೇಡ, ನಗರ, ಕೆಯ್, ಗಾ, ಗೆ, ಗಿ, ಆಬಾದ, ಕಲ್ಲ, ಮೂಡ, ಹಾಳ, ವಾಡ, ಕೆರೆ, ಮಡಿ, ಪಟ್ಟಣ, ಕುಂದ, ಕೋಟೆ ಈ ಮುಂತಾದ ಘಟಕಗಳಲ್ಲಿ ಒಂದನ್ನೊಳಗೊಂಡು ಕೊನೆಗೊಳ್ಳುವಂಥವು. ನಿರ್ದಿಷ್ಟ ಮತ್ತು ವಾರ್ಗಿಕ ಇವರೆಡು ಪ್ರತ್ಯೇಕ ಆಕೃತಿಮಾಗಳೇ. ಈ ಆಕೃತಿಮಾಗಳು ಕೊಡುವಾಗ ಅಲ್ಲಿ ಧ್ವನಿವ್ಯತ್ಯಾಸವೂ ಆಗುತ್ತದೆ. ನಿಘಂಟುವಿಜ್ಞಾನ (ಲೆಕ್ಸಿಕೊಗ್ರಾಫಿ) ಕ್ಕೂ ಈ ರೀತಿಯ ಸ್ಥಳನಾಮಾಧ್ಯಯನ ಮಹತ್ವದ ಕೊಡುಗೆಯಾಗುತ್ತದೆ. ಭಾಷಿಕ ದೃಷ್ಟಿಯಿಂದ ಗುಲಬರ್ಗಾ ತಾಲೂಕಿನಲ್ಲಿ ಬರುವ ಕೆಲವು ಊರುಗಳನ್ನು ಈ ಘಟಕಗಳನ್ವಯ ವಿಂಗಡಿಸಿದುದನ್ನು ಹಾಗೂ ಅವು ರೂಪ ಹಾಗೂ ಧ್ವನಿವ್ಯತ್ಯಾಸ ಪಡೆದುದನ್ನು ಇಲ್ಲಿ ಕೆಲವು ಉದಾಹರಣೆಗಳನ್ನು ನೋಡುವುದರ ಮೂಲಕ ತಿಳಿಯಬಹುದಾಗಿದೆ.

1. **ಊರು:** ಇದು ಅಚ್ಚ ದ್ರಾವಿಡ ಪದ. ಊರುಗಳಿಂದ ಕೊನೆಗೊಳ್ಳುವ ಸ್ಥಳಗಳು ಗಾತ್ರದಲ್ಲಿ ಚಿಕ್ಕವು. ಅಂಥ ವಿಶೇಷತೆಯನ್ನೇನೂ ಒಳಗೊಂಡಿರುವುದಿಲ್ಲ. ಇಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕ ಘಟಕ (ಆಕೃತಿಮಾ)ಗಳು, ಸೇರುವಾಗ ಸ್ವರೈಕ್ಯ (ಅಸಿಮಿಲೇಶನ್) ಹೊಂದುವುದನ್ನು ಗುರುತಿಸಬಹುದು.

ನಾಗ+ಊರು = ನಾಗೂರು
ಜೋಗಿ+ಊರು = ಜೋಗೂರು
ಪರಿಸೆ(ಪ>ಹ)+ಊರು = ಹರಸೂರು
ಸಣ್ಣ+ಊರು = ಸಣ್ಣೂರು.

2. **ಪುರ:** ಪುರದಿಂದ ಕೊನೆಗೊಳ್ಳುವ ಸ್ಥಳಗಳು ಊರಿಗಿಂತ ಗಾತ್ರದಲ್ಲಿ ದೊಡ್ಡವು. ಸಾಮಾನ್ಯವಾಗಿ ಇವುಗಳ ಮಧ್ಯೆ ದೇವಾಲಯವಿರುತ್ತದೆ.

ಕಮಲ+ಪುರ = ಕಮಲಾಪುರ; ಹೀರಾ+ಪುರ = ಹೀರಾಪುರ; ರಾಜ+ಪುರ = ರಾಜಾಪುರ; ಸುಲ್ತಾನ+ಪುರ = ಸುಲ್ತಾನಪುರ.

3. **ಹಳ್ಳಿ:** ಹಳ್ಳಿಯಿಂದ ಕೊನೆಗೊಳ್ಳುವ ಸ್ಥಳಗಳು ಊರಿನಂತೆ ಗಾತ್ರದಲ್ಲಿ ಚಿಕ್ಕದಾಗಿರುತ್ತವೆ. ನಾಗನ+ಹಳ್ಳಿ = ನಾಗನಹಳ್ಳಿ; ಸೋಮನಾಥ+ಹಳ್ಳಿ = ಸೋಮನಾಥಹಳ್ಳಿ; ಭೀಮ+ಹಳ್ಳಿ = ಭೀಮಳ್ಳಿ; ನಡುವಿನ+ಹಳ್ಳಿ = ನಡನಳ್ಳಿ, ನಡ್ನಳ್ಳಿ. ಇಲ್ಲಿ ಭೀಮಳ್ಳಿ ಹಾಗೂ ನಡ್ನಳ್ಳಿ ಜನತೆಯ ಸೌಲಭ್ಯಾಕಾಂಕ್ಷೆಗೆ ಒಳಗಾಗಿ ಈ ರೂಪ ಪಡೆದಿದೆ.

**4. ಗ್ರಾಮ:** ಗಾ, ಗೆ, ಗಿ: ಗ್ರಾಮಪದ ಸಂಸ್ಕೃತದ್ದು, ಇದು ಊರುಗಳ ಕೊನೆಗೆ ಬರುವಂಥದು. 'ಈ ಗ್ರಾಮ ಗಾವ್ ಆಗುತ್ತದೆ. ಇಲ್ಲಿಯ ಅರ್ಧಸ್ವರವಾದ ವ್ ಆಡುಮಾತಿನಲ್ಲಿ ಉದುರಿ ಹೊಗುತ್ತದೆ. ಆಗ ಉಳಿಯುವ ಗಾ>ಗೆ ಆಗುವುದು. ಗೆ>ಗಿ ಆಗುವುದು. ಭಾಷೆಯಲ್ಲಿ ಜರುಗುವ ಸಹಜ ಕ್ರಿಯೆಗಾಗಿದೆ'[4] ಹೀಗೆ ರೂಪುಗೊಂಡ ಕೆಲ ಊರುಗಳನ್ನಿಲ್ಲಿ ನೋಡಬಹುದು.

ಅಂಕಲ+ಗ್ರಾಮ = ಅಂಕಲಗಾವ್>ಅಂಕಲಗಾ>ಅಂಕಲಗಿ
ಯಳವಂತ+ಗ್ರಾಮ = ಯಳವಂತಗಾವ್>ಯಳವಂತಗಾ>ಯಳವಂತಗೆ
ಭೂಸಣ+ಗ್ರಾಮ = ಭೂಷಣಗಾವ್>ಭೂಷಣಗಾ>ಭೂಷಣಗಿ
ಕವಲ+ಗ್ರಾಮ = ಕವಲಗಾವ್>ಕವಲಗಾ>ಕವಲಗಿ
ಸಾವಳ+ಗ್ರಾಮ = ಸಾವಳಗಾವ್>ಸಾವಳಗಾ>ಸಾವಳಗಿ
ಕಿರಣ+ಗ್ರಾಮ = ಕಿರಣಗಾವ್>ಕೀರಣಗಾ>ಕೀರಣಗಿ

ಹೀಗೆ ಊರ ಹೆಸರಿನ ಕೊನೆಗೆ ಬರುವ ಗ್ರಾಮ ಗಾವ್ ಆದುದನ್ನು; ಗಾ>ಗೆ ಹಾಗೂ ಗೆ>ಗಿ ಆದುದನ್ನು ನೋಡಿದೆವು.

**5. ಕೆಯ್ – ಕೆ(ಗೆ) ಕಿ (ಗಿ):** ಕೆಲವು ಊರುಗಳ ಕೊನೆಗೆ ಬರುವ 'ಕೆಯ್' – ರೂಪ ಕೆ (ಗೆ)>ಕಿ (ಗಿ) ಆಗುವುದನ್ನು ನೋಡಬಹುದು. ಈ ಪದದಿಂದ ಕೊನೆಗೊಳ್ಳುವ ಊರುಗಳು ಸಾಮಾನ್ಯವಾಗಿ ಬಯಲು ಪ್ರದೇಶದಲ್ಲಿರುತ್ತದೆ. 'ಕೆಯ್' ಎಂದರೆ ಕೃಷಿ ಪ್ರದೇಶ, ಬಯಲುಭೂಮಿ, ಎಂದರ್ಥ. ಗಾ, ಗೆ, ಗಿ, ಈ ಅಕ್ಷರಗಳ ಮೂಲರೂಪ 'ಕೆಯ್' ಆಗಿದೆ'[5]. ಕೆಯ್ ಇದು ದ್ರಾವಿಡ ಪದ. ಇದರ ಸವೆದ ರೂಪಗಳೇ ಗಾ, ಗೆ, ಗಿ ಗಳಾಗಿವೆ. ಜನಸಾಮಾನ್ಯರು, ಗ್ರಾಮೀಣರು ಊರ ಹೆಸರುಗಳನ್ನು ಉಚ್ಚರಿಸುವಾಗ ಕೊನೆಗೆ ಬರುವ 'ಯ್'ವನ್ನು ಲೋಪ ಮಾಡುತ್ತಾರೆ. ಅಲ್ಲಿ 'ಕೆ' ಮಾತ್ರ ಉಳಿಯುತ್ತದೆ. ಅದು ಜನತೆಯೆ ಬಾಯಲ್ಲಿ 'ಗೆ' ಆಗಿ, 'ಗಿ' ಆಗಿ ಮಾರ್ಪಡುತ್ತದೆ. ಗುಲಬರ್ಗಾ ತಾಲೂಕಿನ ಹಲವು ಊರುಗಳು 'ಕೆಯ್' ದಿಂದ ಕೊನೆಗೊಳ್ಳುವವು. ಅಂಥ ಕೆಲವು ಊರುಗಳನ್ನಿಲ್ಲಿ ನೋಡಬಹುದು.

ಹಾಗರಗುಂಡ+ಕೆಯ್ = ಹಾಗರಗುಂಡ ಕೆ(ಗೆ) ಹಾಗರಗುಂಡಕಿ(ಗಿ)>ಹಾಗರಗುಂಡಗಿ
ಸರಕ+ಕೆಯ್ = ಸರಡಕೆ (ಗೆ) > ಸರಡಕಿ (ಗಿ) > ಸರಡಗಿ
ಜೀವಣ+ಕೆಯ್ = ಜೀವಣಕೆ(ಗೆ) > ಜೀವಣಕಿ (ಗಿ) > ಜೀವಣಗಿ
ಕಲಂಬರ+ಕೆಯ್ = ಕಲಂಬರಕೆ(ಗೆ) > ಕಲಂಬರಕಿ (ಗಿ) > ಕಲಂಬರಗಿ > ಕಲಬರಗಿ> ಕಲಬುರಗಿ.

ಇಲ್ಲಿ ಸಜಿಂದುಕ ಅಜಿಂದುಕ ಮತ್ತು 'ಅರ್ಧಸ್ವರೂಪವಾಗಿರುವ' ಯ್ ಉದುರುವುದು;

ಆಗ ಉಳಿಯುವ ಕೆ (ಗೆ) >ಕಿ (ಗಿ) ಆಗುವುದು. ಆಡುಮಾತಿನಲ್ಲಿ ಸಹಜ".

6. **ಅಬಾದ:** ಇದು ಪರ್ಶಿಯನ್ ಪದ. ಉರ್ದುವಿನ ಪ್ರಭಾವದಿಂದ ಕನ್ನಡಕ್ಕೆ ಬಂದಂಥದು. ಆಬಾದ ಎಂದರೆ ಜನರು ವಾಸಿಸುವ ಯೋಗ್ಯವಾದ ಸ್ಥಳ ಎಂದರ್ಥ.

ಫರಹತ್+ಆಬಾದ = ಫರಹತಾಬಾದ; ಫಿರೋಜ+ಆಬಾದ = ಫಿರೋಜಾಬಾದ

7. **ಕಲ್ಲ:** ಕಲ್ಲದಿಂದ ಕೊನೆಗೊಳ್ಳುವ ಊರುಗಳು ಹೆಸರಿಡುವ ಮೊದಲನೇ ಘಟ್ಟವನ್ನು ಅಂದರೆ ಬಹು ಪ್ರಾಚೀನತೆಯನ್ನು ಸೂಚಿಸುತ್ತದೆ. ಸೃಷ್ಟಿ ಘಟ್ಟದಲ್ಲಿಯೇ ಅಲ್ಲಿಯ ನೈಸರ್ಗಿಕ ಸ್ಥಿತಿಯನ್ನೇ ಗ್ರಾಮಕ್ಕೆ ನಾಮವೆಂದು ಇಡಲಾಗಿತ್ತು. ಆಗ ಅನ್ವರ್ಥಕ ನಾಮಪದ್ಧತಿಯೇ ಬಳಕೆಯಲ್ಲಿದ್ದಿತು.

ತಡ+ಕಲ್ಲ = ತಡಕಲ್ಲ; ತೊಂಡ+ಕಲ್ಲ = ತೊಂಡಕಲ್ಲ

8. **ಹಾಳ:** ಇದು 'ಪೊಳಲು'ದಿಂದ ಬಂದಿದೆ. ಪೊಳಲು ಎಂದರೆ ಪಟ್ಟಣ. ಕಾಲಾಂತರದಲ್ಲಿ ಪ>ಹ ವ್ಯತ್ಯಾಸವಾಗಿ ಹೊಳಲು ಆಗಿದೆ. 'ಹೊಳಲು' ಬರಬರುತ್ತ ಜನತೆಯ ಸೌಲಭ್ಯಾಕಾಂಕ್ಷೆ ಹಾಗೂ ಪರಿಹಾರಾತ್ಮಕ ದೀರ್ಘಕರಣಕ್ಕೊಳಗಾಗಿ 'ಹಾಳ'ವಾದಂತಿದೆ.

ಭೀಮನ+ಪೊಳಲು (ಪ>ಹ) ಭೀಮನ ಹೊಳಲು > ಭೀಮನೊಳಲು – ಭೀಮನಾಳ

ಬಸವನ+ಪೊಳಲು (ಪ>ಹ) = ಬಸವನ ಹೊಳಲು > ಬಸವನೊಳಲು > ಬಸವನಾಳ.

9. **ವಾಡ, ವಾಡಿ:** ವಾಡ ಎಂದರೆ ಜನವಸತಿ ಸ್ಥಳ, ವಾಡಿ ಎಂದರೆ ಬಿಡಾರ, ವಾಸಸ್ಥಳವೆಂಬರ್ಥಗಳಿವೆ. ವಾಡ, ವಾಡಿ ವಾರ್ಗಿಕವನ್ನುಳ್ಳ ಊರುಗಳು ಈ ತಾಲೂಕಿನಲ್ಲಿ ಕಡಿಮೆ. ಅಂಥ ಕೆಲವು ಹೀಗಿವೆ:

ಬೋಳ+ವಾಡ = ಬೋಳವಾಡ; ಪಟ+ವಾಡ = ಪಟವಾಡ; ಗೊಬ್ಬರ+ವಾಡಿ = ಗೊಬ್ಬರವಾಡಿ; ಹೊಸದು+ವಾಡಿ = ಹೊಸವಾಡಿ

10. **ಕೆರೆ:** ಕೆರೆ ಸಮೀಪದಲ್ಲಿ ಇರುವ ಊರುಗಳು ಸಾಮಾನ್ಯವಾಗಿ ಕೆರೆ, ಗೆರೆ, ಗೇರಾ, ವಾರ್ಗಿಕಗಳನ್ನು ಹೊಂದುವುದುಂಟು. ಇವಕ್ಕೆ ಜಲವಾಚಿ ಸ್ಥಳನಾಮಗಳೆಂದು ಕರೆಯುವರು. ತಾವರೆಯ+ಕೆರೆ = ತಾವರಗೆರೆ (ಕೆ>ಗೆ) ತಾವರಗೇರಿ (ರೆ>ರಿ) ತಾವರಗೇರಾ (ರಿ>ರಾ).

ಜನರ ಬಾಯಲ್ಲಿ ಈ ಊರ ಹೆಸರಿನ ಕೊನೆಗಿರುವ ರೆ > ರಿ ಅಥವಾ ರಾ ಆಗಿ 'ಗ' ದ ಮುಂದೆ ದೀರ್ಘ ಬಂದು ತಾವರಗೇರಿ, ತಾವರಗೇರಾ, ಆದುದೂ ಉಂಟು. 'ಕೆರೆ ನಿರ್ಮಾಣಗೊಂಡ ಪ್ರಯುಕ್ತ ಗ್ರಾಮಕ್ಕೆ ಆ ಹೆಸರು ಬಂದಂತೆ ಗ್ರಾಮ

ನಿರ್ಮಾಣಗೊಂಡ ಕೆಲಕಾಲದ ಮೇಲೆ ಕೆರೆ ನಿರ್ಮಿಸಲ್ಪಟ್ಟಿದ್ದರೂ ಕೆರೆಯ ಪ್ರಸಿದ್ಧಿಯಿಂದ ಮೂಲ ಗ್ರಾಮ ನಾಮ ಮಾಯಾಗಿ ಕೆರೆ ಆದೂ, ಇದರ ಪರ್ಯಾಯ ವಾರ್ಗಿಕವಾಗಿದ್ದುದು ಉಂಟು"[7].

**11. ಕುಂದ, ಕೋಟೆ:** ಕುಂದವೆಂದರೆ ಬೆಟ್ಟ, ಗುಡ್ಡ, ದಿನ್ನೆ ಮುಂತಾದ ಎತ್ತರವಾದ ಪ್ರದೇಶಗಳ ಹತ್ತಿರವಿರುವ ಊರುಗಳು ತಮ್ಮ ಹೆಸರುಗಳ ಉತ್ತರಾರ್ಧದಲ್ಲಿ 'ಕುಂದ' 'ಗುಂದ' ಎಂಬ ವಾರ್ಗಿಕವನ್ನು ಸಾಮಾನ್ಯವಾಗಿ ಹೊಂದಿರುತ್ತವೆ. ಈ ತಾಲೂಕಿನಲ್ಲಿ ಬೆಟ್ಟ ಗುಡ್ಡಗಳು ಕಡಿಮೆ. ಕೋಟೆಗಳೂ ಕಡಿಮೆ. ಬಯಲು ಪ್ರದೇಶವೇ ಇಲ್ಲಿ ಹೆಚ್ಚು ಅಂತೆಯೇ ಕುಂದ ಹಾಗೂ ಕೋಟೆ ವಾರ್ಗಿಕವನ್ನುಳ್ಳ ಊರುಗಳು ಇಲ್ಲಿ ಕಡಿಮೆ. ಅಂಥ ಕೆಲವನ್ನಿಲ್ಲಿ ನೋಡಬಹುದು.

ಪೊಳಲು+ಕುಂದ = ಪೊಳಕುಂದ (ಪ>ಹ) > ಹೊಳಕುಂದ; ಮೇಳ+ಕುಂದ = ಮೇಳಕುಂದ>ಮೇಳಕುಂದಾ; ಕುರಿ+ಕೋಟೆ = ಕುರಿಕೋಟೆ > ಕುರಿಕೋಟಾ; ಬೆಳೆ+ಕೋಟೆ = ಬೆಲಕೋಟೆ > ಬೆಳೆಕೋಟಾ

**12. ಖೇಡ:** ಖೇಡ, ಖರ್ವಡಗಳ ಪ್ರಸ್ತಾಪ ವಡ್ಡಾರಾಧನೆಯಲ್ಲಿ ಬರುತ್ತದೆ. ಸುತ್ತಲೂ ಎತ್ತರವಾದ ಪ್ರಾಕಾರದ ಗೋಡೆಗಳುಳ್ಳ ಗ್ರಾಮವೇ ಖೇಡ. ಈ ಗೋಡೆ ಕೋಟೆಯನ್ನು ಹೋಲುತ್ತದೆ. ನೈಸರ್ಗಿಕ ಬೆಟ್ಟಗಳಿಂದ ಸುತ್ತುವರಿದ ಗ್ರಾಮ 'ಕರ್ವಡ'. ಈ ತಾಲೂಕಿನಲ್ಲಿ ಖೇಡವನ್ನು ವಾರ್ಗಿಕವಾಗಿ ಉಳ್ಳ ಊರುಗಳು ಇವೆ. ಆದರೆ ಖರ್ವಡವನ್ನು ವಾರ್ಗಿಕವಾಗಿ ಉಳ್ಳ ಊರುಗಳಿಲ್ಲ. ಇವೆರಡೂ ನಗರಗಳಂತೆ ದೊಡ್ಡವೂ ಅಲ್ಲ ಮತ್ತು ಅತ್ಯಂತ ಸಣ್ಣ ಊರುಗಳೂ ಅಲ್ಲ. ನಡು ಮಧ್ಯದ ಊರುಗಳು.

ನೀಲ+ಖೇಡ = ನೀಲಖೇಡ; ಗಣಜಲ+ಖೇಡ = ಗಣಜಲಖೇಡ.

ಈ ತಾಲೂಕಿನಲ್ಲಿ 'ಖೇಡ' ಎಂಬ ಊರು ಇದೆ. ಇದು ನಿರ್ದಿಷ್ಟ ಘಟಕವನ್ನು ಹೊಂದದೆ ಕೇವಲ ವಾರ್ಗಿಕ ಘಟಕವೊಂದನ್ನೆ ಹೊಂದಿ ನಿಂತಿರುವುದನ್ನು ಕಾಣಬಹುದು.

**13. ಮೂರು ಆಕೃತಿಮಾಗಳುಳ್ಳ ಸ್ಥಳನಾಮಗಳು:** ಈವರೆಗೆ ನಿರ್ದಿಷ್ಟ ಮತ್ತು ವಾರ್ಗಿಕವೆಂಬೆರಡು ಘಟಕಗಳನ್ನು ಒಳಗೊಂಡ ಊರ ಹೆಸರುಗಳನ್ನು ನೋಡಿದೆವು. ಇನ್ನೂ ಎರಡು ನಿರ್ದಿಷ್ಟ ಒಂದು ವಾರ್ಗಿಕ ಘಟಕಗಳನ್ನೊಳಗೊಂಡ ಅಂದರೆ ಒಂದು ನಿರ್ದಿಷ್ಟ ಘಟಕದ ಅಡಿಯಲ್ಲಿ ಇನ್ನೊಂದು ನಿರ್ದಿಷ್ಟ ಪದ (ಪ್ರಿಫಿಕ್ಸ್)ವನ್ನು ಒಳಗೊಂಡಂಥ ಕೆಲ ಊರುಗಳನ್ನಿಲ್ಲಿ ಉದಾಹರಿಸಬಹುದು.

ಹಿರಿಯ+ಜಂಬ+ಗ್ರಾಮ = ಹಿರೇಜಂಬಗಾವ > ಹಿರೆಜಂಬಗಾ; ಪೇಟ+ಫಿರೋಜ+ಆಬಾದ = ಪೇಟ ಫಿರೋಜಾಬಾದ; ಕಲ್ಲ+ಹಂಗರ+ಗ್ರಾಮ =

ಕಲ್ಲಹಂಗರಗಾವ > ಕಲ್ಲಹಂಗರಗಾ; ಕೆರೆ+ಬೋಸ+ಗ್ರಾಮ = ಕೆರೆಬೋಸಗಾವ > ಕೆರೆಬೋಸಗಾ; ಹಾಳ+ಸುಲ್ತಾನ+ಪುರ = ಹಾಳ ಸುಲ್ತಾನಪುರ.

**14. ತಾಂಡಾ:** ನಿರ್ದಿಷ್ಟ ಮತ್ತು ವಾರ್ಗಿಕ ಘಟಕಗಳನ್ನು ಹೊಂದಿದ ಊರುಗಳ ಮುಂದೆ 'ತಾಂಡಾ' ಪದ ಸೇರಿಕೊಂಡ ಊರುಗಳೂ ಈ ತಾಲ್ಲೂಕಿನಲ್ಲಿವೆ. 'ತಾಂಡಾ' ಲಂಬಾಣ ಜನರು ವಾಸಿಸುವ ಸ್ಥಳ. 'ಊರುಗಳಿಂದ ಪ್ರತ್ಯೇಕವಾಗಿಯೇ ನೆಲೆಸಿರುವ ಲಂಬಾಣಿಗರ ತಾಂಡಾಕ್ಕೆ ಸಮೀಪದ ಊರುಗಳ ಹೆಸರೇ ಅವುಗಳಿಗೆ ಇರುತ್ತವೆ'[8]. ಇವುಗಳು (ತಾಂಡಾ) ಸ್ವತಂತ್ರವಾಗಿ ನೆಲೆಯಾಗಿದ್ದರೂ ಆಯಾ ಊರಿನ ಮಜರ್ (ಹ್ಯಾಮ್ಲೆಟ) ಹಳ್ಳಿಗಳಾಗಿಯೇ ಪರಿಗಣಿಸಲ್ಪಡುತ್ತವೆ"[9]. ಅಂಥ ಕೆಲ ತಾಂಡಾಗಳನ್ನಿಲ್ಲಿ ಉದಾಹರಿಸಬಹುದು.

ಕುಸನೂರು+ತಾಂಡಾ = ಕುಸನೂರತಾಂಡಾ; ಕವ್ವಳ್ಳಿ+ತಾಂಡಾ = ಕವ್ವಳ್ಳಿತಾಂಡಾ; ಸರಡಗಿ+ತಾಂಡಾ = ಸರಡಗಿತಾಂಡಾ; ಖಣದಾಸ+ತಾಂಡಾ = ಖಣದಾಳತಾಂಡಾ

ಈ ತಾಲೂಕಿನಲ್ಲಿ ಕೆಲವು ತಾಂಡಾಗಳು ವ್ಯಕ್ತಿಗಳ ಹೆಸರನ್ನು ಹೊಂದಿ ಪ್ರಚಲಿತದಲ್ಲಿರುವುದು ವಿಶೇಷವಾಗಿದೆ. ಚವ್ಹಾಣ ತಾಂಡಾ, ಪರುನಾಯಕ ತಾಂಡಾ, ಬಾಪುನಾಯಕ ತಾಂಡಾ ಮುಂತಾದವು. ವ್ಯಕ್ತಿ ಹೆಸರಿನ ತಾಂಡಾಗಳಿದ್ದಂತೆ ಈ ತಾಲೂಕಿನಲ್ಲಿ 'ಶ್ರೀನಿವಾಸ ಸರಡಗಿ', 'ವೆಂಕಟ ಬೆನ್ನೂರ' ಎಂಬ ವ್ಯಕ್ತಿ ಹೆಸರುಗಳನ್ನುಳ್ಳ ಊರುಗಳೂ ಇರುವುದನ್ನು ಕಾಣಬಹುದು.

**ಸಾಂಸ್ಕೃತಿಕ ಅಧ್ಯಯನ :**

ಸಂಸ್ಕೃತಿ ಜನತೆಯ ಜೀವನ ವಿಧಾನವೇ ಆಗಿದ್ದು, ಅವರವರ ಸಂಸ್ಕಾರಗಳಿಂದ ಹುಟ್ಟಿಕೊಂಡಂಥದು. ಬಾಹ್ಯದಲ್ಲಿ ಕಾಣುವಂಥದ್ದಲ್ಲ, ಇದು ಅಂತರಂಗಕ್ಕೆ ಸಂಬಂಧಪಟ್ಟ ವಿಶೇಷ ಗುಣ. ಇದನ್ನು ಪ್ರತಿಯೊಬ್ಬರೂ ಕಷ್ಟಪಟ್ಟು ಗಳಿಸಿಕೊಳ್ಳಬೇಕೇ ವಿನಾ ಇನ್ನೊಬ್ಬರಿಂದ ಪಡೆದುಕೊಳ್ಳಲಾಗದು. ಸಂಸ್ಕೃತಿ ಮಾನವನಲ್ಲಿರುವಂತೆ ಆತ ಊರುಗಳಿಗೆ ಹೆಸರಿಡುವಾಗಲೂ ಇದನ್ನು ಪ್ರದರ್ಶಿಸಿದ್ದಾನೆ. ಅದನ್ನಿಂದು ಗುರುತಿಸುವ ಅಗತ್ಯವಿದೆ. 'ಒಂದು ಕಾಲಕ್ಕೆ ತನ್ನ ಮೇಲೆ ಗಾಢವಾದ ಪರಿಣಾಮವನ್ನುಂಟು ಮಾಡಿದ ವಸ್ತು, ವ್ಯಕ್ತಿ, ಘಟನೆಗಳನ್ನು ಧರ್ಮ, ಸಂಸ್ಕೃತಿಯ ಹಿನ್ನೆಲೆಯಲ್ಲಿ ತಾನು ವಾಸಿಸುವ ಸ್ಥಳಗಳಿಗೆ ಹೆಸರಿಸಿ ಮಾನವನು ತನ್ನ ಉತ್ಕಟ ಭಾವನೆಗಳನ್ನು ವ್ಯಕ್ತಪಡಿಸಿದ್ದಾನೆ'[10]. ಈ ಮಾತು ಗುಲಬರ್ಗಾ ತಾಲೂಕಿನ ಸ್ಥಳನಾಮಗಳಿಗೂ ಅನ್ವಯಿಸುವಂಥದಾಗಿದೆ. ಗುಲಬರ್ಗಾ ತಾಲೂಕಿನ ಸ್ಥಳನಾಮಗಳ ಮೇಲೆ ಉರ್ದುಭಾಷೆ, ಸಂಸ್ಕೃತಿಯ ಪ್ರಭಾವ ದಟ್ಟವಾಗಿ ಆಗಿದೆ. ಜೊತೆಗೆ ಆ ಜನಾಂಗದ ಸಂಸ್ಕೃತಿಯ ಪರಿಣಾಮ ಹಿಂದೂಗಳ ಮೇಲಾದುದನ್ನು ಗುರುತಿಸಬಹುದು. ಈ ತಾಲೂಕಿನ ಹಲವಾರು ಹಿಂದೂ ದೇವಾಲಯಗಳು, ಮಠಗಳು,

ಮುಸ್ಲಿಂ ಮಸೀದಿಯಾಕಾರದ ಗುಂಬಜಗಳನ್ನು ಹೊಂದಿರುವುದನ್ನು ಕಾಣುವೆವು. ಮುಸ್ಲಿಂರ ಈದ್ ಮಿಲಾದ್, ರಮಜಾನ್ ಮುಂತಾದ ಹಬ್ಬಗಳಲ್ಲಿ ವಿಶೇಷವಾಗಿ ಹಳ್ಳಿಗಾಡಿನ ಹಿಂದೂಜನ ಸಂಭ್ರಮದಿಂದ ಪಾಲ್ಗೊಳ್ಳುವುದುಂಟು. ಹಿಂದೂ ದೇವಾಲಯಗಳಿಗೆ ಹೋಗುವಂತೆ ಮಸೀದಿ ದರ್ಗಾಗಳಿಗೆ ಹೋಗಿ ತಮ್ಮ ಭಕ್ತಿ ಕಾಣಿಕೆ ಸಲ್ಲಿಸುವುದುಂಟು. ಭಾವೈಕ್ಯತೆಯ ಈ ಗುಣ ಹಿಂದೂಗಳಿಗೆ ರಕ್ತಗತವಾದುದು. ಇದು ಬಹುಮಟ್ಟಿಗೆ ನಿಜವಾದರೂ ಅನೇಕ ಸಂದರ್ಭಗಳಲ್ಲಿ ಮುಸ್ಲಿಂ ರಾಜರ ಆಡಳಿತ ಆದೇಶ ಪ್ರಭಾವ ಒತ್ತಡ ಕಾರಣವಾಗಿಯೂ ಹಿಂದೂಜನ ನಡೆದುಕೊಂಡರೆನ್ನುವುದನ್ನು ಅಲ್ಲಗಳೆಯಲಿಕ್ಕಾಗದು. ಅಧಿಕಾರ ಯಾರ ಬಳಿ ಇರುತ್ತೋ ಸಾಮಾನ್ಯ ಜನ ಅವರಂತೆ ನಡೆದುಕೊಳ್ಳುವುದು ಸಹಜ. ಮುಸ್ಲಿಂರ ಆಳ್ವಿಕೆಯ ಅವಧಿಯಲ್ಲಿ ಈ ಭಾಗದ ಜನ ಅವರ ಧರ್ಮ, ಸಂಸ್ಕೃತಿಯನ್ನು ಬಹಳಷ್ಟು ತಮ್ಮ ದೈನಂದಿನ ಬದುಕಿನಲ್ಲಿ ಅಳವಡಿಸಿಕೊಂಡುದುಂಟು. ಇಷ್ಟೇ ಅಲ್ಲದೇ ಈ ತಾಲೂಕಿನ ಎಷ್ಟೋ ಊರುಗಳಿಗೆ ಇರುವ ಹೆಸರುಗಳು ಉರ್ದುಮಯವಾಗಿವೆ. ವಿಶೇಷವಾಗಿ ಈ ತಾಲ್ಲೂಕಿನ ಕೆಲವು ಊರುಗಳ ಹೆಸರುಗಳು ಮುಸ್ಲಿಂ ರಾಜ, ರಾಣಿಯರ, ಮಂತ್ರಿಗಳ ಹೆಸರು ಹೊಂದಿರುವುದನ್ನು ಈಗಲೂ ಕಾಣಬಹುದು. ಇದಕ್ಕೆ ಹೀರಾಪುರ, ಫರಹತಾಬಾದ, ಫಿರೋಜಾಬಾದ ಮುಂತಾದವನ್ನು ಹೆಸರಿಸಬಹುದು. ಹಿಂದೂ ಮುಸ್ಲಿಂರು ಹಿಂದೆ ಸ್ನೇಹಸೌಹಾರ್ದದಿಂದ ಬಾಳುತ್ತಿದ್ದರು. ಅದಕ್ಕೆ ಭಾವೈಕ್ಯತೆಯ ದ್ಯೋತಕವಾಗಿ ಈ ರೀತಿ ಊರುಗಳಿಗೆ ಹೆಸರು ಬಂದಿವೆಯೆಂದು ಕೆಲವರು ಅನ್ನುವುದುಂಟು. ಇದು ಸಂಪೂರ್ಣ ಸರಿಯಲ್ಲ. ಸ್ನೇಹಸೌಹಾರ್ದಕ್ಕಿಂತ ಅವರ ಸಂಸ್ಕೃತಿಯನ್ನು ಬಲವಂತವಾಗಿ ಹಿಂದೂಗಳ ಮೇಲೆ ಹೇರಿದುದ್ದರ ಕಾರಣ ಈ ತಾಲೂಕಿನ ಅನೇಕ ಸ್ಥಳನಾಮಗಳು ಉರ್ದುಮಯವಾಗಿವೆಯೆಂದು ಹೇಳುವುದೇ ಹೆಚ್ಚು ಸೂಕ್ತವೆನಿಸುತ್ತದೆ. ಇದಕ್ಕೆ ಕೆಲವು ಉದಾಹರಣೆಗಳಲ್ಲಿ ನೋಡಬಹುದು.

1. **ಫಿರೋಜಾಬಾದ:** ಈ ಊರು ಹಿಂದೆ ಫಿರೋಜಷಾನ ಆಡಳಿತಕ್ಕೆ ಒಳಪಟ್ಟುದುದರಿಂದ ಇದಕ್ಕೆ ಆತನ ಹೆಸರೇ ಬಂದಿದೆ. ಹಿಂದೆ ಪ್ರಭಾವಿ ವ್ಯಕ್ತಿಗಳ, ಧಾರ್ಮಿಕ ಮಹಾಪುರುಷರ ಸ್ಮರಣೆಗಾಗಿ ಅವರ ಹೆಸರೇ ಊರುಗಳಿಗೆ, ಹೊಳೆಗಳಿಗೆ ಬಂದುದುಂಟು[11].

2. **ಸುಲ್ತಾನಪುರ:** ಬಹುಮನಿ ಅರಸರಲ್ಲಿ ಪ್ರಮುಖವಾದ ಆದಿಲ್ ಶಾಹಿಯ ಪತ್ನಿಯರಲ್ಲೊಬ್ಬಳಾದ ಸುಲ್ತಾನಬಿಯ ಸ್ಮರಣಾರ್ಥವಾಗಿ ಆಕೆಯ ಹೆಸರನ್ನು ತಂದು ನಿಂತುದೇ ಸುಲ್ತಾನಪುರ.

3. **ಹೀರಾಪುರ:** ಸುಲ್ತಾನಪುರವು ಸುಲ್ತಾನಬಿಯ ಹೆಸರನ್ನು ತಳೆದು ನಿಂತಂತೆ ಆದಿಲ್ ಶಾಹಿಯ ಇನ್ನೊಬ್ಬ ಪತ್ನಿ ಹೀರಾಬಿಯ ಸ್ಮರಣಾರ್ಥ ರೂಪ ಪಡೆದ ಊರು ಹೀರಾಪುರ[12].

**4. ಗುಲಬರ್ಗಾ:** ಗುಲಬರ್ಗಾ ಎಂದೇ ಈಗ ಹೆಚ್ಚಾಗಿ ಈ ಊರು ಕರೆಯಲ್ಪಡುತ್ತಿದ್ದರೂ ಇದರ ಮೂಲ ಹೆಸರು ಕಲಬುರ್ಗಿ, ಕ್ರಿ.ಶ. 1098 ಹುಣಸೀ ಹಡಗಲಿ ಶಾಸನದಲ್ಲಿ ಇದರ ಹೆಸರು 'ಕಲಬುರಗೆ' ಎಂದು ನಿರ್ದೇಶಿತವಾಗಿದೆ[13]. ಅನಂತರ ಕ್ರಿ.ಶ. 1459 ರ ಶಿರವಾಳದ ಒಂದು ಶಿಲಾಶಾಸನದಲ್ಲಿ 'ಶ್ರೀಮತು ಕಲಬುರಗಿ ನಾಡೊಳಗೆ' ಎಂಬ ನಿರ್ದೇಶನವಿದೆ[14].

ಕಲಂಬುರಗೆ ವಿಗ್ರಹ ರೂಪ ಕಲ್ಲ್ಚಂಪರಿಗೆ. ಎಂದರೆ ಕಲ್ಲುಬಂಡೆಗಳ ಹಾಸುಗಳಿಂದ ಕೂಡಿದ ಊರು. ಇಲ್ಲಿನ ಭೂಮಿಯ ಒಳಭಾಗದಲ್ಲಿ ಕಲ್ಲುಗಳ ಥರ ಥರದ ಹಾಸು ಇದ್ದುದನ್ನು ಕಾಣಬಹುದು. 'ಬುರುಗ' ಎಂದರೆ ಕಲ್ಲುಗಳು. ಒಂದಕ್ಕೊಂದು ಅಂಟಕೊಂಡುದು, ಅಂದರೆ ಕಲ್ಲಿನ ಕಣಿವೆ ಎಂದರ್ಥ. ಕಲ್ಲಿನ ಕಣಿವೆಗಳು ಇಲ್ಲಿರುವುದರಿಂದ ಈ ಊರಿಗೆ ಕಲಬುರ್ಗಿ ಎಂಬ ಹೆಸರು ಬಂದಂತಿದೆ. ಆದರೆ ಡಾ॥ ಎಂ.ಎಂ. ಕಲಬುರ್ಗಿಯವರು ಬೇರೆ ರೀತಿಯಲ್ಲಿ ಈ ಊರ ಹೆಸರನ್ನು ವಿಗ್ರಹಿಸಿ ಅರ್ಥೈಸಿದ್ದಾರೆ. ಅದು ಹೀಗಿದೆ. ಕಲಂಬರ+ಕೆಯ್ = ಕಲಂಬರಕೆ (ಗೆ) > ಕಲಂಬರಗೆ > ಕಲಂಬರಗಿ > ಕಲಬುರಗಿ. ಹಿಂದೆ ಕಲಂಬರು ಎಂಬ ಹೆಸರಿನ ಜನಾಂಗ ವಾಸಿಸುವ ಸ್ಥಳ ಇದಾಗಿತ್ತು. ಅದಕ್ಕೆ ಈ ಊರಿಗೆ ಕಲಬುರಗಿ ಎಂಬ ಹೆಸರು ಬಂದಿದೆ ಎನ್ನುತ್ತಾರೆ. ಕಲ್ಲುಗಳ ಕಣಿವೆ, ಕಲಂಬರು ವಾಸಿಸುವ ಕೃಷಿ ಪ್ರದೇಶ ಎಂಬೆರಡು ರೀತಿಯಲ್ಲಿ ಈ ಊರನ್ನು ಅರ್ಥೈಸಲಾಗಿದೆ. ಇದರ ಬಗ್ಗೆ ಇನ್ನೂ ಸಂಶೋಧನೆ ನಡೆಯಬೇಕಾಗಿದೆ. ಅರ್ಥದ ಬಗ್ಗೆ ಇನ್ನೂ ಖಚಿತ ನಿರ್ಧಾರವಾಗಬೇಕಿದ್ದರೂ ಇದರ ಹೆಸರು ಮಾತ್ರ ಕಲಬುರಗಿ ಎಂದೇ ಖ್ಯಾತಿ ಪಡೆದಿತ್ತು. 'ಗುಲಬರ್ಗಾ'ಕ್ಕಿಂತ ಪ್ರಾಚೀನ ಹೆಸರಾದ ಕಲಬುರ್ಗಿ ಎಂದೇ ಇದಕ್ಕೆ ಕರೆಯುವುದು ಅರ್ಥಪೂರ್ಣವಾದುದು ಮತ್ತು ಸಮರ್ಪಕವಾದುದು[15].

ಈ ಹೆಸರು ನೈಜಾಮ್ ಅರಸನ ಕಾಲಕ್ಕೆ ಪಾರಸೀಕರಣಗೊಂಡು ಮುಸ್ಲಿಂರ ಆಡಳಿತ ಹಾಗೂ ಪ್ರಭಾವಕ್ಕೊಳಗಾಗಿ ಗುಲಬರ್ಗಾ ಎಂದಾಯ್ತು. It is also said that Kalaburgi known later as Kalaburgh came to be pronounced as Gulbarga when it was under the Muslim rule[16].

'ಗುಲಬರ್ಗಾ' ಹೆಸರನ್ನು ಈ ರೀತಿ ಅರ್ಥಯಿಸಲಾಗುತ್ತದೆ. 'ಗುಲ್' ಎಂದರೆ ಹೂ, ಬುರ್ಗ ಎಂದರೆ ಎಲೆ ತೋಟ ಎಂದರ್ಥ. ಹೂದೋಟಗಳ ನಗರ ಎಂಬರ್ಥ ಹೊರಡುವುದು. ವಾಸ್ತವವಾಗಿ ನೋಡಿದಾಗ ಈ ಅರ್ಥ ಈ ಊರಿಗೆ ಅಷ್ಟಾಗಿ ಅನ್ವಯಿಸದು. ಏನೇ ಆಗಲಿ ಮುಸ್ಲಿಂರ ಆಡಳಿತ, ಸಂಸ್ಕೃತಿ, ಪ್ರಭಾವ ಕಾರಣವಾಗಿ ಮೂಲದಲ್ಲಿದ್ದ ಕಲಬುರ್ಗಿ ಸ್ಥಳನಾಮವು 'ಗುಲಬರ್ಗಾ' ಎಂದು ಮಾರ್ಪಾಟಾಗಿದೆ. ಹೀಗಾದರೂ ಜನ ಈಗ ಗುಲಬರ್ಗಾ, ಕಲಬುರ್ಗಿ ಎರಡೂ ಹೆಸರುಗಳಿಂದ ಇದನ್ನು

ಕರೆಯುತ್ತಾರೆ. ಸಾಮಾನ್ಯವಾಗಿ ಹಳ್ಳಿಗರು ಇದಕ್ಕೆ ಕಲಬುರ್ಗಿ ಎಂದೇ ಹೆಚ್ಚಾಗಿ ಕರೆಯುತ್ತಾರೆ. ಪಟ್ಟಣಿಗರು, ಸುಶಿಕ್ಷಿತರು ಇದಕ್ಕೆ ಗುಲಬರ್ಗಾ ಎಂದು ಅನ್ನುವುದುಂಟು. ಇದರಂತೆಯೇ ಈ ತಾಲೂಕಿನ ಇನ್ನೂ ಅನೇಕ ಊರುಗಳು ಹೆಸರಿನ ಬಗ್ಗೆ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವುದನ್ನರಿಯಬಹುದು.

5. **ಮಹಾಗಾಂವ್**: 'ಗಾಂವ್' ಸಂಸ್ಕೃತದ ಗ್ರಾಮದಿಂದ ಬಂದಂಥ ವಾರ್ಗಿಕ. ಹಸರೇ ಸೂಚಿಸುವಂತೆ ಇದು ದೊಡ್ಡ ಊರು. ದೊಡ್ಡ ಊರು ಎಂದು ಒಂದರ್ಥದಲ್ಲಿ ಕೆಲವರು ಇದನ್ನು ಅರ್ಥೈಯಿಸಿದರೆ, ಇನ್ನೂ ಕೆಲವರು ಮಹಾದೇವಿಯಕ್ಕ ಜನಿಸಿದ ಸ್ಥಳನಾಮವಾದುದರಿಂದ ಇದಕ್ಕೆ ಆ ಹೆಸರು ಪ್ರಾಪ್ತವಾಗಿದೆಯೆಂದು ಅಭಿಪ್ರಾಯಪಡುತ್ತಾರೆ. ಇದಿನ್ನೂ ಸಂಶೋಧನೆಯಾಗಬೇಕಾದ ಸಂಗತಿ. ಈ ಊರಿನಲ್ಲಿ ಹಾಗೂ ಬೆಣ್ಣೆತ್ತೂರಾದ ದಡದಲ್ಲಿ ಮಹಾದೇವಿಯಕ್ಕನ ಗುಡಿಗಳಿವೆ. ಈ ಮಂದಿರಗಳು ಒಂದು ವಿಧದಲ್ಲಿ ಮಹಾದೇವಿಯಕ್ಕ ಇಲ್ಲಿಯೇ ಜನಿಸಿದಳೆಂದು ಪ್ರತೀತಿಗೆ, ಐತಿಹ್ಯಕ್ಕೆ ಕಾರಣವಾಗಿವೆ. ಗುಡಿಗಳಿದ್ದ ಮಾತ್ರಕ್ಕೆ ಆಕೆ ಇಲ್ಲಿಯೇ ಜನಿಸಿದಳೆಂದು ಹೇಳಲಿಕ್ಕೆ ಬರದು. ಆದರೂ, ಜನ ನಂಬಿಕೊಂಡು ಬಂದಿರುತ್ತಾರೆ, ಸತ್ಯ ಇನ್ನೂ ಹೊರಬರಬೇಕಿದೆ.

ಧಾರ್ಮಿಕ ವ್ಯಕ್ತಿಗಳ ಹೆಸರನ್ನು ಭೌಗೋಳಿಕ, ಐತಿಹಾಸಿಕ, ಪ್ರಾಕೃತಿಕ ವಸ್ತುಗಳ ಹೆಸರನ್ನು ಹಾಗೂ ಜಾತ್ರೆ, ಉತ್ಸವ, ಹಬ್ಬಗಳ ಸ್ಮರಣೆಗಾಗಿ ವಿಶೇಷ ಹೆಸರನ್ನು ಹಲವಾರು ಊರುಗಳು ಪಡೆದಿರುವುದುಂಟು. ಅವು ಆಯಾ ಹೆಸರುಗಳನ್ನು ಹೊಂದಿದ ಹಿನ್ನೆಲೆಯನ್ನು ಸಾಂಸ್ಕೃತಿಕವಾಗಿ ಅಧ್ಯಯನ ಮಾಡಿದರೆ, ಆ ಕಾಲದ ಜನರ ರೀತಿ, ನೀತಿ, ಜೀವನ ವಿಧಾನ, ಉಡುಗೆ - ತೊಡಿಗೆ, ಆಚಾರ - ವಿಚಾರ ಇವೆಲ್ಲ ಬೆಳಕಿಗೆ ಬರುವುವು. ತನ್ಮೂಲಕ ಒಂದು ನಾಡಿನ ಸಾಂಸ್ಕೃತಿಕ ಸಂಪತ್ತನ್ನು ಹೊರ ಹಾಕಿದಂತಾಗುತ್ತದೆ. ಈ ದಿಸೆಯಲ್ಲಿ ಗುಲಬರ್ಗಾ ತಾಲೂಕಿನ ಊರುಗಳ ಸಾಂಸ್ಕೃತಿಕ ಅಧ್ಯಯನವನ್ನು ಇನ್ನೂ ಆಳವಾಗಿ ಮಾಡುವ ಅವಶ್ಯಕತೆಯಿದೆ. ಅಧ್ಯಯನಕ್ಕೆ ಒಳಪಡಿಸಬಹುದಾದ ಕೆಲವು ಊರುಗಳನ್ನಿಲ್ಲಿ ಹೆಸರಿಸಬಹುದು.

1. **ಜೋಗೂರು** : (ಯೋಗಿ>ಜೋಗಿ) ಯೋಗಿಯ ಹೆಸರನ್ನು ಬಹುಶಃ ತಳೆದು ನಿಂತ ಊರು ಇದಾದಂತಿದೆ.

2. **ಹರಸೂರು** : (ಪರಿಸ್>ಹರಿಸೆ) ಪರಿಸೆ ಎಂದರೆ ಜಾತ್ರೆ, ಜಾತ್ರೆಯ ಸ್ಮರಣಾರ್ಥ ಆ ಹೆಸರನ್ನೇ ತಳೆದಂತಿದೆ.

3. **ಕಾಳಗನೂರು** : (ಕಾಳಗ=ಯುದ್ಧ) ಯುದ್ಧ ಇಲ್ಲಿ ನಡೆದುದರಿಂದ ಈ ಊರಿಗೆ ಈ ಹೆಸರು ಬಂದಿರಬಹುದೇ?

**4. ಹೊನ್ನಳ್ಳಿ** : (ಹೊನ್ನ=ಬಂಗಾರ) ಬಂಗಾರದ ಹೆಸರನ್ನು ಹೊತ್ತು ನಿಂತ ಊರು ಅಂದರೆ ಸಂಪದ್ಭರಿತ ಊರು ಇದಾಗಿರಬೇಕು.

**5. ಖಣದಾಳ** : ಖಾಯಂ+ದಳ = ಖಣದಾಳ. ಇದು ಮೊದಲು ಸೈನಿಕರಿಗೆ ನೆಲೆ ಒದಗಿಸಿದ ತಾಣವಾಗಿರಬೇಕು. ಮುಂದೆ ಸೈನಿಕರು ಇಲ್ಲಿ ಖಾಯಂ ಆಗಿ ನೆಲೆಸಿದುದರಿಂದ ಈ ಊರಿಗೆ ಖಣದಾಳ (ಖಾಯಂದಳ) ಎಂಬ ಹೆಸರು ಬಂದಿರುವಂತಿದೆ.

**6. ಪೇಟ ಫಿರೋಜಾಬಾದ** : ಫಿರೋಜಷಾನ ಆಡಳಿತಕ್ಕೆ ಒಳಪಟ್ಟಿದುದುರಿಂದ 'ಫಿರೋಜಾಬಾದ' ಎಂಬ ಹೆಸರು ಬಂದಿದೆಯೆಂಬುದನ್ನು ಈ ಹಿಂದೆ ನೋಡಲಾಗಿದೆ. ಇದು 'ಪೇಟ ಫಿರೋಜಾಬಾದ' ಎಂದಿದೆ. 'ಪೇಟ ಪೇಟಾ' ಎಂದರೆ ದೊಡ್ಡ ಊರುಗಳು ಈ ಊರುಗಳಲ್ಲಿ ಹಿಂದೆ ಕಂದಾಯ ವಸೂಲಿ, ಕಛೇರಿ, ಭೂಮಿ, ಮನೆ ಮುಂತಾದ ಆಸ್ತಿಗಳನ್ನು ನೋಂದಣಿ ಮಾಡುವ ಕಛೇರಿ ಮುಂತಾದ ಸರಕಾರಿ ಕಛೇರಿಗಳು ಇರುತ್ತಿದ್ದವು. ಹಳ್ಳಿಯ ಜನ ತಾಲೂಕಿಗೆ ಹೋಗದೆ ಇಲ್ಲಿಯೇ ತಮ್ಮ ಕಛೇರಿ ಕೆಲಸಗಳನ್ನು ಮುಗಿಸಿಕೊಳ್ಳುತ್ತಿದ್ದರು. ತಾಲೂಕಿಗಿಂತ ಇವು ಚಿಕ್ಕವು. ಕೆಲವು ಪೇಟಾಗಳು ಅನಂತರ ತಾಲೂಕಗಳಾಗಿ ಮಾರ್ಪಟ್ಟವು. ಕೆಲವು ಹಾಗೆಯೇ ಉಳಿದವು, ಪೇಟ ಫಿರೋಜಾಬಾದ ಇಂಥದು.

**ಉಪಸಂಹಾರ :**

ಸ್ಥಳನಾಮಗಳೆಂದರೆ ಕೇವಲ ಊರಹೆಸರುಗಳಲ್ಲ. ಅವು ಆಯಾ ಪ್ರದೇಶಗಳ ಭೌಗೋಳಿಕ, ಐತಿಹಾಸಿಕ ಹಾಗೂ ಸಾಮಾಜಿಕ ವಿಷಯಗಳನ್ನೊಳಗೊಂಡಂಥ ಜೀವಂತ ಪಳಿಯುಳಿಕೆಗಳು, ಸಾಂಸ್ಕೃತಿಕ ಘಟಕಗಳು ಎಂಬುದನ್ನಿಲ್ಲಿ ನೋಡಿದೆವು. ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಹೆಸರನ್ನಿಡುವಾಗ ಅವರ ಮನೋದೃಷ್ಟಿ ವ್ಯಕ್ತಗೊಂಡಂತೆ ಒಂದು ಊರಿಗೆ ಒಂದು ಹೆಸರು ಪ್ರಾಪ್ತವಾಗಬೇಕಾದರೆ ಅಲ್ಲಿ ಮೂಲ ನಿವಾಸಿಗಳ ಯಥಾರ್ಥ ಬಿಂಬ ಗ್ರಹಣವಾಗುವಂತಿರುತ್ತದೆ. ಒಂದು ಜನಾಂಗದ ಏಳುಬೀಳು, ಕಷ್ಟಸುಖ, ಪ್ರಾಕೃತಿಕ, ಸಾಂಸ್ಕೃತಿಕ ಕಾರಣಗಳು ಊರ ಹೆಸರು ಬರಲು ಪ್ರೇರಕವಾಗಿರುತ್ತವೆ. ಅಲ್ಲದೆ ದಾನಿಗಳ, ವೀರರ, ತ್ಯಾಗಿಗಳ, ರಾಜ – ರಾಣಿ – ಮಂತ್ರಿಗಳ, ಮಹಾಪುರುಷರ ಸ್ಮರಣೆಗಾಗಿಯೂ ಕೆಲವು ಊರ ಹೆಸರುಗಳು ಬಂದಿರುವುದನ್ನಿಲ್ಲಿ ನೋಡಿದೆವು. ಚರಿತ್ರೆಯ ದೃಷ್ಟಿಯಿಂದ ಅಧ್ಯಯನ ಮಾಡುವವರಿಗಂತೂ ಇವು ತುಂಬಿದ ಗಣಿಗಳೇ ಆಗಿವೆ. ಚರಿತ್ರೆ ಮೌನ ತಾಳಿದಲ್ಲಿ ಸ್ಥಳನಾಮಗಳು ಮಾತನಾಡುತ್ತವೆ ಎಂಬ ಮಾತು ಗುಲಬರ್ಗಾ ತಾಲೂಕಿನ ಅನೇಕ ಸ್ಥಳನಾಮಗಳಿಗೆ ಅಕ್ಷರಶಃ ಅನ್ವಯಿಸುವುದು. ಈ ತಾಲೂಕಿನ ಹಲವಾರು ಸ್ಥಳನಾಮಗಳು ಐತಿಹಾಸಿಕ ಘಟನೆಗಳನ್ನು, ಸಾಂಸ್ಕೃತಿಕ ವಿವರಗಳನ್ನು, ಧಾರ್ಮಿಕ ಪುರುಷರನ್ನು ದಾಖಲೆಯ ರೂಪದಲ್ಲಿ ಉಳಿಸಿಕೊಂಡು ಬಂದಿವೆ. ಆದ್ದರಿಂದ ಇವು

ಸಾಂಸ್ಕೃತಿಕ ಅಧ್ಯಯನಕ್ಕಂತೂ ಅಮೂಲ್ಯ ಆಕರಗಳಾಗಬಲ್ಲುವು. ಇವುಗಳಂತೆ ಮನೆತನದ ಅಡ್ಡ ಹೆಸರುಗಳನ್ನು ಅಧ್ಯಯನ ಮಾಡುವುದೂ ಅಗತ್ಯವಿದೆ. 'ಅಡ್ಡ ಹೆಸರುಗಳಲ್ಲಿ ಕನ್ನಡ ಸಂಸ್ಕೃತಿ ಅಡಗಿದೆ'[17]. ಸ್ಥಳನಾಮ ಹಾಗೂ ಮನೆತನದ ಅಡ್ಡ ಹೆಸರುಗಳ ಅಧ್ಯಯನವಿಂದು ಸಾಂಸ್ಕೃತಿಕ ದೃಷ್ಟಿಯಿಂದ ಆಗಬೇಕಾಗಿದೆ. ಗುಲಬರ್ಗಾ ತಾಲೂಕಿನ ಸ್ಥಳನಾಮಗಳನ್ನು ಭಾಷಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸಿದುದರ ಪರಿಣಾಮಗಳನ್ನು ಈ ಕೆಳಗಿನ ವೈಶಿಷ್ಟ್ಯಗಳನ್ನು ಗುರುತಿಸಲಾಗಿದೆ.

1. ಮುಸ್ಲಿಂ ಅರಸರ ಆಡಳಿತ, ಪ್ರಭಾವ, ಸಂಸ್ಕೃತಿ ಹಿಂದೂಗಳ ಮೇಲೆ ಆದುದರ ಪರಿಣಾಮವಾಗಿ ಈ ತಾಲೂಕಿನ ಹಲವು ಸ್ಥಳನಾಮಗಳು ಉರ್ದುಮಯವಾಗಿವೆ.

2. ದಕ್ಷಿಣ ಕರ್ನಾಟಕ ಊರ ಹೆಸರುಗಳಿಗಿಂತ ಗುಲಬರ್ಗಾ ತಾಲೂಕಿನ ಊರ ಹೆಸರುಗಳು ಸಾಂಸ್ಕೃತಿಕ ದೃಷ್ಟಿಯಿಂದ ಭಿನ್ನವಾಗಿವೆ.

3. ಈ ತಾಲೂಕಿನ ಬಹುತೇಕ ಊರ ಹೆಸರುಗಳು ಗುಲಬರ್ಗಾ ಕನ್ನಡವು ಒಂದು ಪ್ರತ್ಯೇಕವಾದ ಉಪಭಾಷೆಯೆಂಬುದನ್ನು ಎತ್ತಿ ತೋರಿಸುವಂತಿವೆ.

4. ಇಲ್ಲಿ 'ದುರ್ಗ'ದಿಂದ ಕೊನೆಗೊಳ್ಳುವ ಊರುಗಳಿಲ್ಲ. 'ದುರ್ಗ' ಎಂದರೆ ಕೋಟೆ ಕೊತ್ತಲಗಳ ಮಧ್ಯೆ ಇರುವ ಊರುಗಳು ಈ ತಾಲೂಕಿನಲ್ಲಿ ಇಲ್ಲವೆಂಬುದನ್ನು ಗಮನಿಸಬೇಕು.

5. ಈ ತಾಲೂಕಿನಲ್ಲಿ ತಗ್ಗುದಿನ್ನೆ. ಗುಡ್ಡಗಾಡು ಪ್ರದೇಶ ಇಲ್ಲವೆನ್ನುವಷ್ಟು ಕಡಿಮೆ ಬಯಲು ಪ್ರದೇಶವೇ ಹೆಚ್ಚಾಗಿದೆ. ಇದನ್ನು ಇಲ್ಲಿನ ಊರ ಹೆಸರುಗಳು ಸೂಚಿಸುತ್ತವೆ. ವಿಶಾಲವಾದ, ಸಮತಲವಾದ ಬಯಲು ಪ್ರದೇಶ, ಕೃಷಿ ಪ್ರದೇಶದಲ್ಲಿ ಊರುಗಳಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ.

**ಅನುಬಂಧ :**

ಗುಲಬರ್ಗಾ ತಾಲೂಕಿನಲ್ಲಿ ಬರುವ ಎಲ್ಲ ಊರುಗಳನ್ನು ಅಧ್ಯಯನ ಅನುಕೂಲತೆಗಾಗಿ ಈ ಕೆಳಗಿನಂತೆ ವಿಭಜಿಸಲಾಗಿದೆ.

1. **ಊರು** : ಕೋಳೂರು, ಜೋಗೂರು, ಗರೂರ, ಬೇಲೂರ, ಕಡಬೂರ, ನಾಗೂರ, ಹರಸೂರ, ವೆಂಕಟಬಿನ್ನೂರ, ತಾಡ ತೆಗನೂರ, ನದಿ ಸಿಣ್ಣೂರ, ಸೀತ್ನೂರ, ಹೆರೂರ (ಬಿ) ದಿನಸಿ ಕುರನೂರ, ಭೂಪಾಲ ತೆಗನೂರ, ಖಾಜಕೊಟ್ನೂರ, ಬೇಲೂರ (ಬಿ) ಬನ್ನೂರ, ಕನ್ನೂರ, ಸಣ್ಣೂರ, ಕಲ್ ಬೆನ್ನೂರ, ಕಾಳಗನೂರ, ಉದನೂರ, ಕಪನೂರ, ನಂದೂರ (ಬಿ), ಸಿನ್ನೂರ, ನಂದಿಕೂರ, ಕೋಟನೂರ, ಕುಸನೂರ, ಕಲೆಬೆನ್ನೂರ.

**2. ಪುರ :** ಧರ್ಮಾಪುರ, ರಾಜಾಪೂರ, ಆಜಾದಪುರ, ತಾಜಸುಲ್ತಾನಪುರ, ಜಾಪುರ, ಸಿರಗಾಪುರ, ದಸ್ತಾಪುರ, ಹಾಳಸುಲ್ತಾನಪುರ, ಕಮಲಾಪುರ, ಮಳಸಾಪುರ, ಹೀರಾಪುರ, ಹಸನಾಪುರ.

**3. ಹಳ್ಳಿ :** ಸೋಮನಾಥ ಹಳ್ಳಿ, ನಡುವಿನ ಹಳ್ಳಿ, ಭೀಮಳ್ಳಿ, ಹೊನ್ನಳ್ಳಿ, ಕವ್ವಳ್ಳಿ, ಕಟ್ನಳ್ಳಿ, ನಾಗನಹಳ್ಳಿ, ಮಳ್ಳಿ.

**4. ಗ್ರಾಮ – ಗಾ – ಗೆ – ಗಿ :** ಮಹಾಗಾಂವ, ಉಪಳಾಂವ, ಪಾಣೆಗಾಂವ, ಡೊಂಗರಗಾಂವ, ಇಟಗಾ, ಹಾಗರನಾ, ಹಿರೆಜಂಬಗಾ, ಕಲ್ಲ ಹಂಗರಗಾ, ಅಂಕಲಗಾ, ದೋರಜಂಬಗಾ ಕೆರೆ ಭೋಸಗಾ ಕವಲಗಾ (ಕೆ), ಕವಲಗಾ (ಬಿ), ಹಾಗರಗುಂಡಗಿ, ಸರಡಗಿ ಕೆಸರಟಗಿ, ಕೀರಣಗಿ, ಸಿಂದಗಿ, ಸಾವಳಗಿ, ಸ್ಟೇಷನ್ ಸಾವಳಗಿ, ಯಳವಂತಗಿ (ಕೆ) ಸಿರಸಗಿ, ಕಾಳಮಂದರಗಿ, ಜೀವಣಗಿ, ಗೋಗಿ, ನಾವದಗಿ, ಯಳವಂತಗಿ, ಭೂಸಣಗಿ, ಶ್ರೀನಿವಾಸ ಸರಡಗಿ.

**5. ಆಬಾದ :** ಪರಹತಾಬಾದ, ಪಿರೋಜಾಬಾದ, ಪೇಟ ಪಿರೋಜಾಬಾದ, ಇಟಗಾ ಅಹಮ್ಮದಾಬಾದ, ಜಾಫರಾಬಾದ, ಔರಾದ (ಕೆ), ಬಬಲಾದ(ಸಿಂದಗಿ), ಬಬಲಾದ, ಹಿರೇಔರಾದ.

**6. ಕಲ್ಲ – ಗಿಲ್ಲ :** ತಡಕಲ್ಲ, ತೊಂಡಕಲ್ಲ, ಹಡಗಿಲ್ಲ, ಹುಣಸಿಹಡಗಿಲ್ಲ.

**7. ಗೂಡ – ಮೂಡ :** ಅಲಗೂಡ, ಕಲ್ಮೂಡ.

**8. ಪೊಳಲು – ಹೊಳಲು – ಹಾಳ :** ಅಂತಪನಾಳ, ಮೈನಾಳ, ಬಸನಾಳ, ಕಾಡ್ನಾಳ, ವರನಾಳ, ಖಣದಾಳ, ಬಾಚನಾಳ, ರಾಜನಾಳ, ಭೀಮನಾಳ, ನವನಿಹಾಳ.

**9. ವಾಡ – ವಾಡಿ :** ಬೋಳೆವಾಡ, ಪಟವಾಡ, ಬಳವಾಡ, ಹೊಸವಾಡಿ, ಗೊಬ್ಬರವಾಡಿ, ಮಹಾಗಾಂವವಾಡಿ.

**10. ಕೆರೆ>ಗೆರೆ, ಗೆರಾ>ಗೇರಿ :** ತಾವರಗೆರೆ, ವಡಗೇರಾ (ವಡಗೇರಿ).

**11. ಮಡಿ :** ಕಗ್ಗನಮಡಿ

**12. ಕಿಣ್ಣಿ – ಕಡಣಿ :** ಕಿಣ್ಣಿರೋಡ್, ಕಿಣ್ಣಿಸರಪೋಸ್, ಕಡಣಿ, ಶೆರಡೋಣ.

**13. ಪಾಳಾ :** ಪಾಳ್ಯ

**14. ಗುತ್ತಿ :** ಮರಗುತ್ತಿ, ಮಾಲಗತ್ತಿ.

**15. ಓಳಿ :** ಓಕಳಿ, ಸಯ್ಯದಚಿಂಚೋಳಿ.

**16. ಅಂಚಿ :** ಯಂಕಂಚಿ, ಮರಮಂಚಿ, ಹರಕಂಚಿ.

**17. ಕುಂದ, ಕೋಟೆ :** ಹೊಳಕುಂದಾ, ಮೇಳಕುಂದಾ, ಹತಗುಂದಾ, ಬೆಳಕೋಟಾ, ಕುರಿಕೋಟಾ.

**18. ಖೇಡ :** ಖೇಡ, ನೀಲಖೇಡ, ಗಣಜಲಖೇಡ.

* * *

**ಅಡಿಟಿಪ್ಪಣಿಗಳು :**

1. ಸವದತ್ತಿಮಠ, ಸಂಗಮೇಶ: 'ಕನ್ನಡ ಭಾಷಾ ಪ್ರಭೇದಗಳ ನಿರ್ಮಾಣ ಕಾರಣಗಳು'. 'ಕರ್ನಾಟಕ ಭಾರತಿ', ಸಂ-9, ಸಂ:12, ಪು:48.
2. ಸವದತ್ತಿಮಠ, ಸಂಗಮೇಶ ಅದೇ ಪುಟ-47.
3. ಸವದತ್ತಿಮಠ ಸಂಗಮೇಶ: ಜನಪದ ಭಾಷಾ ಸಮೀಕ್ಷೆ ಪುಟ-65. (ಊರ ಹೆಸರುಗಳು)
4. ಕಲಬುರ್ಗಿ ಎಂ.ಎಂ. 'ಕೆ-ಗೆ ಕಿ-ಗಿ' ಎಂಬ ಲೇಖನ. (ಸಂಶೋಧನ ವ್ಯಾಸಂಗ. ಸಂಪುಟ-1, ಸಂಚಿಕೆ-5, ಪುಟ-2, ಸಂ.ಡಾ॥ ಸಂಗಮೇಶ ಸವದತ್ತಿಮಠ)
5. ಕಲಬುರ್ಗಿ ಎಂ.ಎಂ.: ಕನ್ನಡ ನಾಮ ವಿಜ್ಞಾನ, ಪುಟ-27.
6. ಕಲಬುರ್ಗಿ ಎಂ.ಎಂ. 'ಕೆ-ಗೆ ಕಿ-ಗಿ' ಎಂಬ ಲೇಖನ. (ಸಂಶೋಧನ ವ್ಯಾಸಂಗ. ಸಂಪುಟ-1, ಸಂಚಿಕೆ-6, ಪುಟ-2, ಸಂ.ಡಾ॥ ಸಂಗಮೇಶ ಸವದತ್ತಿಮಠ).
7. ಎಲಿಗಾರ ಚೆನ್ನಕ್ಕ 'ಕೆರೆ ಗ್ರಾಮನಾಮ ವಿವೇಚನೆ' ಲೇಖನ (ಸಾಧನೆ ಸಂಪುಟ-14, ಸಂಚಿಕೆ-3)
8. ಖಂಡೋಬಾ ಪಿ.ಕೆ: ಕರ್ನಾಟಕದ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ. ಪುಟ-21.
9. ಖಂಡೋಬಾ ಪಿ.ಕೆ: ಕರ್ನಾಟಕದ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ. ಪುಟ-21.
10. ಸವದತ್ತಿಮಠ ಸಂಗಮೇಶ: ಜನಪದಭಾಷಾ ಸಮೀಕ್ಷೆ, ಪುಟ-6.

11. ಗುಲಬರ್ಗಾ ಜಿಲ್ಲೆಯ ತಾಲೂಕು ಸ್ಥಳವಾದ 'ಅಫಜಲಪೂರ' ಅಫಜಲಖಾನನೆಂಬ ಮಂತ್ರಿಯ ಹೆಸರನ್ನು ಹೊತ್ತು ನಿಂತುದನ್ನಿಲ್ಲಿ ಸ್ಮರಿಸಬಹುದು. ಬಿಜಾಪುರ ಜಿಲ್ಲೆಯ ಕೂಡಲಸಂಗಮದೆದುರು ಹರಿವ ನದಿ ಬಸವಣ್ಣನ ಸ್ಮರಣಾರ್ಥ ಈಗ 'ಬಸವಸಾಗರ'ವೆಂದು ಪ್ರಚಲಿತವಾಗಿದೆ.

12. ಸುಲ್ತಾನಪುರ, ಹೀರಾಪುರ: ಈ ಊರುಗಳ ಆದಿಲ್ ಶಾಹಿಯ ಪತ್ನಿಯರ ಹೆಸರು ಹೊತ್ತು ನಿಂತಂತೆ ಈ ಜಿಲ್ಲೆಯ ಸುರಪುರ ನಾಯಕ ದೊರೆಗಳ ಉಪಪತ್ನಿಯರಾದ ರಂಗಮ್ಮ, ವೆಂಕಮ್ಮ, ರುಕ್ಕಮ್ಮ, ಹಸನಮ್ಮ ಇವರ ಸ್ಮರಣಾರ್ಥ ರಂಗಂಪೇಟೆ, ವೆಂಕಟಾಪುರ, ರುಕ್ಕುಂಪೇಟೆ ಹಾಗೂ ಹಸನಾಪುರ ಎಂಬ ಹೆಸರು ಹೊಂದಿ ಈಗಲೂ ಇರುವುದನ್ನು ಇಲ್ಲಿ ಸ್ಮರಿಸಬಹುದು.

13. ಶಿವಾನಂದ ವಿ 'ಕಲಬುರ್ಗಿ ಜಿಲ್ಲೆಯ ಶಿಲಾಶಾಸನಗಳು', ಪುಟ-2.

14. ಶಿವಾನಂದ ವಿ 'ಕಲಬುರ್ಗಿ ಜಿಲ್ಲೆಯ ಶಿಲಾಶಾಸನಗಳು', ಪುಟ-3.

15. ಕಲಬುರ್ಗಿ ಎಂ.ಎಂ. 'ಕೆ-ಗೆ ಕಿ-ಗಿ' ಎಂಬ ಲೇಖನ. (ಸಂಶೋಧನ ವ್ಯಾಸಂಗ, ಸಂಪುಟ-1, ಸಂಚಿಕೆ-6, ಪುಟ-2, ಸಂ.ಡಾ॥ ಸಂಗಮೇಶ ಸವದತ್ತಿಮಠ).

16. ಬಿ.ಎನ್. ಶ್ರೀಸತ್ಯನ್, ಗುಲಬರ್ಗಾ ಡಿಸ್ಟ್ರಿಕ್ಟ್ ಗೆಜಿಟರ್, ಪುಟ-1.

17. ಸವದತ್ತಿಮಠ ಸಂಗಮೇಶ: ಜನಪದಭಾಷಾ ಸಮೀಕ್ಷೆ, ಪುಟ-77

* * *

# 4. ಇತಿಹಾಸ ರಚನೆಯ ಆಕರವಾಗಿ ವಸ್ತುಸಂಗ್ರಹಾಲಯಗಳು

– ಡಾ॥ ಕೆ.ಜಿ. ವೆಂಕಟೇಶ ಜೋಯಿಸ್

## ಅ) ವಸ್ತು ಸಂಗ್ರಹಾಲಯ

'ಮ್ಯೂಸಿಯಂ' ಪದಕ್ಕೆ ಅರ್ಥ ವಿವರಣೆ ನೀಡುವುದು ಕಷ್ಟ. ಗ್ರೀಕ್ ಮೂಲದ ಇದು 'ಕಲಾಭಿಮಾನಿ ದೇವತೆಗಳ ಗರ್ಭಗೃಹ' ಎಂಬ ಅರ್ಥವನ್ನು ಹೊಂದಿದೆ. ಕಲಾಭಿಮಾನಿ ದೇವತೆಯು 'ವಿದ್ಯೆ – ಕಲೆ'ಗಳ ಅಧಿದೇವತೆ. ಒಂದು ಕಾಲದಲ್ಲಿ ಅನುಪಯುಕ್ತ ವಸ್ತಗಳ ಸಂಗ್ರಹ ಎಂದು ಗುರುತಿಸಲಾಗುತ್ತಿದ್ದ ವಸ್ತುಸಂಗ್ರಹಾಲಯಗಳು ಇಂದು ವಿಶೇಷಾರ್ಥದಲ್ಲಿ ಗಮನ ಸೆಳೆಯುತ್ತಿದೆ. ನಿರ್ದಿಷ್ಟ ಪ್ರದೇಶದ, ಸಮುದಾಯದ ಕಲೆ ಮತ್ತು ಸಂಸ್ಕೃತಿಗಳನ್ನು ಉಳಿಸಿಕೊಂಡು ಬರುವುದರಲ್ಲಿ ಮಾತ್ರವಲ್ಲದೆ ಮಾನವನ ಸೃಜನ ಶೀಲತೆ ಮತ್ತು ಪ್ರಕೃತಿಯ ಮೇಲಣ ನಿಯಂತ್ರಣದ ಬಗ್ಗೆ ಮೂಲಭೂತ ಸಾಕ್ಷ್ಯಗಳನ್ನು ಸಾದರ ಪಡಿಸುವುದರ ಮೂಲಕ ಮಾನವತೆಯ ಸಾಮಾಜಿಕ, ಸಾಂಸ್ಕೃತಿಕ ಉತ್ಥಾನಕ್ಕೆ ನೆರವಾಗುವುದರಲ್ಲು ಜೀವಂತ ಪಾತ್ರ ವಹಿಸುವುದು ಇಂದು ವಸ್ತುಸಂಗ್ರಹಾಲಯಗಳ ಉದ್ದೇಶವಾಗಿದೆ. ವಸ್ತುಗಳ ಸಂಗ್ರಹದ ಜೊತೆಗೆ ಸಂರಕ್ಷಣೆ, ಶೈಕ್ಷಣಿಕ ಗುಃ ಪ್ರಾಧಾನ್ಯತೆ ಪಡೆಯುತ್ತಿದೆ. ಮೂಲ ವಸ್ತುಗಳು ಹಾಗೂ ಅವುಗಳ ಪ್ರತಿ ಕೃತಿಗಳನ್ನು ತಮ್ಮ ಕಥೆಯನ್ನು ತಾವೇ ಹೇಳುವಂತೆ ಜೋಡಿಸಲಾಗುತ್ತಿದೆ. ಜನತೆಗೆ ಮನರಂಜನೆಯ ಜೊತೆಗೆ ಜ್ಞಾನಾಭಿವೃದ್ಧಿಗೆ ನೆರವಾಗುತ್ತಿದೆ.

18 – 19ನೇ ಶತಮಾನದಲ್ಲಿ ವಸ್ತುಸಂಗ್ರಹಾಲಯಗಳು ಸಾಮಾನ್ಯವಾಗಿ ಗಣ್ಯರ, ಪಂಡಿತರ ಮತ್ತು ಕಲಾಭಿಮಾನಿಗಳಿಗೆ ಮಾತ್ರ ಸೀಮಿತವಾಗಿದ್ದಿತು. ಭಾರತದ ವಸ್ತು ಸಂಗ್ರಹಾಲಯದ ಮುನ್ಸೂಚಕವಾಗಿ ಕುತುಹಲಕಾರಕವಾದ ಖಾಸಗಿ ಸಂಗ್ರಹಗಳು ಹಾಗೂ ರಾಜರ ಕಲೆ ಪುರಾತತ್ವ ವಸ್ತುಗಳ ಸಂಗ್ರಹಗಳು ಮಾತ್ರ ಇದ್ದವು. ಸುಮಾರು ಎರಡುನೂರು ವರ್ಷಗಳಿಂದ ಭಾರತದಲ್ಲಿ ವಸ್ತುಸಂಗ್ರಹಾಲಯ ಚಳುವಳಿಯನ್ನು ಗುರುತಿಸಬಹುದು. 18ನೇ ಶತಮಾನದಲ್ಲಿ ಉಂಟಾದ ಸಾಂಸ್ಕೃತಿಕ ಅರಿವು, ಜ್ಞಾನಪಿಪಾಸೆ ವಸ್ತು ಸಂಗ್ರಹಾಲಯಗಳ ಬಗ್ಗೆ ಇದ್ದ ಮೂಲಭೂತ ದೃಷ್ಟಿ ಬದಲಾಗಲು ಕಾರಣವಾಯಿತು.

ಭಾರತದಲ್ಲಿ ಮೊದಲು ವಸ್ತುಸಂಗ್ರಹಾಲಯಗಳ ಬಗ್ಗೆ ಸಂಸ್ಕೃತದಲ್ಲಿ ಉಲ್ಲೇಖ ಕಂಡು ಬರುತ್ತದೆ. ಸಾಮಾನ್ಯವಾಗಿ ರಾಜರು, ಶ್ರೀಮಂತರು ಬಿಡುವಿನ ವೇಳೆಯನ್ನು

ಕಳೆಯಲು ಅಲಂಕಾರಿಕ ವಸ್ತುಗಳನ್ನು ಪ್ರದರ್ಶಿಸುತ್ತಿದ್ದರು. ಶ್ರೀಸಾಮಾನ್ಯರಿಗಲ್ಲಿ ಅವಕಾಶವಿರಲಿಲ್ಲ. 1796ರಲ್ಲಿ ಬಂಗಾಳದ ಏಷಿಯಾಟಿಕ್ ಸೋಸೈಟಿ ತನ್ನ ವಸ್ತು ಸಂಗ್ರಹಾಲಯವನ್ನು ಮೊದಲು ಜನತೆಗೆ ವೀಕ್ಷಣೆಗೆ ತೆರೆಯಲು ಮುಂದಾಯಿತು. ಅಲ್ಲಿಂದ ಪ್ರಾರಂಭವಾದ ವಸ್ತುಸಂಗ್ರಹಾಲಯ ಅಭಿವೃದ್ಧಿ ಇಂದು ದೇಶಾದ್ಯಂತ ವಿವಿಧ ಕ್ಷೇತ್ರಗಳಲ್ಲಿ ಆಕರ್ಷಿಸುತ್ತಾ ಜ್ಞಾನಭಿವೃದ್ಧಿಗೆ ಅವಕಾಶ ಮಾಡಿಕೊಡುತ್ತಿದೆ. ವಸ್ತುಗಳ ಮಹತ್ವವನ್ನು, ವಸ್ತುವನ್ನು ಆದರಿಸಿ ಸಮೀಕ್ಷಿಸಿ ಅದರ ವಿಶೇಷತೆಯನ್ನು ಪ್ರತಿಪಾದಿಸುವಲ್ಲಿ ವಸ್ತುಸಂಗ್ರಹಾಲಯಗಳು ಪ್ರಮುಖ ಪಾತ್ರವಹಿಸುತ್ತವೆ. ವಿಶ್ವದ ಎಲ್ಲೆಡೆಯಲ್ಲು ವಿವಿಧ ರೀತಿಯ ವಸ್ತುಸಂಗ್ರಹಾಲಯಗಳು ತಲೆ ಎತ್ತುತ್ತಿವೆ. ಅವು ತಮ್ಮದೇ ಆದ ನೈತಿಕ ಮೌಲ್ಯಗಳನ್ನು ಸಾಂಸ್ಕೃತಿಕ ಮಹತ್ವವನ್ನು ಹೊಂದಿವೆ.

ಅಂತರಾಷ್ಟ್ರೀಯ ಮಟ್ಟದಲ್ಲಿ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿ ಪೋಷಿಸಿ ಬೆಳೆಸಿಕೊಂಡು ಬರುವಲ್ಲಿ ಭಾರತಕ್ಕಿರುವಷ್ಟು ಅವಕಾಶ ಬೇರೆ ದೇಶಗಳಿಗಿಲ್ಲ ಎನ್ನಬಹುದು. ರಾಷ್ಟ್ರೀಯ, ಸಾಂಸ್ಕೃತಿಕ ಸಂಪತ್ತಿನಿಂದ ವಿವಿಧ ವಸ್ತುಗಳು ಭಾರತದ ವಿವಿದೆಡೆಗಳಲ್ಲಿ ವಿವಿಧ ವೈಚಿತ್ರ್ಯಗಳನ್ನು ಹೊಂದಿ ಹೇರಳವಾಗಿ ಉಪಲಬ್ಧವಾಗಿವೆ. ಖಾಸಗೀ ಮಟ್ಟದಲ್ಲಿ ಭಾರತದಲ್ಲಿ ವಸ್ತುಸಂಗ್ರಹಾಲಯಗಳು ಗಮನಾರ್ಹವಾಗಿ ಆಸಕ್ತಿಯಿಂದ ಅಧ್ಯಯನ ರೂಪದಲ್ಲಿ ಸಂಗ್ರಹಣೆ, ಸಂಶೋಧನೆ ನಡೆಯುತ್ತಿರುವುದು ಈ ನಿಟ್ಟಿನಲ್ಲಿ ಉಲ್ಲೇಖಾರ್ಹ.

ವಸ್ತುಸಂಗ್ರಹಾಲಯ ತಜ್ಞರು ವಸ್ತುಸಂಗ್ರಹಾಲಯ ಶೇಖರಣೆಯನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿಭಜಿಸಿದ್ದಾರೆ.

1. ರಾಷ್ಟ್ರೀಯ ಸಂಪತ್ತು; 2. ಪ್ರಮುಖವಾದ ಸಾಂಸ್ಕೃತಿಕ ಸಂಪತ್ತು; 3. ಸಾಮಾನ್ಯ ಪ್ರಾಮುಖ್ಯವಿರುವ ಸಾಂಸ್ಕೃತಿಕ ಪರಂಪರೆಯ ವಸ್ತುಗಳು; 4. ಸ್ವಾಭಾವಿಕ ಸಾಂಸ್ಕೃತಿಕ ಸಂಪತ್ತುಗಳು; 5. ಪ್ರಾದೇಶಿಕ ಸಾಂಸ್ಕೃತಿಕ ಸಂಪತ್ತುಗಳು.

### 1. ರಾಷ್ಟ್ರೀಯ ಸಂಪತ್ತು

ನವಶಿಲಾಯುಗ, ತಾಮ್ರಶಿಲಾಯುಗ, ಬೃಹತ್ ಶಿಲಾಯುಗ ಎಂಬ ಅತ್ಯಂತ ಪ್ರಾಚೀನ ಕಾಲಗಳಲ್ಲಿಯೂ ಜನವಸತಿ ಇದ್ದುದಕ್ಕೆ ನಮಗೆ ಸಾಕ್ಷಿ ಪುರಾವೆಗಳು ದೊರೆಯುತ್ತವೆ. ಬಹು ಹಿಂದಿನ ತಾಮ್ರ, ಬಂಗಾರ, ಕಬ್ಬಿಣ, ಕಂಚು ಮೊದಲಾದ ಲೋಹಗಳ ಉಪಕರಣಗಳು, ಆಭರಣಗಳು, ಉತ್ಖನನ ಕಾಲದಲ್ಲಿ ದೊರೆತಿವೆ.

ಪ್ರಸಿದ್ಧವಾದ ದೇವಾಲಯಗಳು, ಕೋಟೆ, ಜಲಾವಾಸಸ್ಥಾನ, ಮಸೀದಿಗಳು, ಪ್ರಾಕೃತಿಕ ಅದ್ಭುತಗಳು, ಪ್ರಾಕೃತಿಕ ಅವಶೇಷಗಳು, ಪ್ರಾಕೃತಿಕ ವೈಶಿಷ್ಟ್ಯಗಳು, ಸುಂದರ ತಾಣಗಳು ಮೊದಲಾದವುಗಳು ರಾಷ್ಟ್ರೀಯ ಸಂಪತ್ತೆನಿಸಿವೆ. ಇವುಗಳಲ್ಲಿ ಕೆಲವು ರಾಷ್ಟ್ರ,

ಕೆಲವು ಅಂತರರಾಷ್ಟ್ರೀಯ ಸಂಪತ್ತುಗಳೆಂದು ಪರಿಗಣಿಸಿವೆ.

**2. ಪ್ರಮುಖವಾದ ಸಾಂಸ್ಕೃತಿಕ ಸಂಪತ್ತು.**

ಅಪೂರ್ಣವಾದ, ವಿವಿಧ ವೈಚಿತ್ರಗಳನ್ನು ಪಡೆದಿರುವ ವಸ್ತುಗಳು ಆಯಾ ದೇಶದ ಸಾಂಸ್ಕೃತಿಕ ಪರಂಪರೆಯನ್ನು ಪ್ರತಿಬಿಂಬಿಸುತ್ತಿದೆ. ಇವುಗಳು ಸಾಂಸ್ಕೃತಿಕ ಸಂಪತ್ತುಗಳೆಂದು ಪರಿಗಣಿತವಾಗಿದೆ. ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿರುವ ಮಯೂರ ಸಿಂಹಾಸನ, ರಾಜ ಮಹಾರಾಜರ ಅವಶೇಷಗಳು, ಇದಕ್ಕೆ ಉದಾಹರಣೆಯಾಗಿದೆ.

**3. ಸಾಮಾನ್ಯ ಪ್ರಾಮುಖ್ಯವಿರುವ ಸಾಂಸ್ಕೃತಿಕ ಪರಂಪರೆಯ ವಸ್ತುಗಳು:**

ಇವು ಐತಿಹಾಸಿಕ, ಸಾಮಾಜಿಕ, ತಾತ್ವಿಕ ಹಿನ್ನೆಲೆಯಲ್ಲಿ ಅರಿಯಲು ಉಪಯುಕ್ತವಾಗಿದೆ. ಜನಜೀವನದ ಹಿನ್ನೆಲೆಯನ್ನು ರೂಪಿಸುವ ಜಾನಪದ ಸಂಗ್ರಹವನ್ನು ಈ ಭಾಗದಲ್ಲಿ ಉದಾಹರಿಸಬಹುದು. ಸಾಂಸ್ಕೃತಿಕ ದೃಷ್ಟಿಕೋನದಲ್ಲಿ ಇವುಗಳು ಮಹತ್ವಪೂರ್ಣ ಬೆಳಕನ್ನು ಚೆಲ್ಲುವುದರಿಂದ ಇಂತಹವುಗಳನ್ನು ಕಡೆಗಣಿಸುವಂತಿಲ್ಲ. **ಸ್ವಾಭಾವಿಕ ಸಾಂಸ್ಕೃತಿಕ ಸಂಪತ್ತುಗಳು:** ರಾಷ್ಟ್ರೀಯ, ಅಂತರರಾಷ್ಟ್ರೀಯ ಸಂಪತ್ತುಗಳು ಅಲ್ಲದೇ ಆಯಾ ದೇಶದ ಸಾಂಸ್ಕೃತಿಕ ಪರಂಪರೆಯನ್ನು ಚಿತ್ರಿಸುವ ಮೂಲಕ ದೊರೆಕಿದ ಎಲ್ಲಾ ವಸ್ತುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಭಾರತದ ದೃಷ್ಟಿಯಲ್ಲಿ ಬೇಲೂರು, ಹಳೇಬೀಡು, ವಿಜಯನಗರ ಇತ್ಯಾದಿಗಳನ್ನು ಉದಾಹರಿಸಬಹುದು.

**4. ಪ್ರಾದೇಶಿಕ ಸಾಂಸ್ಕೃತಿಕ ಸಂಪತ್ತುಗಳು:**

ಒಂದು ಪ್ರದೇಶದ ಸಾಂಸ್ಕೃತಿಕ ಮಹತ್ವವನ್ನು ಪ್ರತಿಬಿಂಬಿಸುವ ವಸ್ತುಗಳು ಸಾಂಸ್ಕೃತಿಕ ಪ್ರತಿರೂಪಗಳಾಗಿರುತ್ತವೆ. ಒಂದು ಪ್ರದೇಶದ ಐತಿಹಾಸಿಕ ಮಹತ್ವವನ್ನು ತಿಳಿಯುವಲ್ಲಿ ಇವು ಸಹಕಾರಿಯಾಗುತ್ತವೆ.

ಭಾರತದಲ್ಲಿ ಅಂದಾಜು, ಎಲ್ಲಾ ಪ್ರಕಾರದ ವಸ್ತು ಸಂಗ್ರಹಾಲಯ ಸೇರಿ ಸುಮಾರು 602 ವಸ್ತುಸಂಗ್ರಹಾಲಯುಗಳನ್ನು ಗುರುತಿಸಲಾಗಿದೆ. ಕರ್ನಾಟಕದಲ್ಲಿ 36 ವಸ್ತುಸಂಗ್ರಹಾಲಯಗಳಿವೆ. ಇವು ಸುಮಾರು 30 ತರಹದ ಸಂಗ್ರಹಗಳನ್ನು ಒಳಗೊಂಡಿದೆ.

ಕರ್ನಾಟಕ ಇತಿಹಾಸವನ್ನು ತೆಗೆದುಕೊಂಡರೆ ಕ್ರಿ.ಪೂ.ದಲ್ಲಿ ಕರ್ನಾಟಕದ ಉತ್ತರಭಾಗ ನಂದರು, ಮೌರ್ಯರು ಆಳಿರಿರುವುದಿದೆ. ಇದಕ್ಕೆ ಶ್ರವಣಬೆಳಗೊಳದ ಬಸದಿಯಲ್ಲಿ ಉಲ್ಲೇಖವಿದೆ. ಚಂದ್ರಗುಪ್ತನ ಮೊಮ್ಮಗ ಅಶೋಕನ ಶಾಸನಗಳು ಚಿತ್ರದುರ್ಗ ಜಿಲ್ಲೆ ಮತ್ತು ಇತರೆಡೆ ದೊರೆತಿದೆ. ಶುಂಗ ವಂಶ ಕೆಲವು ಕಾಲ, ಶುಂಗಬೃತರು ಕೆಲವುಕಾಲ ಆಡಳಿತ ನಡೆಸಿದ್ದಾರೆ. ಶಾತವಾಹನರು ತಮ್ಮ ಆಡಳಿತದಿಂದ ಶಾತವಾಹನ

ಶಕೆಯನ್ನು ಪ್ರಾರಂಭಿಸಿದ್ದಾರೆ. ಬನವಾಸಿಯಿಂದ ಕದಂಬರು, ಅವರ ನಂತರ ಗಂಗರು, ಬಾದಾಮಿ ಚಾಲುಕ್ಯರು, ಮಾನ್ಯಕೇಟದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ದ್ವಾರಸಮುದ್ರದ ಹೊಯ್ಸಳರು, ವಿಜಯನಗರದ ಅರಸರು, ಕೆಳದಿ, ಮೈಸೂರು ಅರಸರು, ಟಿಪ್ಪು, ಹೈದರ್, ಬಹುಮನಿ ರಾಜ್ಯ, ಪಾಳೆಗಾರರುಗಳು, ಅಮಾತ್ಯರು, ದಂಡಾಧಿಕಾರಿಗಳು ರಾಜ್ಯವಾಳಿದ್ದಾರೆ. ಆಯಾ ರಾಜರ, ಕಾಲದ ಸಂಸ್ಕೃತಿ ಮಹತ್ವವನ್ನು ತಿಳಿಸುವ ಅವಶೇಷಗಳು ದೊರೆತಿವೆ. ಅವುಗಳನ್ನು ಸಂರಕ್ಷಿಸುವ ಪ್ರಯತ್ನ ವಸ್ತುಸಂಗ್ರಹಾಲಯಗಳಿಂದ ಆಗಿದೆ. ಅವು ಈ ರಾಜಮನೆತನಗಳ ಇತಿಹಾಸವನ್ನು ರಚಿಸುವಲ್ಲಿ ಆಕರವನ್ನು ಒದಗಿಸುತ್ತವೆ.

### ಆ) ಶಾಸನಗಳ ಸಂಗ್ರಹಾಲಯ:

ಕರ್ನಾಟಕವನ್ನೇ ತೆಗೆದುಕೊಂಡರೆ ಸುಮಾರು 25,000ಕ್ಕೂ ಮೇಲ್ಪಟ್ಟು ಶಾಸನಗಳು ದೊರೆತಿವೆ. ಅವುಗಳಲ್ಲಿ ದಾನ ಶಾಸನಗಳೇ ಹೆಚ್ಚು. ದೇವಾಲಯ, ಮಠ, ಅರವಟ್ಟಿಗೆ, ಸತ್ರ, ಕೆರೆ ಮೊದಲಾದ ಸಾರ್ವಜನಕ ಕೆಲಸಗಳಿಗೆ ಉದಾರವಾಗಿ ಜನರು, ರಾಜರು, ಶ್ರೀಸಾಮಾನ್ಯರು ಕೊಟ್ಟ ದಾನ ದತ್ತಿ, ವಿಷಯಗಳು ಇವುಗಳಿಂದ ತಿಳಿಯಲ್ಪಡುತ್ತವೆ. ಶಾಸನಗಳನ್ನು ಬಿಟ್ಟರೆ ಬಹುಮಟ್ಟಿಗೆ ವೀರಗಲ್ಲು ಮತ್ತು ಮಹಾಸತಿ ಕಲ್ಲುಗಳು ಕಂಡುಬರುತ್ತವೆ. ವೀರ ಮತ್ತು ಮಾಸ್ತಿಕಲ್ಲುಗಳು ಒಂದೇ ಬಗೆಯ ಸ್ಮಾರಕಗಳು. ತನ್ನ ರಾಜನಿಗಾಗಿ ಯುದ್ಧದಲ್ಲಿ ಮಡಿದ ವೀರಯೋಧ, ತನ್ನ ಪತಿಗಾಗಿ ಚಿತೆ ಏರಿದ ಸ್ತ್ರೀ, ಇವರುಗಳ ಸ್ವಾಮಿನಿಷ್ಠೆ, ಕೃತಜ್ಞತೆ, ತ್ಯಾಗ, ಇವುಗಳ ಚಿತ್ರಣ ಇದರಲ್ಲಿದೆ. ಅಂತಹ ವೀರ, ಮಹಾಸತಿಗಳ ಬಗ್ಗೆ ಜನ ಮೆಚ್ಚುಗೆಯಿಂದ, ಭಕ್ತಿಯಿಂದ ಅವರ ಚಿತ್ರಗಳನ್ನು, ವಿಷಯವನ್ನು ಕಲ್ಲಿನಲ್ಲಿ ಕೆತ್ತಿಸಿ ಈ ಲೋಕದಲ್ಲಿ ಶಾಶ್ವತವಾಗಿ ಉಳಿಯಲೆಂದು ಹಾರೈಸಿದ್ದಾರೆ. ಅಂತಹುಗಳನ್ನು ಸಂಗ್ರಹಿಸಿ, ಸಂರಕ್ಷಿಸುವ ಕೆಲಸ ವಸ್ತು ಸಂಗ್ರಹಾಲಯದಿಂದ ನಡೆಯುತ್ತಿದೆ. ಜೈನರ ಸಲ್ಲೇಖನ ವ್ರತ ಆ ಮೂಲಕ ಪ್ರಾಣತ್ಯಾಗ ಮಾಡಿದ ಮಹನೀಯರ ವಿಷಯವನ್ನು ನಿಷಧಿ ಕಲ್ಲುಗಳು, ಸಿಡಿ ಹೋದವರ ಬಗ್ಗೆ ಸಿಡಿ ಕಲ್ಲುಗಳು, ಗಡಿಯನ್ನು ಸೂಚಿಸಲು ಹಾಕುವ ಗಡಿಕಲ್ಲುಗಳು (ಲಿಂಗಮುದ್ರೆ, ವಾಮನ ಮುದ್ರೆ) ಹೀಗೆ ತಾಮ್ರದಿಂದ ಅಭರಣವರೆಗೆ ಇರುವ ಶಾಸನಗಳು ಆಯಾ ಕಾಲಗಟ್ಟದ ಸಾಮಾಜಿಕ ಆಚರಣೆಗಳು, ಆರ್ಥಿಕ ವ್ಯವಸ್ಥೆ ಮೊದಲಾದವುಗಳನ್ನು ಅಭ್ಯಸಿಸಲು ಆಕರ ಒದಗಿಸುತ್ತವೆ. ಸಂಶೋಧಕರಿಗೆ ಇವು ಲಿಖಿತ ಆಧಾರಗಳಾಗಿರುವುದರಿಂದ ಕರಾರುವಾಕ್ಕಾಗಿ ಇತಿಹಾಸ ರಚನೆಗೆ ಸಹಕಾರಿಯಾಗಿದೆ. ಸಂಗ್ರಹಾಲಯಗಳು ಇಂತಹವುಗಳನ್ನು ರಕ್ಷಿಸಿ ವಿದ್ವಾಂಸರಿಗೆ ಅನುಕೂಲ ಮಾಡಿಕೊಟ್ಟಿವೆ.

### ಇ) ಹಸ್ತಪ್ರತಿ ಮತ್ತು ಪತ್ರಾಗಾರ ಸಂಗ್ರಹಾಲಯ :

ವಸ್ತುಸಂಗ್ರಹಾಲಯ ಸಂಗ್ರಹದಲ್ಲಿ ಪ್ರಮುಖವಾಗಿ ಪ್ರಾಚೀನ ದಾಖಲೆಗಳು,

ಕಡತಗಳು, ಹಸ್ತಪ್ರತಿಗಳು, ಕಾಗದಪತ್ರಗಳು, ಕೈಫಿಯತ್ತುಗಳು ಸಂಗ್ರಹಿಸಲ್ಪಡುತ್ತವೆ. ಪತ್ರಾಗಾರ ಇಲಾಖೆಯು ದಾಖಲೆಗಳ ಸಂಗ್ರಹ, ಸಂರಕ್ಷಣೆ ಮಾಡುತ್ತಿವೆ. ಈ ದಾಖಲೆಗಳು ಪ್ರಾಚ್ಯವಸ್ತುಗಳು ನೀಡುವ ಮಾಹಿತಿಗಿಂತಲೂ ಹೆಚ್ಚು ಕರಾರುವಕ್ಕಾಗಿ ಆಯಾ ಕಾಲದ ಘಟನೆಗಳನ್ನು ಅರಿಯುವುದಕ್ಕೆ ಸಹಕಾರಿಯಾಗಿವೆ. ಮಠ ಮಾನ್ಯಗಳಲ್ಲಿರುವ ಇಂತಹ ಸಂಗ್ರಹಗಳು ಅಂದಿನ ಸಮಾಜದ, ಧಾರ್ಮಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಅರಿಯಲು ಸಹಕಾರಿಯಾಗಿವೆ. ಕಂದಾಯದ ವ್ಯವಸ್ಥೆಯ ಚಿತ್ರಣವನ್ನು ಕಡತಗಳು ನೀಡುತ್ತವೆ. ಸಾಹಿತ್ಯಿಕ ಮೌಲ್ಯವುಳ್ಳ ಐತಿಹಾಸಿಕ ಕೃತಿಗಳು ಸಹ ಇತಿಹಾಸ ರಚನೆಗೆ ಪ್ರಮುಖ ಆಕರಗಳಾಗಿ ಪರಿಗಣಿತವಾಗಿದೆ. ವಸ್ತುಸಂಗ್ರಹಾಲಯಗಳು ಇಂತಹವುಗಳನ್ನು ಸಂರಕ್ಷಿಸುವುದರಿಂದ ಇತಿಹಾಸಕಾರರಿಗೆ ಆಕರಗಳು ಒಂದೇ ಕಡೆ ಲಭ್ಯವಾಗಲು ಸಹಾಯಕವಾಗಿವೆ.

### ಈ) ನಾಣ್ಯ ಸಂಗ್ರಹಾಲಯ:

ವಸ್ತುಸಂಗ್ರಹಾಲಯಗಳ ಸಂಗ್ರಹದಲ್ಲಿ ನಾಣ್ಯಗಳಿಗೆ ವಿಶೇಷ ಸ್ಥಾನವಿದೆ. ನಾಣ್ಯಗಳ ಪರಿಚಯ ಎಲ್ಲರಿಗೂ ಇದ್ದರೂ ಅದರ ಪರಂಪರೆ ತಿಳಿದಿರುವುದಿಲ್ಲ. ಕರ್ನಾಟಕದಲ್ಲಿ ಸುಮಾರು ಎರಡು ಸಾವಿರ ವರ್ಷಗಳಿಂದ ನಾಣ್ಯ ಬಳಕೆ ಇತ್ತು. ನಮ್ಮ ದೇಶದ ನಾಣ್ಯ ಸಂಪತ್ತಿನ ಬಗ್ಗೆ ವಿದ್ವಾಂಸರುಗಳು ಸಾಕಷ್ಟು ಶೋಧ ನಡೆಸಿದ್ದಾರೆ. ಹಾಗಿದ್ದೂ ಇನ್ನೂ ಅನೇಕ ರಾಜ ಮನೆತನಗಳ ನಾಣ್ಯಗಳು ಬೆಳಕಿಗೆ ಬರದೇ ನಾಣ್ಯ ಇತಿಹಾಸದಲ್ಲಿ ಕೊರತೆಯಾಗಿದೆ. ದೇಶದ ಸಾಂಸ್ಕೃತಿಕ, ರಾಜಕೀಯ, ಇತಿಹಾಸ ರಚನೆಗೆ ಅವು ಪ್ರಮುಖ ಪಾತ್ರ ವಹಿಸಿವೆ. ವಸ್ತುಸಂಗ್ರಹಾಲಯಗಳು ನಾಣ್ಯಗಳ ಸಂರಕ್ಷಣೆಗೆ ತೊಡಗಿರುವುದು ಮಾತ್ರವಲ್ಲದೆ ಖಾಸಗಿಯಾಗಿಯೂ ಸಾಕಷ್ಟು ಸಂಗ್ರಾಹಕರಿದ್ದಾರೆ.

ನಾಣ್ಯಗಳು ಇತಿಹಾಸ ರಚನೆಯಲ್ಲಿ ಉತ್ತಮ ಸ್ಥಾನ ಪಡೆದಿದೆ. ನೋಡಲು ಸಣ್ಣದಾಗಿದ್ದರೂ ಅವುಗಳು ತಿಳಿಸುವ ಇತಿಹಾಸ ಮಹತ್ವ ಪಡೆದಿದೆ. ಮಾನವನ ಚರಿತ್ರೆಯೊಂದಿಗೆ ನಾಣ್ಯಗಳ ಕಥೆಯು ಹಾಸು ಹೊಕ್ಕಾಗಿದೆ. ಕ್ರಿ.ಪೂ. ಮೂರು ಸಹಸ್ರ ವರ್ಷಗಳ ವರೆಗೆ ಬೇಸಾಯದ ಮೂಲ ವಸ್ತುಗಳನ್ನು ವಿನಿಮಯಕ್ಕಾಗಿ ಬಳಸಿಕೊಳ್ಳಲಾಗಿತ್ತು. ಪಾಣಿನಿಯ ಅಷ್ಟಾಧ್ಯಾಯಿ ಎಂಬ ವ್ಯಾಕರಣ ಗ್ರಂಥದಲ್ಲಿ (ಕ್ರಿ.ಶ. 5 – 6ನೇ ಶತಮಾನ) ಮುದ್ರಿತ ಧಾತುವಿನ ಅಥವಾ ನಾಣ್ಯಗಳ ಅತೀ ಪ್ರಾಚೀನ ಉಲ್ಲೇಖ ಕಂಡು ಬರುತ್ತವೆ. ಅನಂತರದಲ್ಲಿ ಆಯಾ ರಾಜ ಮಹಾರಾಜರ ಚಿಹ್ನೆಯನ್ನು ಆಧರಿಸಿ ನಾಣ್ಯಗಳು ಪ್ರಚಲಿತವಾಗುತ್ತಾ ಬಂದಿತು.

ನಾಣ್ಯಗಳು ಸಾಹಿತ್ಯ ಮತ್ತು ಶಾಸನ ತಿಳಿಸುವ ಇತಿಹಾಸವನ್ನು ಪುಷ್ಟೀಕರಿಸುತ್ತವೆ. ಇಂಡೋಗ್ರೀಕ್, ಬ್ಯಾಕ್ಟ್ರಿಯಸ್ ಮೊದಲಾದ ರಾಜಮನೆತನಗಳ ಇತಿಹಾಸ ತಿಳಿಯಲು

ನಾಣ್ಯಗಳೇ ಆಧಾರ. ಗುಪ್ತರು ಅಚ್ಚು ಹಾಕಿಸಿದ ನಾಣ್ಯಗಳಿಂದಾಗಿ ಆ ಯುಗವನ್ನು ಗುಪ್ತರ ಸುವರ್ಣ ಯುಗಕಾಲ ಎಂದು ಕರೆಯಲಾಯಿತು. ಇದು ಅಂದಿನ ಆರ್ಥಿಕ ಸ್ಥಿತಿಯನ್ನು ನಮಗೆ ಅರಿವು ಮಾಡಿಕೊಡುತ್ತದೆ. ದೇಶದ ಕ್ಷಾಮ ಡಾಮರಗಳಿದ್ದಾಗ ತಾಮ್ರ, ಸೀಸ, ಕಲ್ಲು, ಚರ್ಮದ ನಾಣ್ಯಗಳು ಅಚ್ಚಾಗಿದೆ. ಒಂದು ಕಾಲದ, ಒಂದು ದೇಶದ ಆರ್ಥಿಕ ಸ್ಥಿತಿಗತಿ ಅರಿಯಲು ನಾಣ್ಯಗಳು ಸಹಾಯಕವಾಗುತ್ತವೆ. ಧಾರ್ಮಿಕ, ಮತೀಯ ಭಾವನೆಗಳನ್ನು ಅವು ತಿಳಿಸುತ್ತವೆ. ನಾಣ್ಯಗಳ ಅಭ್ಯಾಸಕ್ಕೆ ನಾವು ವಸ್ತುಸಂಗ್ರಹಾಲಯ ಮತ್ತು ಖಾಸಗಿ ಸಂಗ್ರಹವನ್ನು ಮೊರೆ ಹೋಗಬೇಕಾದ ಅನಿವಾರ್ಯತೆ ನಮಗಿದೆ.

### ಉ) ಪುರಾತತ್ವ ಉತ್ಖನನ ವಸ್ತುಸಂಗ್ರಹಾಲಯಗಳು:

ನಮ್ಮಲ್ಲಿ ಪುರಾತತ್ವ ವಸ್ತುಸಂಗ್ರಹಾಲಯಗಳಾಗಿ ಕೋಟೆಗಳನ್ನು ಗುರುತಿಸಬಹುದು. ಶಾತವಾಹನರಿಂದ ಹಿಡಿದು 1800ರ ವರೆಗೆ ಸಾಕಷ್ಟು ಕೋಟೆಗಳು ನಿರ್ಮಾಣವಾಗಿವೆ. ದಪ್ಪ ಗೋಡೆಗಳಿಂದ ಅವೃತವಾದ ಒಂದು ಭೂ ಮಿತಿಯ ಆಕಾರದ ಈ ನಿರ್ಮಾಣಗಳಲ್ಲಿ ನಾಗರೀಕತೆಯ ಸಹಜ ಭಾವನೆಗಳನ್ನು ಕಂಡುಕೊಳ್ಳಬಹುದಾಗಿದೆ. ರಕ್ಷಣಾ ಪರಿಧಿ ಸಹಜೀವನದ ಸದೋದ್ದೇಶದ ಜನಗಳ ಜೀವನ ರೀತಿ-ನೀತಿ, ಗತಕಾಲದ ವೈಭವದ, ಶೌರ್ಯದ, ಕ್ರೌರ್ಯದ, ಒಲವಿನ, ನಲಿವಿನ, ಆನಂದದ, ದುಃಖದ, ಅಳಿವಿನ, ನಗುವಿನ, ತ್ಯಾಗದ, ಭೋಗದ, ಬಲಿದಾನದ, ಸಾವಿನ, ನೋವಿನ, ಅಸೂಯೆಯ, ಅಸಹನೆಯ, ಸತ್ಯದ, ಸೌಂದರ್ಯದ, ಮಾನವಿಕ ಭಾವನೆಗಳನ್ನು ಕೋಟೆಗಳು ಸಾರಿ ಹೇಳುತ್ತಿವೆ. ಕೋಟೆಗಳ ಆವರಣದಲ್ಲಿ ದೊರತಿರುವ ವಸ್ತುಗಳನ್ನು ಒಂದೇ ಕಡೆ ಆ ವಸ್ತುಗಳು ಸಿಕ್ಕ ಜಾಗದಲ್ಲಿ ಪ್ರದರ್ಶನಕ್ಕೆ ಇಡುವುದರ ಮೂಲಕ ಆಯಾ ಕಾಲ ಘಟ್ಟದ ಅಧ್ಯಯನಕ್ಕೆ ಆಕರವನ್ನು ಅಲ್ಲಿಯೇ ಒದಗಿಸಿದಂತಾಗುತ್ತದೆ. ಅಧ್ಯಯನಕ್ಕೆ ಸುಲಭವಾಗಿ ಮಾಹಿತಿ ಒದಗಿಸಿದಂತಾಗುತ್ತದೆ. ಕಟ್ಟಡದ ಒಳ ಇರುವ ಸಂಗ್ರಹಗಳಿಗಿಂತಲೂ ಕಟ್ಟಡದ ಹೊರಗೆ, ಬಯಲು ಪ್ರದೇಶದಲ್ಲಿ ಪ್ರದರ್ಶಿಸಲ್ಪಟ್ಟ ವಸ್ತುಸಂಗ್ರಹಾಲಯಗಳು ಹೆಚ್ಚು ಪರಿಣಾಮಕಾರಿಯಾಗಿವೆ. ಗ್ರಾಮೀಣ ಅಧ್ಯಯನಕ್ಕೂ ಇವುಗಳು ಪ್ರಮುಖ ಆಕರಗಳಾಗಿವೆ.

### ಊ) ಸಾಹಿತ್ಯ-ಕಲೆಗಳ ಸಂಗ್ರಹಾಲಯಗಳು

ನಾಡಿನ ಸಾಮಾಜಿಕ ನಡೆ ನುಡಿಯ ದಾರಿಯಲ್ಲಿ ಕವಿಗಳ ಕಾರ್ಯ ದಕ್ಷತೆ, ಕುಶಲತೆ ಮೇಲಾಗಿ ಸಾಹಿತ್ಯ ಮತ್ತು ಕಲೆಯ ಬಗ್ಗೆ ಅವರ ಶ್ರದ್ಧೆ, ಭಕ್ತಿ ಅಕ್ಷರ ಸೇವೆಯ ಮೂಲಕ ತೋರಿರುವ ಕ್ಷ ಕಿರಣವನ್ನು ಸಾಹಿತ್ಯ ಕೃತಿಗಳು ನೀಡುತ್ತವೆ. ಸಾಹಿತ್ಯ ಸಂಸ್ಕೃತಿಗೆ ಆಯಾ ಜನ, ಸಮಾಜದ ಭಾಷೆಯೇ ಆಧಾರ. ಭಾಷೆಯ ಆಕೃತಿ ಹಾಗೂ ಸಾಹಿತ್ಯದ ಆಕೃತಿ ಇವೆರಡರಲ್ಲಿ ಅನ್ಯೋನ್ಯವು ಅಭಿಪ್ರೇತವಿದೆ. ಇದೇ ಮೇರೆಗೆ ಸಂಸ್ಕೃತಿಯ ಆಕೃತಿಯು ಅದಕ್ಕೆ ಆಧಾರ ಭೂತವಾಗಿ

ಸಾಂಸ್ಕೃತಿಕವಾಗಿ ಸಂಗೀತ, ನಾಟಕ, ನೃತ್ಯ, ಮೊದಲಾದ ಕಲೆಗಳ ಗಟ್ಟಿಯಾದ ನೆಲೆವೀಡು ನಮ್ಮ ದೇಶ. ಚಾರಿತ್ರಿಕ ದಾಖಲೆಗಳಲ್ಲಿ ಮತ್ತು ಪರಂಪರೆಯಲ್ಲಿ ಇದು ತುಂಬಾ ಹೆಸರುವಾಸಿಯಾಗಿದೆ. ಈ ಬಗ್ಗೆ ಅದೆಷ್ಟು ಜನ ಸಂಶೋಧನೆ ಕೈಗೊಂಡರೂ ಮುಗಿಯದ ಕ್ಷೇತ್ರವದು. ಈ ಕುರಿತಂತೆ ಸಾಕಷ್ಟು ಸಂಶೋಧನಾಲಯಗಳು ತಲೆ ಎತ್ತಿವೆ. ಅವುಗಳ ಮೂಲಕ ಸಂಶೋಧನಾ ಚಟುವಟಿಕೆಗಳು ನಡೆಯುತ್ತಾ ಬರುತ್ತಿವೆ.

ನಮ್ಮ ದೇಶದಲ್ಲಿ ದೀರ್ಘ ಕಾಲದಿಂದಲೂ ಹಲವಾರು ಕಲೆಗಳು ರೂಢಿಗತವಾಗಿ ಬಂದಿವೆ. ಅಂತಹವುಗಳಲ್ಲಿ ಶಿಲ್ಪ, ಚಿತ್ರ, ಸಂಗೀತ, ನೃತ್ಯಗಳಂತಹ ಕಲೆಗಳನ್ನು ಲಲಿತ ಕಲೆಗಳೆಂದು ಕರೆಯಲಾಗಿದೆ. ಆಯಾ ವೃತ್ತಿಗನುಗುಣವಾಗಿ ಹೆಸರುಗಳು ನಮ್ಮಲ್ಲಿ ರೂಢಿಯಲ್ಲಿವೆ. ಲಲಿತ ಕಲೆಗಳು ಒಮ್ಮೆ ವೃತ್ತಿಯಾಗಿ ಪರಿಗಣಿಸಲ್ಪಟ್ಟಿದ್ದವೆ. ಇಂತಹ ವಿಷಯಗಳ ಬಗ್ಗೆ ನಾವು ಸಂಶೋಧನೆ ಕೈಗೊಳ್ಳುವ ಸಂದರ್ಭದಲ್ಲಿ ಸಂಗ್ರಾಹಕರ ಸಂಗ್ರಹಾಲಯಗಳ ಮೊರೆ ಹೋಗುವುದು ಅನಿವಾರ್ಯವಾಗಿದೆ.

**ಋ) ವಿಜ್ಞಾನ ವಸ್ತುಸಂಗ್ರಹಾಲಯಗಳು**

ಸಾಮಾನ್ಯ ವಸ್ತುಸಂಗ್ರಹಾಲಯಗಳಲ್ಲಿ ಇತಿಹಾಸ, ಪುರಾತತ್ವ ಕುರಿತಂತೆ ಮಾಹಿತಿ ಒದಗಿಸಲಾಗುತ್ತದೆ. ವಿಜ್ಞಾನಕ್ಕೆ ಸಂಬಂಧಿಸಿದಂತಹ ವಸ್ತು ಸಂಗ್ರಹಾಲಯಗಳು ವಿಜ್ಞಾನದ ಮಾದರಿಗಳನ್ನು ನಿರ್ಮಾಣ ಮಾಡಿ ಆ ಮೂಲಕ ಸಾರ್ವಜನಿಕವಾಗಿ ತಿಳುವಳಿಕೆ ಮೂಡಿಸುತ್ತದೆ. ಇದರಿಂದ ಕೆಲವೊಮ್ಮೆ ವೀಕ್ಷಕರಿಗೆ ಬರುವ ಅನುಮಾನಗಳಿಗೆ ಸ್ಥಳದಲ್ಲಿಯೇ ವಸ್ತುಗಳನ್ನು ನೋಡಿ ಆ ಮೂಲಕ ಪರಿಹಾರವನ್ನು ಕಂಡುಕೊಳ್ಳಲು ಅವಕಾಶವಾಗುತ್ತದೆ. ನೆಹರು ಪ್ಲಾನಿಟೋರಿಯಂ ಮಾದರಿಯ ವಸ್ತುಸಂಗ್ರಹಾಲಯಗಳು ವೈಜ್ಞಾನಿಕವಾಗಿ ವೀಕ್ಷಕರನ್ನು ಯೋಚಿಸುವತ್ತ ಪ್ರೇರೇಪಿಸುತ್ತದೆ.

**ಎ) ಜೀವ ಜಗತ್ತು**

ಮಾನವನು ವೈಜ್ಞಾನಿಕವಾಗಿ ಬೆಳೆದಷ್ಟು ಮೃಗೀಯ ಪ್ರವೃತ್ತಿ ಹೆಚ್ಚುತ್ತಾ ಬರುತ್ತಿದೆ. ನಾಡನ್ನು ಕಟ್ಟುವ ನೆಪದಲ್ಲಿ ಕಾಡು ಮಾಯವಾಗುತ್ತಿದೆ. ಐಷಾರಾಮ ಜೀವನಕ್ಕಾಗಿ ಉಳುಮೆಯ ಜಾಗಕ್ಕಾಗಿ ಕಾಡು ಒತ್ತುವರಿ ಆಗುತ್ತಿದೆ. ಕೆರೆ, ಕೊಳ, ಹೊಂಡ ಕಣ್ಮರೆಯಾಗುತ್ತಿದೆ. ಕಾಡು ಪ್ರಾಣಿಗಳು ನಾಡಿಗೆ ನುಗ್ಗುತ್ತಿವೆ. ಕೆಲವು ಪ್ರಾಣಿ, ಕೀಟಗಳು ನಶಿಸಿವೆ. ಪ್ರಮುಖ ಮರಗಳು ಕಣ್ಮರೆಯಾಗಿವೆ. ಇಂತಹ ಜೀವ ಜಗತ್ತಿನ ವಿಸ್ಮಯಕಾರಿ ಜೀವನ ಶೈಲಿಯನ್ನು ಅಭ್ಯಾಸ ಮಾಡಲು ಇಂದು ವಸ್ತುಸಂಗ್ರಹಾಲಯದ ಮೊರೆ ಹೋಗಬೇಕಾಗಿರುವುದು ಅನಿವಾರ್ಯವಾಗಿದೆ. ಇಂತಹ ಸಂಗ್ರಹಗಳಲ್ಲಿ ಗಿಡ, ಮರ, ಪ್ರಾಣಿ, ವಾತಾವರಣ, ಪರಿಸರ, ಕೀಟ, ಮೊದಲಾಗಿ ಸುಮಾರು ಎರಡು ಸಾವಿರದ ಐನೂರು ಮಿಲಿಯನ್ ವರ್ಷದ ಇತಿಹಾಸವನ್ನು ಪ್ರಚುರ ಪಡಿಸುವ ಪ್ರಯತ್ನ ನಡೆದಿದೆ.

ಪ್ರಾಣಿಗಳ ಮೊಟ್ಟೆಯಿಂದ ಮರಿ ಮಾಡುವ ಪದ್ಧತಿ, ಗಿಡ ಬೆಳೆಸುವುದು ಅವುಗಳ ಆಹಾರ ವ್ಯವಸ್ಥೆ ಮೊದಲಾದವುಗಳನ್ನು ಅಭ್ಯಸಿಸಲು ಸಂಶೋಧನೆಗಾಗಿ ಸಂಗ್ರಹಾಲಯಗಳು ದಾರಿ ಮಾಡಿಕೊಟ್ಟಿದೆ.

ಹೀಗೆ ವೈವಿಧ್ಯಮಯವಾಗಿರುವ ವಸ್ತುಸಂಗ್ರಹಾಲಯಗಳಲ್ಲಿ, ಭಾರತದಲ್ಲಿ ಇದುವರೆಗೆ ಸುಮಾರು 602ಕ್ಕೂ ಹೆಚ್ಚು ವಸ್ತುಸಂಗ್ರಹಾಲಯಗಳು ಸ್ಥಾಪನೆಯಾಗಿವೆ. ಅವುಗಳಲ್ಲಿ :

1) ಕೃಷಿ ವಸ್ತುಸಂಗ್ರಹಾಲಯ; 2) ಪುರಾತತ್ವ ವಸ್ತುಸಂಗ್ರಹಾಲಯ; 3) ಪತ್ರಾಗಾರ ವಸ್ತುಸಂಗ್ರಹಾಲಯ; 4) ಶಸ್ತ್ರಾಸ್ತ್ರ ವಸ್ತು ಸಂಗ್ರಹಾಲಯ; 5) ಮಿಲಿಟರಿ ವಸ್ತು ಸಂಗ್ರಹಾಲಯ; 6) ಮಕ್ಕಳ ವಸ್ತು ಸಂಗ್ರಹಾಲಯ; 7) ಗೊಂಬೆ ವಸ್ತು ಸಂಗ್ರಹಾಲಯ; 8) ಶೈಕ್ಷಣಿಕ ವಸ್ತುಸಂಗ್ರಹಾಲಯ; 9)ಸಂಜೀನಿವಸ್ತು ಸಂಗ್ರಹಾಲಯ; 10) ಕಾಡು ಉತ್ಪನ್ನಗಳ ವಸ್ತುಸಂಗ್ರಹಾಲಯ; 11) ಗ್ರಂಥಾಲಯ ವಸ್ತು ಸಂಗ್ರಹಾಲಯ; 12) ವೈದ್ಯಕೀಯ ವಸ್ತು ಸಂಗ್ರಹಾಲಯ; 13) ಸಂಗೀತ ವಸ್ತು ಸಂಗ್ರಹಾಲಯ; 14) ಪ್ರಕೃತಿ ಇತಿಹಾಸ ವಸ್ತು ಸಂಗ್ರಹಾಲಯ; 15) ಜಲಸಾರಿಗೆ ವಸ್ತು ಸಂಗ್ರಹಾಲಯ; 16) ವೈಯಕ್ತಿಕ ವಸ್ತು ಸಂಗ್ರಹಾಲಯ; 17) ಪೋಲೀಸ್ ವಸ್ತು ಸಂಗ್ರಹಾಲಯ; 18) ರೈಲು ವಸ್ತು ಸಂಗ್ರಹಾಲಯ; 19) ಧಾರ್ಮಿಕ ವಸ್ತು ಸಂಗ್ರಹಾಲಯ; 20) ವಿಜ್ಞಾನ ವಸ್ತು ಸಂಗ್ರಹಾಲಯ; 21) ವಿಷಯಾಧಾರಿತ ವಸ್ತು ಸಂಗ್ರಹಾಲಯ; 22) ಕ್ರೀಡಾ ವಸ್ತು ಸಂಗ್ರಹಾಲಯ; 23) ಬಟ್ಟೆ ಉದ್ದಿಮೆ ವಸ್ತು ಸಂಗ್ರಹಾಲಯ; 24) ಮೋಟಾರು ವಸ್ತು ಸಂಗ್ರಹಾಲಯ; 25) ಜಾನಪದ ವಸ್ತು ಸಂಗ್ರಹಾಲಯ; 26) ಪ್ರಾಣಿಶಾಸ್ತ್ರ ವಸ್ತು ಸಂಗ್ರಹಾಲಯ; 27) ಬಯಲು ವಸ್ತು ಸಂಗ್ರಹಾಲಯ; 28) ವಿವಿದೋದ್ದೇಶ ವಸ್ತು ಸಂಗ್ರಹಾಲಯ; 29) ಭೂಗರ್ಭ ವಸ್ತು ಸಂಗ್ರಹಾಲಯ; 30) ಜಲಾ ಪುರಾತತ್ವ ವಸ್ತು ಸಂಗ್ರಹಾಲಯ; 31) ಸಸ್ಯಶಾಸ್ತ್ರ ವಸ್ತು ಸಂಗ್ರಹಾಲಯ; 32) ಮಾನವಶಾಸ್ತ್ರ ವಸ್ತು ಸಂಗ್ರಹಾಲಯ; 33) ವಿಮಾನಯಾನ ವಸ್ತು ಸಂಗ್ರಹಾಲಯ.

ಹೀಗೆ ಹಲವು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ವಸ್ತು ಸಂಗ್ರಹಾಲಯ ಗಳಿವೆ. ಇದರ ಜೊತೆ ಖಾಸಗಿ ನಾಣ್ಯ ಸಂಗ್ರಹಕಾರರು, ಚಿತ್ರಕಲಾ ಗ್ಯಾಲರಿಗಳು ಪತ್ರಾಗಾರಗಳು, ವಿಶ್ವ ವಿದ್ಯಾಲಯ ವಸ್ತು ಸಂಗ್ರಹಾಲಯಗಳು, ಆಯುರ್ವೇದ ಗಿಡಮೂಲಿಕೆಗಳ ಸಂಗ್ರಹಕಾರರು, ವೃತ್ತಪತ್ರಿಕೆ, ಅಂಚೆ ಚೀಟಿ ಸಂಗ್ರಹಕಾರರು, ಛಾಯಾಚಿತ್ರ, ಸಿನಿಮಾ, ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಸಂಗ್ರಹ ನಡೆಸಿರುವುದಿದೆ. ಇವೆಲ್ಲವು ಸಂಶೋಧನೆಗೆ ಪ್ರಮುಖ ಆಕರವಾಗಿದೆ. ಒಂದೇ ಕಡೆ ದೊರೆಯುವ ಇಂತಹ ಸಂಗ್ರಹಗಳು ಸಂಶೋಧನೆಗೆ ಉಪಯೋಗವಾಗಿ ಆ ಮೂಲಕ ಹೊಸ ಹೊಸ ವಿಷಯಗಳು ಹೊರಹೊಮ್ಮಬೇಕಾಗಿದೆ. ಆ ಕೆಲಸ ಆಗುತ್ತಿದೆ.

ಕಳೆದ 3 ದಶಕಗಳಿಂದೀಚೆ ವಸ್ತು ಸಂಗ್ರಹಾಲಯಗಳು ತಮ್ಮ ಮೂಲ ದೃಷ್ಟಿಯಲ್ಲಿ ಬದಲಾವಣೆ ಹೊಂದಿದೆ. ಮಾನವನ ಜ್ಞಾನ ಕ್ಷೇತ್ರದ ಸರ್ವತೋಮುಖ ಅಭಿವೃದ್ಧಿಯು ಸಾಂಸ್ಕೃತಿಕ ಸಂಸ್ಥೆಗಳು ತಮ್ಮ ಅಭಿವೃದ್ಧಿಗಾಗಿ ಮೂಲ ವಿಚಾರಗಳನ್ನು ಹಾಗೂ ರೀತಿ ನೀತಿಗಳನ್ನು ಮಾರ್ಪಡಿಸಿಕೊಳ್ಳಲು ಕಾರಣವಾಗಿವೆ. ವಸ್ತು ಸಂಗ್ರಹಾಲಯಗಳು ಪ್ರತ್ಯೇಕವಾದ ದೃಶ್ಯ ಶಿಕ್ಷಣ ಶಾಲೆಗಳು ಎನ್ನುವುದಕ್ಕಾಗಿ ಉತ್ತಮ ವಸ್ತುಗಳನ್ನು ಕೂಡಿಟ್ಟು ಹಿಂದಿನ ಭಂಡಾರಗಳೆನ್ನುವ ಭಾವನೆಯನ್ನು ಕಿತ್ತೊಗೆಯಲು ಪ್ರಯತ್ನ ಮಾಡುತ್ತಿವೆ.

## ವಸ್ತು ಸಂಗ್ರಹಾಲಯಗಳು ಮತ್ತು ಶಿಕ್ಷಣ

ಶಿಕ್ಷಣ ಮತ್ತು ಸಹಕಾರ ವಸ್ತು ಸಂಗ್ರಹಾಲಯಗಳ ಕಾರ್ಯಗಳಲ್ಲಿ ಮುಖ್ಯವಾದವುಗಳು. ಜನತೆಗೆ ಬೇಕಾದ ವಿಷಯಗಳನ್ನು ಅವರಿಗೆ ಅಪ್ರಯತ್ನವಾಗಿ ಒದಗಿಸುವಲ್ಲಿ ಉತ್ತಮ ಸ್ಥಾನವನ್ನು ಪಡೆದಿದೆ. ವಿದ್ಯಾರ್ಥಿಗಳಿಗೆ ತಮ್ಮ ಬೋಧನಾ ಕ್ರಮದಲ್ಲಿ ತಿಳಿದ ವಿಷಯಕ್ಕೆ ಪೂರಕವಾದ ಜ್ಞಾನವನ್ನು ಒದಗಿಸುವುದಲ್ಲದೆ ನಿತ್ಯ ಜೀವನದಲ್ಲಿ ಅಗತ್ಯವಾಗಿ ಬೇಕಾದ ಸೌಂದರ್ಯೋಪಾಸನೆ ಮತ್ತು ಉತ್ತಮ ರಚನೆಯತ್ತ ಮನ ಒಲಿಯುವಂತೆ ಮಾಡುತ್ತದೆ. ಹೀಗೆ ವಸ್ತು ಸಂಗ್ರಹಾಲಯಗಳು ತಮ್ಮ ದಾಸ್ತಾನು ಸಂಗ್ರಹ, ಪ್ರದರ್ಶನ, ಪ್ರಕಟಣೆಗಳು, ಗುರುತು ಚೀಟಿಗಳು, ರೇಖಾ ಚಿತ್ರಗಳು, ನಕ್ಷೆಗಳು, ಮಾಗದರ್ಶಿ ಒಳಗೊಂಡ ಉತ್ತಮ ಪ್ರದರ್ಶನ ಶಾಲೆಗಳು ಇವುಗಳ ಮೂಲಕ ವಿದ್ಯಾರ್ಥಿಗಳಿಗೆ, ಸಾಮಾನ್ಯ ಜನತೆಗೆ ಮತ್ತು ಮುಖ್ಯವಾಗಿ ವಿದ್ವಾಂಸರಿಗೆ ಉಚ್ಚ ಶಿಕ್ಷಣ ಮತ್ತು ಆಕರ ಸಾಮಾಗ್ರಿಯನ್ನು ಉಚಿತವಾಗಿ ನೀಡುತ್ತವೆ.

ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ವಸ್ತುಸಂಗ್ರಾಹಲಯಗಳು ಅಲ್ಲಿನ ಅಮೂಲ್ಯ ವಸ್ತುಗಳು ಉತ್ತಮ ಜ್ಞಾನವನ್ನು ಒದಗಿಸುತ್ತವೆ. ಬಹುತೇಕ ದೇಶದಲ್ಲಿನ ವಸ್ತು ಸಂಗ್ರಹಾಲಯಗಳು ಶಾಲಾ ಉಪಾಧ್ಯಾಯರಿಗೆ ವಿಶೇಷ ತರಬೇತಿಯನ್ನು ನೀಡಿ, ತಮ್ಮ ತರಗತಿಗಳಲ್ಲಿನ ವಿಷಯ ಬೋಧನೆಗಳಲ್ಲಿ ಸಂಗ್ರಹಾಲಯದ ಪೂರ್ಣ ಪ್ರಯೋಜನ ಪಡೆಯುವಂತೆ ಮಾಡಿದೆ. ವಸ್ತು ಸಂಗ್ರಹಾಲಯ ಪ್ರಕಟಿಸುವ ಜನಪ್ರಿಯ ಸಾಹಿತ್ಯ ಪ್ರಕಟನೆಗಳು ಸಾಮಾನ್ಯ ಜನರ ಉಪಯೋಗಕ್ಕೆ ಬರುತ್ತವೆ. ವಿದ್ವಾಂಸರಿಗೆ, ಸಂಶೋಧಕರಿಗೆ, ವಿದ್ಯಾರ್ಥಿಗಳಿಗೆ, ಕಲೆಗಾರರಿಗೆ ವಸ್ತುಸಂಗ್ರಹಾಲಯದ ದಾಸ್ತಾನಿಗೆ ಆಗುವ ಸಂಗ್ರಹ, ಸಂಶೋಧನೆಗೆ ಪೂರಕವಾಗಿರುತ್ತದೆ. ಜನತೆಗೆ ದೃಶ್ಯ ಶಿಕ್ಷಣ ಒದಗಿಸುವುದು ವಸ್ತು ಸಂಗ್ರಹಾಲಯದ ಕರ್ತವ್ಯಗಳಲ್ಲಿ ಒಂದಾಗಿದೆ. ಆಯಾ ಕ್ಷೇತ್ರದ ಭೌಗೋಳಿಕ ಶಾಸ್ತ್ರ, ಭೂಗರ್ಭಶಾಸ್ತ್ರ, ಪ್ರಾಕೃತಿಕ ಇತಿಹಾಸ, ಪುರಾತತ್ವ ಶೋಧನೆ, ಗೃಹ ಜೀವನ, ಕೈಗಾರಿಕೆ, ತಾಂತ್ರಿಕ ವಿಜ್ಞಾನ, ಕಲೆ ಮತ್ತು ಕುಶಲ ಕೆಲಸದ ನಿಜ ವಸ್ತುಗಳ ಜೊತೆಗೆ ಅವುಗಳ ಪ್ರತಿಕೃತಿಗಳು, ನಕ್ಷೆಗಳು, ರೇಖಾ ಪಟಗಳು, ಭಾವ ಚಿತ್ರಗಳನ್ನು ಪ್ರದರ್ಶನಕ್ಕೆ ಬಳಸಿಕೊಳ್ಳಲಾಗುತ್ತಿದೆ. ಜ್ಞಾನ ಮತ್ತು ಮನೋರಂಜನೆಯನ್ನು ಒದಗಿಸುವುದು ಮುಖ್ಯ

ಉದ್ದೇಶ. ವಸ್ತು ಸಂಗ್ರಹಾಲಯದ ಸಹಕಾರ ಸಂಬಂಧವು ಹಿಂದುಳಿದ ಪ್ರದೇಶಗಳಲ್ಲಿ ಮುಖ್ಯವಾಗಿವೆ. ಉಪನ್ಯಾಸ, ಚಲನಚಿತ್ರ ಪ್ರದರ್ಶನ, ಸಾಕ್ಷ್ಯ ಚಿತ್ರಗಳು, ಗೋಷ್ಠಿಗಳು ಮೊದಲಾದುವು ವಸ್ತು ಸಂಗ್ರಹಾಲಯದ ಇತರ ಸೇವಾ ಕಾರ್ಯ ಚಟುವಟಿಕೆಗಳಾಗಿದ್ದು ಸಮಾಜದ ಜನತೆಯನ್ನು ಆಕರ್ಷಿಸಿ ಅವರಿಂದ ಸಹಕಾರ ಪಡೆಯುವ ಸಾಧನವಾಗಿದೆ.

ವಸ್ತು ಸಂಗ್ರಹಾಲಯಗಳು ಸಾರ್ವಜನಿಕ ಸಂಪರ್ಕಕ್ಕಾಗಿ ವಿಚಾರಣೆಗಳನ್ನು ಸ್ವಾಗತಿಸುವುದು, ವ್ಯಕ್ತಿಗಳ ಬಳಿ ಇರುವ ಪ್ರಾಚೀನ ವಸ್ತುಗಳ ಸ್ವರೂಪವನ್ನು ಗುರುತಿಸಿ ಅದರ ಕಾಲ ನಿರ್ಣಯಿಸುವಾಗ ಸಹಕರಿಸುವುದು, ದೂರವಾಣಿ ಮೂಲಕ ಅಲ್ಪ ಪ್ರಮಾಣದ ಮಾಹಿತಿ ನೀಡುವುದು ಮೊದಲಾದ ಕೆಲಸಗಳ ಮೂಲಕ ಸಾರ್ವಜನಿಕರನ್ನು ತನ್ನತ್ತ ಸೆಳೆದುಕೊಳ್ಳಬಹುದಾಗಿದೆ. ತಾಂತ್ರಿಕ ವಿವರಗಳು, ತಜ್ಞರಸಲಹೆ ಬೇಕಾದಾಗ ಬರವಣಿಗೆಯ ಮೂಲಕ ನೀಡುವುದು ಅತ್ಯಗತ್ಯ.

**ವಸ್ತು ಸಂಗ್ರಹಾಲಯಗಳು ಮತ್ತು ಸಂಪರ್ಕ ಮಾಧ್ಯಮಗಳು:**

ಪತ್ರಿಕೆಗಳು ಮತ್ತು ವಸ್ತು ಸಂಗ್ರಹಾಲಯಗಳು ಒಂದಕ್ಕೊಂದು ಪೂರಕವಾಗಿರುತ್ತವೆ. ವಿದ್ವಾಂಸರೊಬ್ಬರು 'ನಮ್ಮ ಪೂರ್ವದ ಸಂಸ್ಕೃತಿಯನ್ನು ವಸ್ತು ಸಂಗ್ರಹಾಲಯ ರಕ್ಷಿಸುತ್ತದೆ. ಇಂದಿನ ಸಂಸ್ಕೃತಿಯನ್ನು ಪತ್ರಿಕೆಯು ನೀಡಿರುತ್ತದೆ' ಎಂಬುದಾಗಿ ಅಭಿಪ್ರಾಯಿಸುತ್ತಾರೆ. ವಸ್ತು ಸಂಗ್ರಹಾಲಯಗಳು ತಮ್ಮ ಸೇವಾ ಕಾರ್ಯದಲ್ಲಿ ಜನಪ್ರಿಯವಾಗಲು ಪತ್ರಿಕೆಗಳು ಸಹಕಾರಿಯಾಗಿವೆ. ಪತ್ರಿಕೆಗಳಿಗೆ ಮುಖ್ಯ ಆಕರವನ್ನು ಒದಗಿಸುತ್ತವೆ. ತಮ್ಮ ಕಾರ್ಯದಲ್ಲಿ ಸಂಗ್ರಹಿಸಿದ ವಸ್ತುಗಳ ವಿಷಯವನ್ನು ಇತರರಿಗೆ ತಿಳಿಸಲು ಉಪನ್ಯಾಸಗಳು, ಚಿತ್ರ ಪ್ರದರ್ಶನ, ಪ್ರಕಟನೆ ಜೊತೆಗೆ ಸಂಪರ್ಕ ಮಾಧ್ಯಮಗಳು ಪ್ರಮುಖವಾಗಿವೆ.

ಒಂದೊಂದು ವಸ್ತು ಸಂಗ್ರಹಾಲಯಗಳು ಒಂದೊಂದು ಕ್ಷೇತ್ರದಲ್ಲಿ ಪರಿಣತಿ ಪಡೆದಿರುತ್ತವೆ. ಭಾರತದ ಶಿಲ್ಪಕಲೆಗಳ ಸಂಗ್ರಹದಲ್ಲಿ ರಾಷ್ಟ್ರೀಯ ವಸ್ತು ಸಂಗ್ರಹಾಲಯ, ನವದೆಹಲಿ ಸಮೃದ್ಧವಾಗಿವೆ. ಬೊಂಬಾಯಿಯ ಪ್ರಿನ್ಸ್ ಆಫ್ ವೇಲ್ಸ್ ವಸ್ತು ಸಂಗ್ರಹಾಲಯ, ವಾರಣಾಸಿಯ ಕಲಾಭವನ, ಭಾರತೀಯ ಪ್ರತಿರೂಪಗಳ ಸಂಗ್ರಹದಲ್ಲಿ ಪ್ರಸಿದ್ಧಿ ಪಡೆದಿದೆ. ಅಹಮದಾಬಾದಿನ ಕ್ಯಾಲಿಕೋ ವಸ್ತು ಸಂಗ್ರಹಾಲಯ, ಭಾರತೀಯ ನೆಯ್ಗೆ ವಸ್ತು ಸಂಗ್ರಹಾಲಯ, ಮೃಣ್ಮಯ ಪ್ರತಿಮೆಗಳ ಸಂಗ್ರಹದ ಪಾಟ್ನಾ ವಸ್ತು ಸಂಗ್ರಹಾಲಯ ಮೊದಲಾದವು ಸಂಗ್ರಹದ ದೃಷ್ಟಿಯಿಂದ ಗಮನ ಸೆಳೆಯುವಂತಹವು.

ವಸ್ತು ಸಂಗ್ರಹಾಲಯವು ಸಂಗ್ರಹಿಸಿದ ವಸ್ತುಗಳ ಕಲೆ ಮತ್ತು ವೈಜ್ಞಾನಿಕ ವಸ್ತುಗಳ ಪ್ರೇಕ್ಷಕನ ಕುತೂಹಲವನ್ನು ಕೆರಳಿಸಿ ಅವುಗಳ ಬಗ್ಗೆ ಆಲೋಚನೆ ಮಾಡಲು ಪ್ರೇರೇಪಿಸಿ ಆ ವಿಷಯದಲ್ಲಿ ಅಭಿರುಚಿ ಹೆಚ್ಚುವಂತೆ ಮಾಡುತ್ತವೆ. ವಸ್ತು ಸಂಗ್ರಹಾಲಯ ಪ್ರೇಕ್ಷಕರಲ್ಲಿ ಮೂರು ವರ್ಗಗಳನ್ನು ಗುರುತಿಸಲಾಗಿದೆ. ತಾನು ಪ್ರದರ್ಶಿಸಿದ ವಸ್ತಗಳು ಮತ್ತು

ಅವಶೇಷಗಳ ಬಗ್ಗೆ ಆಕರ ಸೂಚನೆಗಳನ್ನು, ಭಾವಚಿತ್ರಗಳನ್ನು, ಅದರ ಬಗ್ಗೆ ಮಾಡಿದ ಸಂಶೋಧನಾ ಪ್ರಕಟನೆಗಳನ್ನು ಒದಗಿಸಿ ಸೇವೆ ಸಲ್ಲಿಸಬಹುದಾಂತಹ ವಿದ್ವಾಂಸರ ವರ್ಗ ಮತ್ತು ತರಗತಿಗಳಲ್ಲಿ ಕೇಳಿದ, ಗ್ರಂಥಗಳಲ್ಲಿ ಓದಿದ ವಸ್ತಗಳನ್ನು ನೋಡ ಬಯಸಿ ವಿವಿಧ ಶಾಲಾ ಕಾಲೇಜುಗಳಿಂದ ಬರುವ ವಿದ್ಯಾರ್ಥಿ ವೃಂದ, ಜೊತೆಗೆ ಬಹು ಸಂಖ್ಯಾತ ವರ್ಗವಾದ ನಿಯಮಿತಿ ವೇಳೆಯಲ್ಲಿ ಎಲ್ಲಾ ವಿಧದ ವಿಷಯಗಳನ್ನು ತಿಳಿಯಲು ಮತ್ತು ಸಂತೋಷವಾಗಿ ಕಾಲ ಕಳೆಯಲು ಬರುವ ಸಾಮಾನ್ಯ ಜನತೆ. ಈ ಮೂರು ವರ್ಗದ ಜನತೆಗೆ ಅವರವರ ಅಭಿರುಚಿಗೆ ತಕ್ಕಂತೆ ವಸ್ತು ಸಂಗ್ರಹಾಲಯಗಳು ಮಾಹಿತಿ ನೀಡಬೇಕಾಗಿದೆ.

ಗೋಡ್ಡೆನ್ ಎಂಬುವವನು 'ಅಭ್ಯಾಸ ಮಾಡಲು ಸಾಧ್ಯವಾಗುವಂತೆ ಹೆಚ್ಚು ವಸ್ತು ಸಂಗ್ರಹ ಮಾಡಿ, ಸಂಶೋಧನೆಗೆ ಉತ್ತಮ ಸ್ಥಾನ ಸಲಕರಣೆಗಳನ್ನು ಒದಗಿಸಿ, ತನ್ನೆಲ್ಲಾ ಶಕ್ತಿಯನ್ನು ವಿಜ್ಞಾನ, ಇತಿಹಾಸ, ಕಲೆಯ ಸಂಶೋಧನೆಯಲ್ಲಿಯೇ ತಲ್ಲೀನನಾಗಿಸಿ ಶಿಕ್ಷಣವನ್ನು ಕಡೆಗಣಿಸಿದ ವಸ್ತುಸಂಗ್ರಹಾಲಯವು ತಾನು ಸೇವೆ ಸಲ್ಲಿಸಬಹುದಾದ ಸಮುದಾಯಕ್ಕೆ ಅಪಚಾರವೆಸಗಿದಂತಾಗುತ್ತದೆ' ಎನ್ನುತ್ತಾನೆ.

ಇಂದು ಯಾವುದೇ ಕ್ಷೇತ್ರವಿರಬಹುದು ಆ ಕ್ಷೇತ್ರದ ಕುರಿತು ಮಾಹಿತಿ ನೀಡುವುದು, ಪತ್ರಿಕೆಗಳಿಗೆ ವಿಷಯ ಒದಗಿಸುವುದು ಸಂಶೋಧಕರಿಗೆ ಆಕರ ನೀಡುವುದು ಈ ಎಲ್ಲಾ ಕೆಲಸವನ್ನು ವಸ್ತು ಸಂಗ್ರಹಾಲಯಗಳು ನಿರ್ವಹಿಸುತ್ತಿವೆ. ಅಭಿವೃದ್ಧಿ ಪ್ರದೇಶದ, ಆ ಕ್ಷೇತ್ರದ ಸಂಸ್ಕೃತಿ, ಇತಿಹಾಸವನ್ನು ಪರಿಚಯಿಸಲು ಸಹಕಾರಿಯಾಗಿವೆ. ಖಾಸಗಿ ಅಥವಾ ಸರ್ಕಾರಿ ಸ್ವಾಮ್ಯಕ್ಕೆ ಒಳಪಟ್ಟ ಇಂತಹ ವಸ್ತು ಸಂಗ್ರಹಾಲಯಗಳ ಮುಖ್ಯ ಉದ್ದೇಶ ಶಿಕ್ಷಣ ಮತ್ತು ಸಂಶೋಧನೆ. ನಮ್ಮ ದೇಶದಲ್ಲಿ ಆ ಮಟ್ಟದಲ್ಲಿ ವಸ್ತು ಸಂಗ್ರಹಾಲಯ ಶಾಸ್ತ್ರ ಬೆಳೆದಿಲ್ಲವಾದರೂ ಇತ್ತೀಚಿನ ದಿನಗಳಲ್ಲಿ ಆ ಬಗ್ಗೆ ಕಾಳಜಿ ಮೂಡುತ್ತಿರುವುದು ಒಂದು ಉತ್ತಮ ಬೆಳವಣಿಗೆಯಾಗಿದೆ.

* * *

## 5. ಡಿ.ಎಲ್. ನರಸಿಂಹಾಚಾರ್ ಅವರ 'ಕನ್ನಡ ಗ್ರಂಥಸಂಪಾದನೆ'

– ಡಾ|| ಎಸ್.ಎಸ್. ಅಂಗಡಿ

I

ಡಿ.ಎಲ್. ನರಸಿಂಹಾಚಾರ್‌ರ 'ಕನ್ನಡ ಗ್ರಂಥ ಸಂಪಾದನೆ' ಅರವತ್ತರ ದಶಕದಲ್ಲಿ ಪ್ರಕಟವಾಯಿತು (1964)*. ಈ ಕೃತಿಯ ಮೂಲಕ ಡಿ.ಎಲ್. ನರಸಿಂಹಾಚಾರ್ಯರ ಹೆಸರು ಕನ್ನಡ ಪಾಂಡಿತ್ಯ ಕ್ಷೇತ್ರದಲ್ಲಿ ಪ್ರತಿಷ್ಠಿತವಾಯಿತು. ಕನ್ನಡ ಗ್ರಂಥಸಂಪಾದನೆಯ ರೂಪರೇಖೆಗಳು ಈ ಕೃತಿಯಲ್ಲಿ ನಿಚ್ಚಳವಾಗಿ ಪ್ರತಿಷ್ಠಿತವಾಗಿರುವುದರಿಂದ ಈ ಕೃತಿಗೆ ಒಂದು ಐತಿಹಾಸಿಕ ಮಹತ್ವ ಬಂದಿದೆ.

ನರಸಿಂಹಾಚಾರ್ಯರ ಈ ಕೃತಿ ರಚನೆಯ ಕಾಲಘಟ್ಟವನ್ನು ಗಮನಿಸಿ ಹೇಳುವುದಾದರೆ 1960ರ ಸುಮಾರಿಗೆ ಕನ್ನಡದ ಪ್ರಮುಖ ಪ್ರಾಚೀನ ಗ್ರಂಥಗಳು ಪ್ರಕಟವಾಗಿದ್ದವು. ಆರ್. ನರಸಿಂಹಾಚಾರ್ಯ, ಎಂ.ಎ. ರಾಮಾನುಜ ಅಯ್ಯಂಗಾರ್, ಎಸ್.ಜಿ. ನರಸಿಂಹಾಚಾರ್ಯ, ಶಿ.ಶಿ. ಬಸವನಾಳ, ಟಿ.ಎಸ್. ವೆಂಕಣ್ಣಯ್ಯ ಮುಂತಾದ ಕೆಲವರು ಈ ಕ್ಷೇತ್ರದಲ್ಲಿ ದುಡಿದಿದ್ದರು. ವಿಶೇಷವಾಗಿ ಮದ್ರಾಸ, ಮೈಸೂರು, ಧಾರವಾಡಗಳಲ್ಲಿ ಹಸ್ತಪ್ರತಿ ಭಂಡಾರಗಳು ರೂಪಿತವಾಗಿ ವರ್ಣನಾತ್ಮಕ ಹಸ್ತಪ್ರತಿಸೂಚಿ ಸಂಪುಟಗಳು ಸಿದ್ಧವಾಗಿದ್ದವು. ತಾತ್ಪರ್ಯವಿಷ್ಟೇ ಆ ವೇಳೆಗೆ ಕನ್ನಡದಲ್ಲಿ ಗ್ರಂಥಸಂಪಾದನೆಯ ಪರಂಪರೆ ನಿರ್ಮಾಣ ವಾಗಿದ್ದಿತು. ಈ ಹಿನ್ನೆಲೆಯಲ್ಲಿ ಈ ಅಧ್ಯಯನ ಶಿಸ್ತನ್ನು ಒಂದು ಭದ್ರ ತಳಹದಿಯ ಮೇಲೆ ನಿಲ್ಲಿಸುವಂತಹ ಒಂದು ಸೈದ್ಧಾಂತಿಕ ಕೃತಿಯ ಅಗತ್ಯವಿದ್ದಿತು. ಆವರೆಗೆ ಒಂದೆರಡು ಲೇಖನಗಳನ್ನು ಬಿಟ್ಟರೆ ಆ ಶಾಸ್ತ್ರಕ್ಕೆ ಸಂಬಂಧಿಸಿದ ಬರೆಹಗಳು ಕನ್ನಡದಲ್ಲಿ ಇರಲಿಲ್ಲ. ಅದೇ ವೇಳೆಗೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಶಾಖೆಯಲ್ಲಿ ಎಂ.ಎ. ತರಗತಿಗೆ ಗ್ರಂಥ ಸಂಪಾದನೆ ಪಠ್ಯವಾಗಿತ್ತು. ಈ ಘಟನೆಯೂ ಸಹಿತ ಡಿ.ಎಲ್.ಎನ್. ಅವರಿಗೆ 'ಕನ್ನಡ ಗ್ರಂಥಸಂಪಾದನೆ' ಕೃತಿ ರಚನೆಗೆ ಪ್ರೇರಣೆ ಕೊಟ್ಟಿರಬೇಕು.

ಡಿ.ಎಲ್.ಎನ್. ಅವರ ವಿದ್ವತ್ತು, ಪ್ರಾಚೀನ ಮತ್ತು ಮಧ್ಯಕಾಲೀನ ಸಾಹಿತ್ಯದ

* ಇದೀಗ ಶತಮಾನೋತ್ಸವ ಸಂದರ್ಭದಲ್ಲಿ ಪುನರ್ಮುದ್ರಣವಾಗಿದೆ. ಇದರೊಂದಿಗೆ ಇವರ ಇತರ ಕೃತಿಗಳನ್ನೂ ಡಿ.ವಿ.ಕೆ. ಮೂರ್ತಿ, ಮೈಸೂರು ಅವರು ಪುನರ್ಮುದ್ರಣ ಮಾಡಿದ್ದಾರೆ.
(ಡಿ.ಎಲ್.ಎಸ್.ರವರ ಜೀವಿತಕಾಲ : 27.10.1906–07.05.1971.) –ಸಂ

ಆಳವಾದ ಅಧ್ಯಯನ ಇವುಗಳಿಗೆ ಒರೆಗಲ್ಲು ಈ ಕೃತಿ. ಕನ್ನಡ ಹಸ್ತಪ್ರತಿಗಳನ್ನು ಪರಿಶೀಲಿಸಿ, ನಮ್ಮ ಕಣ್ಣಮುಂದೆ ಕನ್ನಡ ಗ್ರಂಥಸಂಪಾದನೆಯ ಸ್ವರೂಪವನ್ನು ಪ್ರದರ್ಶಿಸಿದ್ದಾರೆ. ಕೃತಿಯ ವ್ಯಾಪ್ತಿ, ವಿಧಾನ, ವಿಶ್ಲೇಷಣೆ, ಸ್ವೋಪಜ್ಞತೆ ಎಲ್ಲವೂ ಮೇಲ್ಮಟ್ಟದ್ದಾಗಿದೆ. ಕೃತಿರಚನೆ ಹಾಗೂ ನಿರ್ವಹಣೆಗೆ ನರಸಿಂಹಾಚಾರ್ಯರು ತಮ್ಮದೇ ಆದ ಮಾರ್ಗವನ್ನು ಕಂಡುಕೊಂಡಿದ್ದಾರೆ. ಗ್ರಂಥ ಸಂಪಾದನೆಯ ತತ್ವಗಳನ್ನು ಕನ್ನಡ ಗ್ರಂಥಗಳಿಗೆ ಹೇಗೆ ಅನ್ವಯಿಸಬೇಕೆಂಬುದನ್ನು ಸೋದಾಹರಣವಾಗಿ ನಿರೂಪಿಸಿದ್ದಾರೆ. ಈ ಕೃತಿಯನ್ನು ಓದುವಾಗ ಒಂದು ಶಾಸ್ತ್ರಕೃತಿಯನ್ನು ಓದುತ್ತಿದ್ದೇವೆ ಎಂದು ಯಾರಿಗೂ ಅನಿಸುವುದಿಲ್ಲ ಕಠಿಣವಾದ ವಿಷಯವನ್ನು ಸರಳವಾಗಿ ನಿರೂಪಿಸುವ ಅನನ್ಯ ಬರೆಹ ಕಲೆ ಅವರಿಗೆ ಪ್ರಾಪ್ತವಾಗಿದೆ.

II

ಈ ಕೃತಿಯಲ್ಲಿ ಒಟ್ಟು ಹನ್ನೆರಡು ಅಧ್ಯಾಯಗಳಿವೆ. 'ಗ್ರಂಥಸಂಪಾದನೆ ಚರಿತ್ರೆ' ಎಂಬ ಮೊದಲನೆಯ ಅಧ್ಯಾಯದಲ್ಲಿ ಭಾರತ ಹಾಗೂ ಪಾಶ್ಚಿಮಾತ್ಯ ದೇಶಗಳ (ಗ್ರೀಕ್, ರೋಮ್, ಫ್ರಾನ್ಸ್, ಹಾಲಂಡ್) ವಿದ್ವತ್ತಿನ ಇತಿಹಾಸದಲ್ಲಿ ಗ್ರಂಥ ಸಂಪಾದನ ಕಾರ್ಯ ಹೇಗೆ ಒಂದು ಶಾಸ್ತ್ರವಾಗಿ ಪರಿಣಮಿಸಿತೆಂದು ಕೂಲಂಕಷವಾಗಿ ಪರಿಶೀಲಿಸಿದ್ದಾರೆ. ಕನ್ನಡ ಜ್ಞಾನಪರಂಪರೆಯನ್ನು ಹೊತ್ತು ತಂದ ಹಸ್ತಪ್ರತಿಗಳು ಉಳಿದು ಬರಬೇಕಾದರೆ ಲೇಖನ ಸಾಮಾಗ್ರಿಗಳು ಪ್ರಮುಖ ಪಾತ್ರವಹಿಸುತ್ತವೆ. ಬರವಣಿಗೆಯ ಸಾಮಾಗ್ರಿಗಳನ್ನು ಡಿ.ಎಲ್.ಎನ್‌ರು ಲೋಹದಿಂದ ಮಾಡಿದ ವಸ್ತುಗಳು (ಕಬ್ಬಿಣ, ಕಂಚು, ಹಿತ್ತಾಳೆ ಮುಂತಾದವು) ಮತ್ತು ಲೋಹೇತರ ವಸ್ತುಗಳು (ಮಣ್ಣು, ಮರ, ಚರ್ಮ, ಭೂರ್ಜಪತ್ರ ಮುಂತಾದವು) ಎಂದು ಎರಡು ರೀತಿಯಾಗಿ ವಿಂಗಡಿಸಿದ್ದಾರೆ. ಅವುಗಳ ಸ್ವರೂಪವನ್ನು ಕುರಿತು 'ಲೇಖನ ಸಾಮಾಗ್ರಿಗಳು' ಎಂಬ ಎರಡನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಿದೆ. ಹಸ್ತಪ್ರತಿಗಳನ್ನು ಬರೆಯುತ್ತಿದ್ದ ಬರೆಹಗಾರರನ್ನು 'ಲಿಪಿಕಾರರು' ಎಂದು ಕರೆಯುತ್ತಾರೆ. ಅವರು ಪ್ರಾಚೀನ ಜ್ಞಾನಪರಂಪರೆಯನ್ನು ತಲೆಮಾರಿನಿಂದ ತಲೆಮಾರಿಗೆ ಕೊಂಡೊಯ್ಯುವ ಭಾಷಿಕ ಸಂಕಥನಕಾರರು. ಲಿಪಿಕಾರರಿಗೆ ರಾಜರಿಂದ, ಆಶ್ರಯದಾತರಿಂದ ಪ್ರೋತ್ಸಾಹ ದೊರೆಯುತ್ತಿತ್ತು. ಕೃತಿಯನ್ನು ಪ್ರತಿಮಾಡಿದ ನಂತರ ಅವರಿಗೆ ಧನ ಇಲ್ಲವೆ ಧಾನ್ಯದ ರೂಪದಲ್ಲಿ ಪ್ರತಿಫಲ ಸಲ್ಲುತ್ತಿತ್ತು. ಲಿಪಿಕಾರರು ತಾವು ನಕಲು ಮಾಡಿದ ಗ್ರಂಥಗಳ ಅಂತ್ಯದಲ್ಲಿ ಕೆಲವು ವೇಳೆ ತಮ್ಮ ವಿಚಾರಗಳನ್ನು ತಿಳಿಸುವ ಪ್ರಶಸ್ತಿಗಳನ್ನು ಬರೆದಿರುತ್ತಾರೆ. 'ಆನಂದ ಸಂವತ್ಸರದ ಕಾರ್ತಿಕ ಬಹುಳ ಪಾಡ್ಯ ಸೋಮವಾರದಲ್ಲು ಮಲ್ಲರಸನು ಬರೆದ ವೊಡ್ಡಾರಾಧನೆ ಸಮಾಪ್ತಂ'

ಹಸ್ತಪ್ರತಿ ಪ್ರಶಸ್ತಿಗಳಿಂದ ಲಿಪಿಕಾರರ ಸ್ಥಳ, ಪ್ರತಿಯಾದ ಕಾಲ, ಪ್ರಾದೇಶಿಕ ಪಾಠ ಸಂಪ್ರದಾಯ ಇತ್ಯಾದಿ ಅಂಶಗಳು ತಿಳಿದುಬರುತ್ತವೆ. ಡಿ.ಎಲ್.ಎನ್. ಅವರು ವೃತ್ತಿನಿರತ ಮತ್ತು ವೃತ್ತಿನಿರತವಲ್ಲದ ಲಿಪಿಕಾರರೆಂಬುದಾಗಿ ಎರಡು ರೀತಿಯಾಗಿ ಲಿಪಿಕಾರರನ್ನು

ವಿಂಗಡಿಸಿದ್ದಾರೆ. ಲಿಪಿಕಾರರಿಗೆ ತಮ್ಮ ದೇಹ, ಮನಸ್ಸುಗಳ ಎಚ್ಚರಿಕೆಯ ಇತಿಮಿತಿಗಳು ಅರಿವು ಹಾಗೂ ಅದನ್ನು ಮರೆಮಾಚದೆ ಮುಕ್ತವಾಗಿ ಒಪ್ಪಿಕೊಳ್ಳುವ ಪ್ರಾಜ್ಞತೆ, ಪ್ರಾಮಾಣಿಕತೆ ಎರಡೂ ಇವೆ. 'ತಿದ್ದಿಕೊಂಬುದು ಸುತರ ತಪ್ಪು ತಿದ್ದುವಂತೆ', 'ತಪ್ಪಿರೆ ತಿದ್ದಿಲೇಸಾಗಿ ನಿಮಗೆ ಕೈಮುಗಿವೆ' ಎಂದು ಮುಂತಾಗಿ ಸದುವಿನಯದಿಂದ ತಿದ್ದುಕೊಂಡು ಓದಲು ನಿವೇದಿಸಿಕೊಂಡಿದ್ದಾರೆ. ಈ ಎಲ್ಲ ಅಂಶಗಳನ್ನು 'ಲಿಪಿಕಾರರು ಮತ್ತು ಅವರ ಆದರ್ಶ' ಎಂಬ ಮೂರನೆಯ ಅಧ್ಯಾಯದಲ್ಲಿ ಲಿಪಿಕಾರರ ಮನೋಧರ್ಮವನ್ನು ಸೂಕ್ಷ್ಮವಾಗಿ ಪರಿಶೀಲಿಸಿದ್ದಾರೆ. 'ಹಸ್ತಪ್ರತಿಗಳ ಸ್ವರೂಪ ಮತ್ತು ವಿಂಗಡಣೆ' ಎಂಬುದು ನಾಲ್ಕನೆಯ ಅಧ್ಯಾಯ. ಇದರಲ್ಲಿ ಕವಿಯ ಸ್ವಹಸ್ತಾಕ್ಷರ ಪ್ರತಿ, ಏಕೈಕಹಸ್ತಪ್ರತಿ, ಮಾತೃಕೆ, ಪರಂಪರಾಗತ ಪ್ರತಿಗಳು, ಮಿಶ್ರ ಪ್ರತಿಗಳು ಅವುಗಳ ಸ್ವರೂಪವನ್ನು ಹೇಳಿದ್ದಾರೆ. ಸಂಪಾದಕನಾದವನು ತನಗೆ ದೊರೆತ ಹಸ್ತಪ್ರತಿಗಳನ್ನು ಎಚ್ಚರಿಕೆಯಿಂದ ಪರೀಕ್ಷೆ ಮಾಡಿ ಅವು ಯಾವ ತೆರನಾದ ಪ್ರತಿಗಳೆಂಬ ವಿಷಯದಲ್ಲಿ ಒಂದು ತೀರ್ಮಾನಕ್ಕೆ ಬಂದು ಅವಕ್ಕೆ ಉಚಿತವಾದ ಸಂಪಾದನಾ ಕ್ರಮವನ್ನು ಅನುಸರಿಸಬೇಕಾಗಿದೆ. ಇವು ಇಲ್ಲಿ ನಿರೂಪಿತವಾಗಿರುವ ವಿಷಯ. ತುಂಬ ಚೊಕ್ಕವಾದ ಹಾಗೂ ಆಕರ್ಷಕವಾದ ಅಧ್ಯಾಯವಿದು. ಐದನೆಯ ಅಧ್ಯಾಯ 'ಪಾಠಾಂತರ ಸಂಕಲನ', ಸಂಪಾದನೆಗೆ ಎತ್ತಿಕೊಂಡ ಒಂದು ಗ್ರಂಥದ ಹಸ್ತಪ್ರತಿಗಳು ಎಷ್ಟು ದೊರೆಯುತ್ತವೆಯೋ ಅಷ್ಟನ್ನು ಸಂಪಾದಕನು ಪರಿಶೀಲಿಸುವುದು ಅಗತ್ಯ. 'ಅವುಗಳಲ್ಲಿ ಕಾಲದ ದೃಷ್ಟಿಯಿಂದ ಪ್ರಾಚೀನವಾದುವು. ಪ್ರಾದೇಶಿಕ ದೃಷ್ಟಿಯಿಂದ ಗಮನಾರ್ಹವಾದುವು, ಪರಿಶುದ್ಧತೆಯ ದೃಷ್ಟಿಯಿಂದ ಉತ್ತಮವಾದುವು ಇಂತಹ ಪ್ರತಿಗಳನ್ನು ಆರಿಸಿಕೊಳ್ಳಬೇಕು' (ಪು.70) ಎಂದು ಡಿ.ಎಲ್.ಎನ್.ರು ಸೂಚಿಸಿದ್ದಾರೆ. ಇತರ ಪ್ರತಿಗಳ ಪಾಠವನ್ನು ಹೋಲಿಸಿ ನೋಡಿ ಪಾಠಾಂತರಗಳನ್ನು ಬರೆದುಕೊಳ್ಳಬೇಕು, ಹೀಗೆ ಎಲ್ಲ ಪ್ರತಿಗಳ ಪಾಠಾಂತರಗಳನ್ನು ಒಂದು ಪ್ರತಿಯಲ್ಲಿ ಒಟ್ಟಾಗಿ ಕೂಡಿಸುವುದಕ್ಕೆ ಪಾಠಾಂತರ ಸಂಕಲನ ಎಂದು ಹೆಸರು. ಪಾಠಾಂತರಗಳ ಸಂಕಲನ ಕಾರ್ಯ ಮುಗಿದ ಕೂಡಲೇ ಪಾಠಾಂತರಗಳ ಪರಿಶೀಲನೆಯಿಂದ 'ಅಕ್ಷರ ಸ್ಖಾಲಿತ್ಯಗಳು', 'ಇತರ ಸ್ಖಾಲಿತ್ಯಗಳು' ಈ ಕುರಿತು ವಿಶದವಾಗಿ ಆರು ಮತ್ತು ಏಳನೆಯ ಅಧ್ಯಾಯದಲ್ಲಿ ವಿವೇಚಿಸಿದ್ದಾರೆ. ಲಿಪಿಕಾರನ ಕೈತಪ್ಪು, ಕಣ್ತಪ್ಪು, ಕಿವಿತಪ್ಪುಗಳಿಂದ ಅನೇಕ ಸ್ಖಾಲಿತ್ಯಗಳು ನಕಲಿನಲ್ಲಿ ಮೈದೋರುತ್ತವೆ.

– ಸಾಸನ ಮರ್ಯಾದೆಯಿಂ ಕೊಟ್ಟ ಕರಿಯನೆಲಂ ಮರ್ತನೊಜುಲಂಕದೊಳಂ ಮತ್ತ (ಅಂಕದೊಳಂ ಎಂದಿರಬೇಕು)

– ಕಡುಬೇಸಗೆಯ ಬಿಸಿಲಿನಿಂದ ಬಸಳಿದ ಕೋಮಲ ರಸಾಲದಂತೆ (ಜೈ.ಮಿ.ಭಾ 1-14) [ಬಸವಳಿದ]

– ಹಸ್ತಿನಾವತಿಗೆ ವೇದ ವ್ಯಾಮುನಿಯೊಂದಿನಂ ಬಂದವು (ಜೈ.ಮಿ.ಭಾ. 1-13) [ವ್ಯಾಸ]

ಲಿಪಿಕಾರರು ಸಾಧಾರಣವಾಗಿ ಮಾಡಬಹುದಾದ ಕಾಗುಣಿತ ಸ್ಖಾಲಿತ್ಯಗಳನ್ನು ಡಿ.ಎಲ್.ಎನ್. ಅವರು ಲೋಪ (ಇರುವುದನ್ನು ಬಿಡುವುದು), ಪ್ರಕ್ಷೇಪ (ಹೊಸದಾಗಿ ಸೇರಿಸುವುದು), ವ್ಯತ್ಯಾಸ (ಇರುವುದನ್ನು ಬದಲಾಯಿಸುವುದು) ಎಂದು ವಿಂಗಡಿಸಿ ವಿಪುಲವಾದ ಉದಾಹರಣೆಗಳಿಂದ ಚರ್ಚಿಸಿದ್ದಾರೆ. ಅನೇಕ ಕ್ಲೇಷಕರ ಪದ್ಯಗಳನ್ನು ಸರಿಪಡಿಸಿರುವುದು ನಿಜಕ್ಕೂ ಪಾಂಡಿತ್ಯಕ್ಕೆ ಒರೆಗಲ್ಲು. ಇದರಲ್ಲಿ ನರಸಿಂಹಾಚಾರ್ಯರ ಪ್ರತಿಭೆ, ಪಾಂಡಿತ್ಯ ಉಚ್ಚಮಟ್ಟದಲ್ಲಿ ಪ್ರಕಾಶಿಸಿದೆ. 'ಹಸ್ತಪ್ರತಿಗಳ ಪರಸ್ಪರ ಸಂಬಂಧ ಮತ್ತು ಪೀಳಿಗೆ' ಎಂಬುದು ಎಂಟನೆಯ ಅಧ್ಯಾಯ. ವಿಶೇಷವಾಗಿ ಚಂಪುಕೃತಿಗಳನ್ನು ಸಂಪಾದಿಸುವಾಗ ಸಂಪಾದಕನು ಹಸ್ತಪ್ರತಿಗಳ ಪರಸ್ಪರ ಸಂಬಂಧವನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾಗುತ್ತದೆ. ಸಂಪಾದನೆಗೆ ಉಪಯೋಗಿಸಿಕೊಳ್ಳುವ ಪ್ರತಿಗಳು ಸಂಖ್ಯೆಯಲ್ಲಿ ಅಧಿಕವಾದಂತೆಲ್ಲ ಅವುಗಳ ಪರಸ್ಪರ ಸಂಬಂಧ ಸೂಚಕ ಪೀಳಿಗೆ ಜಟಿಲವೂ ಅಧಿಕಾರವೂ ಆಗುತ್ತದೆ. ದೇಶಿ ಸಾಹಿತ್ಯ ಸಂಪಾದನೆಗೆ ಪೀಳಿಗೆಯ ಕ್ರಮಾದಿಗಳು ಅತಿ ಶಿಥಿಲವಾಗಬೇಕೆಂದೂ ಡಿ.ಎಲ್.ಎನ್‌ರು ಸೂಚಿಸಿದ್ದಾರೆ. 'ಹಳಗನ್ನಡ ಗ್ರಂಥಗಳ ಸಂಪಾದನೆ ಒಂದು ವ್ಯವಸ್ಥೆಗೆ ಒಳಪಡುವುದಾದರೂ ಅದೇ ವ್ಯವಸ್ಥೆಯನ್ನು ನಡುಗನ್ನಡದ ಮತ್ತು ಈಚಿನ ಕಾಲದ ಗ್ರಂಥಸಂಪಾದನೆಗೆ ಅನ್ವಯಿಸುವುದರಲ್ಲಿ ಕೆಲವು ಕ್ಲೇಶಗಳಿವೆ. ನಡುಗನ್ನಡ ಗ್ರಂಥಗಳಲ್ಲಿ ಹಲವು ವೇಳೆ ಹಳಗನ್ನಡದ ಪ್ರಯೋಗಗಳು ಮಿಶ್ರಣವಾಗಿರುತ್ತವೆ. ಇದು ಒಂದೊಂದು ಹಸ್ತಪ್ರತಿಯಲ್ಲಿ ಒಂದೊಂದು ತರನಾಗಿರುತ್ತದೆ. ಇದು ಸಂಪಾದನ ಕಾರ್ಯಕ್ಕೆ ಅಳಪಡುವುದು ಅಸಾಧ್ಯವೆಂದು ತೋರಬಹುದು. ಇದಕ್ಕೆ ಬೇರೆ ಕ್ರಮವನ್ನು ಏರ್ಪಡಿಸಬೇಕಾಗುತ್ತದೆ' (ಪು. 160). ದೇಸಿ ಸಾಹಿತ್ಯ ಸಂಪಾದನೆಗೆ ಬೇರೆ ಮಾನದಂಡಗಳಿವೆ ಎಂಬ ಅಂಶ ಡಿ.ಎಲ್.ಎನ್‌ರಿಗೆ ಮನದಟ್ಟಾಗಿದೆ ಎಂಬುದು ಗಮನಾರ್ಹ.

ಈ ಕೃತಿಯಲ್ಲಿ ಅತ್ಯಂತ ದೊಡ್ಡ ಅಧ್ಯಾಯವಾದ 'ಪಾಠ ಪರಿಷ್ಕರಣ' ಒಂಬತ್ತನೆಯದು. ಗ್ರಂಥಸಂಪಾದನೆಯ ಕಾರ್ಯವು ಹಸ್ತಪ್ರತಿ ಸಂಗ್ರಹ, ವರ್ಗೀಕರಣ, ಪಾಠ ಸಂಕಲನ ಹಾಗೂ ಪಾಠ ಪರಿಷ್ಕರಣ ಹಂತಗಳಲ್ಲಿ ನಡೆಯುತ್ತದೆ. ಪ್ರತಿಯೊಂದು ಹಂತಗಳಲ್ಲಿಯೂ ಅನುಸರಿಸಬೇಕಾದ ಪ್ರತ್ಯೇಕ ನಿಯಮಗಳನ್ನು ಡಿ.ಎಲ್.ಎನ್. ಹೇಳಿದ್ದಾರೆ. ಅವುಗಳಲ್ಲಿ ಪಾಠ ಪರಿಷ್ಕರಣ ಗ್ರಂಥ ಸಂಪಾದನೆಯ ಕೊನೆಯ ಘಟ್ಟ. ಅತಿ ಮಹತ್ವದ ಬೌದ್ಧಿಕ ಚಟುವಟಿಕೆ ಈ ಭಾಗವನ್ನು ಸಂಪಾದಕರು ಬಹುದಕ್ಷತೆಯಿಂದ ಸಾಧಿಸಬೇಕು. ಪಾಠಾಂತರಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿ 'ಅಂತಸ್ಸಂಭಾವ್ಯತೆ' ಮತ್ತು 'ಲಿಪಿಕಾರನ ಲೇಖನ ಸಂಭಾವ್ಯತೆ'ಯ ಸ್ವರೂಪವನ್ನು ಅನುಲಕ್ಷಿಸಿ ಒಪ್ಪಿತ ಪಾಠವನ್ನು ಹುಡುಕಬೇಕಾಗುತ್ತದೆ. ಡಿ.ಎಲ್.ಎನ್‌ರು ಹೇಳಿದ ಪಾಠ ಪರಿಷ್ಕರಣದ ಸಾಮಾನ್ಯ ತತ್ವಗಳು ಇವು.

1. ಸುಲಭ ಪಾಠಕ್ಕಿಂತ ಕಠಿಣ ಪಾಠ ಗಾಹ್ಯ
2. ಒಂದು ಸಂಪ್ರದಾಯಕ್ಕೆ ಸೇರಿದ ಒಂದು ಪ್ರತಿಯ ಪಾಠ ಮತ್ತು ಇನ್ನೊಂದು ಸಂಪ್ರದಾಯಕ್ಕೆ ಸೇರಿದ ಪಾಠಕ್ಕೆ ಸಮಾನವಾಗಿದ್ದರೆ ಅದೇ ಮೂಲಪಾಠ.
3. ಉಪಪ್ರಧಾನ ಮಾತೃಕೆಗಳ ಪಾಠಗಳು ಭಿನ್ನವಾಗಿದ್ದರೆ ಆಗ ಮೇಲಿನ ಎರಡು ಸಂಭಾವ್ಯತೆಗಳ ಒರೆಗಲ್ಲಿಗೆ ಉಜ್ಜಿ ಪರೀಕ್ಷಿಸಿ ಸ್ವೀಕರಿಸಬೇಕು.
4. ಭಿನ್ನ ಸಂಪ್ರದಾಯಗಳಲ್ಲಿ ಪ್ರಾಚೀನತರ ಪಾಠಕ್ಕೆ ಹೆಚ್ಚು ಪುರಸ್ಕಾರ (ಪು.174-75) ಈ ತತ್ವಗಳನ್ನು ಡಿ.ಎಲ್.ಎನ್.ರು ಹಲವು ಹಳಗನ್ನಡ ಪದ್ಯಗಳಿಗೆ ಅನ್ವಯಿಸಿ ಪಾಠದೋಷಗಳನ್ನು ಪರಿಹರಿಸಿದ್ದಾರೆ.

ಕಳಶಜನನಿಂತು ಕೊಲಿಸಿದ
ಖಳನೆಗಡಂ ಧರ್ಮನಂದನಂ ಕ್ರೂರದಿನಂ
ಗಳಪೆಸರಂ ಮಱೆಯಿಸಿ ಮಂ
ಗಳವಾರಂ 'ಕಡ್ಡ'ವಾರ ಮೆಂಬಂತೆ ವಲಂ

(ಗದಾಯುದ್ಧ 3-26)

ಇದರಲ್ಲಿ 'ಕಡ್ಡ' ಎಂಬುದಕ್ಕೆ 'ವಡ್ಡ' ಎಂದು ಒಂದು ಪ್ರತಿಯಲ್ಲಿ ಪಾಠವಿದೆ. 'ವಡ್ಡ' ಪಾಠವೇ ಸ್ವೀಕರಣ ಯೋಗ್ಯವಾಗಿದೆ. ಡಿ.ಎಲ್.ಎನ್‌ರು ಆ ಪದ್ಯ ಕೊನೆಯ ಚರಣವನ್ನು ' ಗಳವಾರಂ 'ವಡ್ಡ'ವಾರ ಮೆಂಬಂತೆವಲಂ' ಎಂದು ಪರಿಷ್ಕರಿಸಿದ್ದಾರೆ. ಡಿ.ಎಲ್.ಎನ್‌ರು ಇಂತಹ ಹಲವಾರು ಸ್ಖಾಲಿತ್ಯಯುಕ್ತ ಹಳಗನ್ನಡ ಪದ್ಯಗಳನ್ನು ತಮ್ಮ ಬಹುಶಿಸ್ತೀಯ ಪಾಂಡಿತ್ಯದ ಬಲದಿಂದ ಪರಿಹರಿಸಿದ್ದಾರೆ. ಗ್ರಂಥಸಂಪಾದನೆಯಲ್ಲಿ ಪಾಠಪರಿಷ್ಕರಣ ಎಷ್ಟು ಮಹತ್ವದೆಂಬುದು ಇದರಿಂದ ವಿದಿತವಾಗುತ್ತದೆ. ಬುದ್ಧಿ ಭಾವಗಳ ವಿಲಾಸವಿರುವ ಈ ಅಧ್ಯಾಯದ ಓದು ಒಂದು ಹೊಸ ಅನುಭವ ಉಂಟಾಗುತ್ತದೆ.

ಹಲವಾರು ಹಸ್ತಪ್ರತಿಗಳನ್ನು ಪರಿಶೀಲಿಸಿ ಮೌಲಿಕ ಗ್ರಂಥಗಳನ್ನು ಸಂಪಾದಿಸಿದ ಡಿ.ಎಲ್.ಎನ್‌ರು ಮುಂದಿನ ತಲೆಮಾರಿನ ಸಂಪಾದಕರಿಗೆ ಉಪಯುಕ್ತವಾದ ಸೂಚನೆಗಳನ್ನು ಕೊಟ್ಟಿದ್ದಾರೆ. ಗ್ರಂಥಸಂಪಾದನೆಯ ಮಹತ್ವವನ್ನು ಹೇಳುತ್ತ 'ಕವಿಯ ಹಸ್ತಪ್ರತಿಯ ಪಾಠವೇನಿದ್ದಿತೆಂಬುದನ್ನು ಕಂಡುಹಿಡಿಯುವ ಅವನ ಸರ್ವ ಪ್ರಯತ್ನಗಳೂ ಶ್ಲಾಘ್ಯವಾದುವು; ಅವು ಸತತವಾಗಿ ನಡೆಯುತ್ತಲೇ ಇರುತ್ತವೆ. ಅವನ ಮನಸ್ಸಿನಲ್ಲಿ ಜೀರ್ಣದೇವಾಲಯವನ್ನು ಉದ್ಧಾರ ಮಾಡುವ ಕಾರ್ಯ ಎಷ್ಟು ಪವಿತ್ರವೋ ಅಷ್ಟೇ ಪುಣ್ಯಕರವಾದದ್ದು, ಸಂಸ್ಕೃತಿಯ ಆಕರವಾಗಿರುವ ಪ್ರಾಚೀನ ಗ್ರಂಥಗಳ ಪಾಠವನ್ನು ಪರಿಷ್ಕಾರಗೊಳಿಸುವುದು. ಕವಿ-ಕಾವ್ಯವನ್ನು ಲೋಕಕ್ಕೆ ದಾನ ಮಾಡುತ್ತಾನೆ; ಅದನ್ನು ಸಂರಕ್ಷಿಸಿಕೊಂಡು ಬರುವುದು ಸಂಪಾದಕ ವಿದ್ವಾಂಸರ ಹೊಣೆಗಾರಿಕೆ' (ಪು.217). ಈ ಅಂಶಗಳ ಹಿಂದೆ ಡಿ.ಎಲ್.ಎನ್.ರಿಗಿದ್ದ ಕಳಕಳಿಯನ್ನೂ ಗುರುತಿಸಬೇಕು. ಮುದ್ರಿತ ಗ್ರಂಥಗಳ ಸಂಪಾದನೆಯ ಸ್ವರೂಪ ಹನ್ನೊಂದನೆಯ ಅಧ್ಯಾಯದ ವಸ್ತುವಾಗಿದೆ.

'ಇತರ ವಿಷಯಗಳು' ಎಂಬ ಕೊನೆಯ ಅಧ್ಯಾಯದಲ್ಲಿ ವಿಮರ್ಶಕರಿಗೆ, ಭಾಷಾಶಾಸ್ತ್ರಜ್ಞರಿಗೆ, ವ್ಯಾಕರಣಕಾರರಿಗೆ, ನಿಘಂಟುಕಾರರಿಗೆ ಗ್ರಂಥಸಂಪಾದನೆಯಿಂದ ಆಗುವ ಮಹತ್ವವನ್ನು ಹೇಳಿದ್ದಾರೆ. ಪಾರಿಭಾಷಿಕ ಪದಗಳ ಅಕಾರಾದಿ, ಉದಾಹರಣೆಗಳ ಅಕಾರಾದಿ, ಸಹಾಯಕ ಗ್ರಂಥಸೂಚಿ, ಓದಬಹುದಾದ ಪುಸ್ತಕಗಳು, ಕನ್ನಡ ಹಸ್ತಪ್ರತಿ ಭಂಡಾರಗಳು ಎಂಬ ಅನುಬಂಧಗಳು ಕೃತಿಯ ಮಹತ್ವವನ್ನು ಹೆಚ್ಚಿಸಿವೆ.

ಈ ಕೃತಿಯ ನಿರ್ವಹಣೆಯ ಉದ್ದಕ್ಕೂ ನರಸಿಂಹಾಚಾರ್ಯರು ಒಂದು ನಿಶ್ಚಿತ ಕ್ರಮ ಹಿಡಿದಿದ್ದಾರೆ. ಯಾವುದೇ ಒಂದು ಸಂಗತಿಯನ್ನು ನಿರೂಪಿಸುವಾಗ ಮೊದಲು ಅದರ ಸ್ವರೂಪ, ಲಕ್ಷಣಗಳನ್ನು ಉದಾಹರಣೆಗಳ ಮೂಲಕ ವಿಶದೀಕರಿಸುತ್ತಾರೆ. ನೂರಾರು ಹಳಗನ್ನಡದ ಕಠಿಣಪದ್ಯಗಳ ಅರ್ಥ ಸ್ವಾರಸ್ಯಗಳನ್ನು ಇಲ್ಲಿ ಸ್ಪಷ್ಟಗೊಳಿಸಲಾಗಿದೆ. ಹಳಗನ್ನಡ ಪದ್ಯಗಳ ಅರ್ಥ ವಿಶ್ಲೇಷಣೆಯಷ್ಟೇ ತಲಸ್ಪರ್ಶಿಯೂ ಅತ್ಯಂತ ವ್ಯಾಪಕವೂ ಆದ ಡಿ.ಎಲ್.ಎನ್‌ರ ಹಳಗನ್ನಡ ವಿದ್ವತ್ತು ಇಲ್ಲಿ ಪ್ರಕಟವಾಗಿದೆ. ಅವರ ಭಾಷೆ, ವ್ಯಾಕರಣ, ಛಂದಸ್ಸುಗಳ ಅಧ್ಯಯನ ಈ ಕೃತಿಯ ಉದ್ದಕ್ಕೂ ಬಳಕೆಯಾಗಿದೆ. ಅವರ ಪಾಂಡಿತ್ಯದ ಬಹುಜ್ಞತೆ ಉಲ್ಲೇಖನೀಯವಾದ್ದು. 'ಪಾಠಪರಿಷ್ಕರಣ' ಭಾಗದಲ್ಲಿ ನರಸಿಂಹಾಚಾರ್ಯರ ವೈದುಷ್ಯದ ಸ್ವರೂಪ ಉಜ್ವಲವಾಗಿ ಪ್ರಕಾಶಗೊಂಡಿದೆ. ಡಿ.ಎಲ್.ಎನ್ ಅವರು ಒಪ್ಪಿತ ಪಾಠವನ್ನು ಶೋಧಿಸುವ ಹೊಣೆ ಸಂಪಾದಕನಿಗೆ ಇರಬೇಕೆಂಬುದನ್ನು ಪ್ರತಿಪಾದಿಸಿದರಲ್ಲದೆ, ತಾವು ಸಂಪಾದಿಸಿದ ಗ್ರಂಥಗಳಲ್ಲಿ ಅದನ್ನು ಅನ್ವಯಿಸುವ ಪ್ರಯತ್ನವನ್ನೂ ಮಾಡಿದ್ದಾರೆ. 'ಒಪ್ಪಿತ ಪಾಠ' ಶೋಧವೇ ಡಿ.ಎಲ್.ಎನ್‌ರಿಗೆ ಮುಖ್ಯವಾಗಿದೆ. ಆದರೆ ಆ ಪರಿಕಲ್ಪನೆ ಮತ್ತೆ ಮರುಚರ್ಚೆಯನ್ನು ಬಯಸುತ್ತದೆ. ಸಂಪಾದನೆಯ ಗ್ರಹಿಕೆಯ ನೆಲೆಗಳು ಈಗ ಭಿನ್ನ ದೃಷ್ಟಿಕೋನವನ್ನು ತಾಳುತ್ತಿವೆ.

ಕನ್ನಡ ಗ್ರಂಥಸಂಪಾದನ ಕ್ಷೇತ್ರದಲ್ಲಿ ಒಂದು ಹೊಸದಿಗಂತವನ್ನೇ ತೆರೆದು ತೋರಿದ ಮೌಲಿಕ ಕೃತಿ 'ಕನ್ನಡ ಗ್ರಂಥಸಂಪಾದನೆ' ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಇಂದು ಕನ್ನಡದಲ್ಲಿ 'ಗ್ರಂಥಸಂಪಾದನೆ' ಶೈಕ್ಷಣಿಕ ಶಿಸ್ತಾಗಿ, ಅಧ್ಯಯನ ವಿಷಯವಾಗಿದ್ದರೆ ಡಿ.ಎಲ್.ಎನ್‌ರ ಈ ಕೃತಿ ರಚನೆಯೂ ಒಂದು ಕಾರಣವೆಂಬುದು ಸಂದೇಹವಿಲ್ಲ. 'ಕನ್ನಡ ಗ್ರಂಥಸಂಪಾದನೆ'ಯಂತಹ ಕೃತಿ ಕನ್ನಡಕಂತೂ ಹೊಸತು. ಉಳಿದ ಭಾರತೀಯ ಭಾಷೆಗಳಲ್ಲೂ ಅಂತಹ ಕೃತಿಯೊಂದು ನಿರ್ಮಾಣವಾಗಿರುವಂತೆ ಕಾಣುವುದಿಲ್ಲ. ಬಹುಶಃ ಅದನ್ನು ಇಂಗ್ಲಿಷಿಗೆ ಅನುವಾದಿಸಿದರೆ ಆ ಕ್ಷೇತ್ರಕ್ಕೆ ಅದೊಂದು ಮೌಲಿಕ ಕೊಡುಗೆಯೂ ಆಗಬಲ್ಲದು' ಎಂದು ಎಂ. ಚಿದಾನಂದಮೂರ್ತಿ ಅವರು ತೀರ್ಪು ಕೊಡುತ್ತಾರೆ. ಈ ಪುಸ್ತಕ ಬಂದ ಮೇಲೆ ಪ್ರಾಚೀನ ಗ್ರಂಥಗಳನ್ನು ಸಂಪಾದಿಸುವವರಲ್ಲಿ ಹೆಚ್ಚಿನ ಶಾಸ್ತ್ರೀಯ ದೃಷ್ಟಿ ಮೂಡಿತು ಎಂಬುದು ಗಮನಾರ್ಹ. ನರಸಿಂಹಾಚಾರ್ಯರು ಶ್ರೇಷ್ಠ ಗ್ರಂಥಸಂಪಾದಕರು; ಅವರ ಈ ಕೃತಿ ಗ್ರಂಥಸಂಪಾದನೆಯ ವಿದ್ವತ್ ಶಿಖರವಾಗಿದೆ.

* * *

# 6. ಕನ್ನಡದ ಸಾರಸ್ವತ ಸಂಪತ್ತನ್ನು ಬೆಳಗಿಸಿದ ಸಂಭಾವಿತ – ತೀ.ನಂ.ಶ್ರೀ.

– ವಿ. ವೆಂಕಟರಾವ್

ಶ್ರೇಷ್ಠ ವಿದ್ವಾಂಸ, ಭಾಷಾಶಾಸ್ತ್ರಜ್ಞ, ಹಿರಿಯ ಕವಿ, ಉತ್ತಮ ವಾಗ್ಮಿ, ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರ ಪ್ರಮುಖ ಶಿಷ್ಯರಲ್ಲಿ ಒಬ್ಬರೂ, ನಡೆ–ನುಡಿ–ಪಾಂಡಿತ್ಯಗಳಲ್ಲಿ ಹಿರಿತನದಿಂದ ಬೆಳಗಿದ್ದವರೂ ಆದ ಪ್ರಾಧ್ಯಾಪಕ ತೀ.ನಂ.ಶ್ರೀಕಂಠಯ್ಯನವರು ಕನ್ನಡ ಸಾರಸ್ವತ ಲೋಕದ ಪ್ರತಿಷ್ಠಿತರಲೊಬ್ಬರಾಗಿದ್ದರು. ದಿವ್ಯಧವಳ ಧೋತ್ರ, ರೇಷ್ಮೆ ಅಂಗಿ, ಕಣ್ಣಿಗೆ ಕನ್ನಡಕ ಧರಿಸಿದ ಎತ್ತರದ ನಿಲುವಿನ, ಗುಂಡುಮುಖದ, ಮುಗುಳು ನಗೆಯು ಅವರದು. ನೋಡಿದ ಕೂಡಲೆ ಪೂಜ್ಯಭಾವನೆ ಹುಟ್ಟಿಸುತ್ತಿದ್ದಂತಹ ವ್ಯಕ್ತಿತ್ವ.

ಹಿಡಿದ ಕೆಲಸವನ್ನು ಎಷ್ಟೇ ಕಷ್ಟ ಬಂದಾಗ್ಯೂ ಮುಗಿಸುವ ದೃಢತೆ, ವಕ್ರ ಮಾರ್ಗಕ್ಕೆ ಮನಸ್ಸನ್ನೋಡಿಸದ ಋಜುಶೀಲ ತೀ.ನಂ.ಶ್ರೀಯವರು ಸಾಹಿತ್ಯ ಕ್ಷೇತ್ರದಲ್ಲೇ ಆಗಲಿ, ವ್ಯವಹಾರದಲ್ಲೇ ಆಗಲಿ ಚೊಕ್ಕವಾದ ಸಭ್ಯತನ, ಯಾವ ಸಂದರ್ಭದಲ್ಲೇ ಆಗಲಿ ಸತ್ಯಕ್ಕೆ ದೂರವಾದ ವಿಷಯವನ್ನು ಕೆಚ್ಚೆದೆಯಿಂದ ಎದುರಿಸುತ್ತಿದ್ದರು. ಒಂದು ದೃಷ್ಟಾಂತ. ಮುಂಬಯಿಯ ಸೇಂಟ್ ಜೇವಿಯರ್ ಕಾಲೇಜಿನ ರೆ॥ ಫಾದರ್ ಹೆರಾಸ್‌ರವರು ಮೊಹೆಂಜೊದಾರೊ ಸಂಶೋಧನೆಗಳಲ್ಲಿ ದೊರೆತ ನಾಣ್ಯಗಳ ಮೇಲಣ ಭಾಷೆ ಕನ್ನಡವೆಂದು ವಾದಿಸಿದ್ದರು. ಕನ್ನಡದ ಪ್ರಾಚೀನತೆ ಕ್ರಿ.ಪೂ. ನಾಲ್ಕೈದು ಸಾವಿರ ವರುಷ ಹಿಂದೆ ಹೋಗುತ್ತೆಂದು ಅನೇಕರು ಹೆಮ್ಮೆಪಟ್ಟರು. ಆದರೆ ಈ ವಿಷಯ ತಿಳಿದ ತೀ.ನಂ. ಶ್ರೀಯವರು 'ಅಭಿಮಾನ ಸತ್ಯದ ಕಣ್ಣು ಮುಚ್ಚಬಾರದು' ಎಂದು ಎಚ್ಚರಿಸಿದರು. ಶ್ರೀಯುತರ ವಿದ್ವದ್ಗಾಂಭೀರ್ಯ ಹಾಗೂ ಸತ್ಯಪ್ರಿಯತೆಗೆ ಈ ಮಾತು ಸಾಕ್ಷಿ.

ತೀ.ನಂ.ಶ್ರೀ 26.11.1906ರಲ್ಲಿ ತುಮಕೂರು ಜಿಲ್ಲೆಯ ಚಿಕ್ಕನಾಯ್ಕನಹಳ್ಳಿ ತಾಲೂಕು ತೀರ್ಥಪುರದಲ್ಲಿ ಜನಿಸಿದರು. ಬಾಲ್ಯದಿಂದಲೇ ಜ್ಞಾನದಾಹ ಮೈಗೂಡಿ ಬಂದಿತ್ತು. ಕನ್ನಡ ಸಂಸ್ಕೃತಗಳನ್ನು ಕಲಿತರು. ಇಂಗ್ಲಿಷ್ ಭಾಷೆಯ ಪರಿಚಯವೂ ಆಯಿತು. ಹೇಳಿ ಕೊಟ್ಟದ್ದನ್ನು ಒಮ್ಮೆಲೇ ಗ್ರಹಿಸಿಕೊಂಡು ಸಮರ್ಥಿಸಬಲ್ಲ ಇವರ ಪ್ರಚಂಡ ಬುದ್ಧಿಶಕ್ತಿ ಉಪಾಧ್ಯಾಯರುಗಳನ್ನು ಬೆರಗುಗೊಳಿಸಿತ್ತು. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೆ ಕನ್ನಡ – ಇಂಗ್ಲಿಷ್‌ಗಳಲ್ಲಿ ಕವನ ರಚಿಸಲು ತೊಡಗಿದರು.

**ವಿಜ್ಞಾನದಿಂದ ಸಾಹಿತ್ಯಕ್ಕೆ :**

ತೀ.ನಂ.ಶ್ರೀಯವರ ಹೈಸ್ಕೂಲ್ ವ್ಯಾಸಂಗ ತುಮಕೂರಿನಲ್ಲಿ ನಡೆಯಿತು. ಸಂಸ್ಕೃತ ಇವರ ದ್ವಿತೀಯ ಭಾಷೆ, ವಿಜ್ಞಾನ ಹಾಗೂ ಗಣಿತ ಐಚ್ಛಿಕ ವಿಷಯಗಳು. ಎಸ್.ಎಸ್.ಎಲ್.ಸಿ.ಯಲ್ಲಿ ಅತ್ಯುನ್ನತ ಮಟ್ಟದಲ್ಲಿ ತೇರ್ಗಡೆ ಹೊಂದಿದ ಶ್ರೀಯವರು ಕಾಲೇಜಿನಲ್ಲೂ ವಿಜ್ಞಾನವನ್ನೆ ಮುಂದುವರಿಸಬೇಕೆಂದು ಮೊದಲು ನಿರ್ಧರಿಸಿದರೂ, ಕನ್ನಡಿಗರ ಸುಕೃತದಿಂದ ತಮ್ಮ ನಿರ್ಧಾರವನ್ನು ಬದಲಿಸಿ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಕನ್ನಡ, ಸಂಸ್ಕೃತಗಳನ್ನು ತೆಗೆದುಕೊಂಡು ಅಭ್ಯಾಸ ಮಾಡತೊಡಗಿದರು. ದಿವಂಗತ ಹಿರಿಯಣ್ಣ, ಕೀರ್ತಿಶೇಷ ಬಿ.ಎಂ.ಶ್ರೀ, ಟಿ.ಎಸ್. ವೆಂಕಣ್ಣಯ್ಯನವರ ಕೈಕೆಳಗೆ ಪಳಗಿ ಕನ್ನಡ ಇಂಗ್ಲಿಷ್ ಭಾಷೆಗಳಲ್ಲಿ ಸೊಗಸಾದ ಪಾಂಡಿತ್ಯ ಅರ್ಜಿಸಿದುದಲ್ಲದೆ, ಆಳವಾದ ಸ್ವಂತ ವ್ಯವಸಾಯದಿಂದ ಸಂಸ್ಕೃತದಲ್ಲಿ ಹಿರಿಯಣ್ಣನವರ ಮಾರ್ಗದರ್ಶನದಲ್ಲಿ ವಿಶೇಷ ಪ್ರೌಢಿಮೆ ಸಂಪಾದಿಸಿದರು.

ತೀ.ನಂ.ಶ್ರೀ. ಬಿ.ಎ. ತರಗತಿಯಲ್ಲಿ ಓದುತ್ತಿರುವಾಗಲೆ 'ರನ್ನಕವಿ ಪ್ರಶಸ್ತಿ' ಎಂಬ ಪ್ರಶಸ್ತಿ ಗ್ರಂಥದಲ್ಲಿ ಬರೆದ 'ಗದಾಯುದ್ಧವೂ ಸ್ವೀಕರಣ ವಿಚಾರವೂ'ವೆಂಬ ವಿಮರ್ಶಾತ್ಮಕ ಪ್ರಬಂಧ ಇವರು ಆಗಿನ ಪಾಂಡಿತ್ಯದ ಪ್ರತಿಭೆಯನ್ನು ವ್ಯಕ್ತಪಡಿಸುತ್ತದೆ. ಇಂಗ್ಲಿಷ್ ಹಾಗೂ ಕನ್ನಡ ಎಂ.ಎ. ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿ ಅನೇಕ ಚಿನ್ನದ ಪದಕಗಳನ್ನು ಪಡೆದರು. ಬಳಿಕ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಗೆ ಕುಳಿತರು. ಅದರಲ್ಲಿ ಪ್ರಥಮ ಸ್ಥಾನ ದೊರಕದಿದ್ದರೂ ಇವರ ವಿದ್ಯಾ ಪ್ರೌಢಿಮೆಯನ್ನು ಮೆಚ್ಚಿ ಮೈಸೂರು ಸರ್ಕಾರ ಇವರನ್ನು ಪ್ರೊಬೇಷನರಿ ಅಸಿಸ್ಟೆಂಟ್ ಕಮೀಷರನ್ನಾಗಿ ನೇಮಕ ಮಾಡಿತು. ತಮ್ಮ ಗುರುಗಳಾದ ಬಿ.ಎಂ.ಶ್ರೀ.ಯವರಿಗೆ ಸಿವಿಲ್ ಸರ್ವಿಸ್‌ಗೆ ಹೋಗಬೇಕೆಂಬ ಅಪೇಕ್ಷೆ ತಮಗೆ ಇದೆಯೆಂದು ತಿಳಿಸಿದಾಗ ಬಿ.ಎಂ.ಶ್ರೀಯವರು "ನಿಮ್ಮಂಥ ಮೇಧಾವಿಗಳು ವಿಶ್ವವಿದ್ಯಾನಿಲಯದಲ್ಲಿ ಇರಬೇಕು" ಎಂದರು. ಕನ್ನಡದ ಅಧ್ಯಾಪಕ ಸ್ಥಾನ ಅವರಿಗಾಗಿ ಕಾದಿತ್ತು.

ಗುರುವಾಕ್ಯವನ್ನು ಶಿರಸಾವಹಿಸಿ ತೀ.ನಂ.ಶ್ರೀ. ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ ನಿಂತರು. ಸಿವಿಲ್ ಸರ್ವಿಸ್‌ಗೆ ಆದ ನಷ್ಟ ಕನ್ನಡಕ್ಕೆ ಲಾಭವಾಯಿತು. ಕನ್ನಡಕ್ಕಾಗಿ ಅವರು ಮಾಡಿದ ತ್ಯಾಗ ಚಿರಸ್ಮರಣೀಯ. ಬಹು ವರ್ಷಕಾಲ ಅಧ್ಯಾಪಕರಾಗಿದ್ದ ಇವರು 1945ರ ಸುಮಾರಿನಲ್ಲಿ ಬೆಂಗಳೂರು ಇಂಟರ್ ಕಾಲೇಜಿನಲ್ಲಿ (ಈಗಿನ ಸರ್ಕಾರಿ ಕಾಲೇಜು) ಅಸಿಸ್ಟೆಂಟ್ ಪ್ರೊಫೆಸರರಾಗಿ ನೇಮಕವಾದರು.

ಮೈಸೂರು ಸರ್ಕಾರ ಕೆಲವು ಕಾಲ ತೀ.ನಂ.ಶ್ರೀ.ಯವರನ್ನು ರಾಜ್ಯ ಸಂವಿಧಾನದ ಕನ್ನಡ ರೂಪವನ್ನು ಸಿದ್ಧಗೊಳಿಸಲು ನಿಯಮಿಸಿತು. ಆ ಕೆಲಸವಾದ ಮೇಲೆ ಭಾರತ ಸರ್ಕಾರ ಇವರನ್ನು ಭಾರತ ರಾಜ್ಯ ಸಂವಿಧಾನದ ಭಾಷಾಂತರ ಕಾರ್ಯಕ್ಕೆ ಆಹ್ವಾನಿಸಿತು.

ಆ ಕೆಲಸ ಮುಗಿದ ಮೇಲೆ ತೀ.ನಂ.ಶ್ರೀ ದಾವಣಗೆರೆ ಇಂಟರ್ ಮೀಡಿಯಟ್ ಕಾಲೇಜಿನ ಸೂಪರಿಂಟೆಂಡೆಟರಾದರು.

**ಕವಿತಾರಚನೆ :**

ತೀ.ನಂ.ಶ್ರೀಯವರ ಸಾಹಿತ್ಯ ಸೇವೆ ಕವಿತಾ ರಚನೆಯಿಂದ ಆರಂಭವಾಯಿತೆಂದು ಹೇಳಬಹುದು. ಅವರ ಮೊದಮೊದಲಿನ ಕೆಲವು ಬರಹಗಳು ತುಮಕೂರು ಶಾಲೆಯ (ಖಿಘಿಂಂಟ ಈಟಂಇ) ಪ್ರತಿಕೆಯಲ್ಲಿ ಪ್ರಕಟವಾದವು. ಮೈಸೂರು ಕಾಲೇಜಿನ ವಿದ್ಯಾರ್ಥಿಗಳ ಕವನ ಸಂಕಲನಗಳಾದ 'ಕಿರಿಯ ಕಾಣಿಕೆ' ಹಾಗೂ 'ತಿಳಿರು' ಇವುಗಳಲ್ಲಿ ಇವರ ಕೆಲವು ಕವಿತೆಗಳು ಪ್ರಕಟವಾದವು. 1932ರಲ್ಲಿ 'ಒಲುಮೆ' ಗ್ರಂಥ ಪ್ರಕಟವಾಯಿತು. ಇದರಲ್ಲಿ ಸ್ವತಂತ್ರ ಪ್ರೇಮಗೀತೆಗಳ ಜೊತೆಗೆ ಸಂಸ್ಕೃತ ಪದ್ಯಗಳ ಅನುವಾದವನ್ನು ಕೂಡಿಸಿ ಪ್ರಕಟಿಸಿದರು. ಮೂಲ ಸಂಸ್ಕೃತ ರಚನೆಗಳ ಭಾವ, ರಸ, ಶಿಲ್ಪ ಕೆಡದಂತೆ ಶ್ರೀಯುತರು ಮಾಡಿರುವ ಅನುವಾದವು ಮೂಲಕ್ಕೆ ಬಹು ಹತ್ತಿರವಾಗಿ ಉತ್ತಮ ಅನುವಾದಕ್ಕೆ ಮಾದರಿಗಳಾಗಿ ಕಲಾಪ್ರಪೂರ್ಣವಾಗಿವೆ. ಒಂದು ದೃಷ್ಟಾಂತ:

ಏಕಿಂತು ಬಡವಾದೆ ಬಡನಡುವಿನವಳೆ
ಹೆರರ ಸುದ್ದಿಗಳೆಲ್ಲ ನಿನಿಗೇತಕೆ
ಇರಲಿರಲಿ ಹೇಳಿದನು ನನ್ನ ಸಂತಸಕೆ
ದಾರಿಗನೆ ಹೇಳು ಳು ನಿನ್ನ ಮಡದಿ"

ತೀ.ನಂ.ಶ್ರೀಯವರ ಸ್ವತಂತ್ರ ಪ್ರಣಯ ಗೀತೆಗಳು ಇಷ್ಟೆ ಸುಂದರವಾಗಿ ಶುಚಿಯಾಗಿವೆ. ಪರಿಶುದ್ಧ ಪವಿತ್ರ ದಾಂಪತ್ಯ ಜೀವನದ ಲಲಿತ ಮಧುರ ಶೃಂಗಾರ ಸನ್ನಿವೇಶಗಳಲ್ಲಿ ಮಿನುಗುವ ಪ್ರಣಯದ ಕುಡಿಮಿಂಚನ್ನು ತೀ.ನಂ.ಶ್ರೀ.ಯವರು ತಮ್ಮ ರಸಿಕತೆಯ ಬಲೆಯಲ್ಲಿ ಸೆರೆ ಹಿಡಿದಿದ್ದಾರೆ.

ಹಿರಿಯರಿರುವರೆಂದು ನಾಚಿ
ನುಡಿಯಲಾರದಿವಳು ಕೊರಗು
ತೆರೆದ ತುಟಿಯ ನಡುಕ
ಇನಿಸು ಬೆವತು ಕೆಂಪಾಗಾದ ಕೆನ್ನೆ
ನೀರ ತೆರೆಯ ಹಿಂದೆ ಕಣ್ಣು
ಬೀರುತಿರು ಬಯಕೆ ನೋಟ
ಊರಿಗಿದನು ನೋಡಿ ನೋಡಿ
ಹೊರಡಲಾರೆ ನಿಲ್ಲಲಾರೆ

ಮನಸ್ಸು ಒಪ್ಪಿದು ಸಾಕು. ವ್ಯಕ್ತಿಯ ರೂಪಲಾವಣ್ಯಗಳತ್ತ ಗಮನ ·ಹೋಗುವುದಿಲ್ಲ

ಹೃದಯದಲ್ಲಿ ತುಂಬ ಪ್ರೇಮ ಉದಯಿಸಿದಾಗ ವ್ಯಕ್ತಿಯ ಚೆಲವು ಚತುರತೆ ಒಂದೂ ಗಮನಕ್ಕೆ ಬರುವುದಿಲ್ಲ. ವ್ಯಕ್ತಿ ತನ್ನದಾದರೆ ಸಾಕು ಎಂದೆನಿಸುತ್ತದೆ. ಈ ಭಾವವನ್ನು ಕೆಳಕಂಡ ಅವರ ಪದ್ಯದಲ್ಲಿ ಕಾಣಬಹುದು.

"ಚೆಲುವೆಯೆಂದು ನುಡಿಯಲಾರೆ
ಚದುರಳೇನೂ ತಿಳಿಯದು
ಒಲಿದು ಹೋದ ಎನ್ನ ಹೃದಯ
ಇವಳೆ ಸಾಕು ಎಂದಿತು

**ಭಾಷಾಶಾಸ್ತ್ರಜ್ಞ:**

ತೀ.ನಂ.ಶ್ರೀಯವರು ಕಾವ್ಯ ರಚನೆಯನ್ನು ಮುಂದುವರಿಸಿದ್ದರೆ ಇಂದು ಕನ್ನಡ ಕಾವ್ಯಸರಸ್ವತಿ ಹಲವು ರತ್ನಾಭರಣಗಳಿಂದ ಅಲಂಕೃತಳಾಗಿ ಶೋಭಿಸುತ್ತಿದ್ದಳು. ಕಾವ್ಯವನ್ನು ಕೈಬಿಟ್ಟು ಅವರು ಹೆಚ್ಚು ಜನಪ್ರಿಯವಲ್ಲದ, ಆದರೆ ಕನ್ನಡ ಭಾಷಾ ಸಾಹಿತ್ಯದ ಅಭಿವೃದ್ಧಿಗೆ ಮಹತ್ತರ ಪ್ರಯೋಜನಕಾರಿಯಾದ ಸಂಶೋಧನೆ, ಗ್ರಂಥ ಸಂಪಾದನೆ, ಕಾವ್ಯ ವಿಮರ್ಶೆ, ಕಾವ್ಯ ಮೀಮಾಂಸೆ ಮುಂತಾಗಿ ಬಹುಮುಖವಾದ ವಿದ್ವತ್ ಕಾರ್ಯಗಳಿಗೆ ತಮ್ಮ ಬಿಡುವಿಲ್ಲದ ದುಡಿಮೆಯನ್ನು ಮೀಸಲಿರಿಸಿದರು.

ಭಾರತೀಯ ಕಾವ್ಯಮೀಮಾಂಸೆ, ಕಾವ್ಯ ಸಮೀಕ್ಷೆ, ಸಮಾಲೋಕನ ಗ್ರಂಥಗಳು ಅವರ ಆಳವಾದ ಪಾಂಡಿತ್ಯಕ್ಕೂ ಪ್ರಭಾವ ಪೂರ್ಣ ನಿರೂಪಣೆಗೂ, ನಿದರ್ಶನಗಳಾಗಿವೆ. ಮಹಾಕವಿ ಪಂಪನ ಮೇಲೆ ಬರೆದಿರುವ ಕಿರುಹೊತ್ತಿಗೆ ಚಿಕ್ಕದಾದರೂ ಚೊಕ್ಕದಾಗಿ ಅಭ್ಯಾಸಿಗಳಿಗೆ ದಾರಿದೀವಿಗೆಯಾಗಿದೆ. ಇವರು ಪರಿಷ್ಕರಿಸಿ ಮುದ್ರಿಸಿರುವ 'ನಂಬಿಯಣ್ಣನ ರಗಳೆ' ಮತ್ತು 'ಗದಾಯುದ್ಧ ಸಂಗ್ರಹ' ಇವು ಗ್ರಂಥ ಸಂಪಾದನಾ ಕಾರ್ಯಕ್ಕೆ ಮಾದರಿಯಾಗಿವೆ ಶ್ರೀಯುತರ 'ರಾಕ್ಷಸನ ಮುದ್ರಿಕೆ' (ನಾಟಕ), ಹೆಣ್ಣು ಮಕ್ಕಳ ಪದಗಳು ತುಂಬಾ ಜನಪ್ರಿಯವಾಗಿವೆ. 'ಬರೆಹ ಓದುವುದಕ್ಕೆ ಶತ್ರು' ಎನ್ನುವ ಶ್ರೀಯುತರ ಲೇಖನ ವ್ಯವಸಾಯ ಎಣಿಕೆಯಲ್ಲಿ ಹೆಚ್ಚಿಲ್ಲ, ಆದರೆ ಯೋಗ್ಯತೆಯಲ್ಲಿ ಮಹತ್ವದ್ದಾಗಿದೆ.

ಭಾಷಾ ವಿಜ್ಞಾನದ ಹೆಚ್ಚಿನ ಅಧ್ಯಯನಕ್ಕೆಂದು 1955-56ರಲ್ಲಿ ತೀ.ನಂ.ಶ್ರೀ. ಯವರಿಗೆ ನ್ಯೂಯಾರ್ಕಿನ ರಾಕ್‌ಫೆಲರ್ ಪ್ರತಿಷ್ಠಾನದವರಿಂದ ಒಂದು ವಿಶೇಷ ವೇತನ ದೊರೆಯಿತು. ಅದರ ಫಲವಾಗಿ ಅವರು ಅಮೇರಿಕ ಮತ್ತು ಯುರೋಪಿನ ನಾಲ್ಕೈದು ದೇಶಗಳಲ್ಲಿ ಸಂಚರಿಸಿ ಬಂದರು. ಆಗಿನ ಅವರ ಅನುಭವಗಳನ್ನು ಕುರಿತು 'ಪಶ್ಚಿಮಯಾನ'ವೆಂಬ ಒಂದು ವಿಸ್ತಾರವಾದ ಗ್ರಂಥ ಬರೆಯಲು ಆಸೆಪಟ್ಟರೂ ಅದು ಹೊರಬಾರದೆ. ಪ್ರವಾಸಕ್ಕೆ ಸಂಬಂಧ ಪಟ್ಟ ಸ್ವಾರಸ್ಯವಾದ ಎರಡು ಲೇಖನಗಳು ರಚಿತವಾಗಿ 'ನೆಂಟರು' ಎಂಬ ಅವರ ಪ್ರಬಂಧ ಸಂಕಲನದಲ್ಲಿ ಪ್ರಕಟವಾಗಿದೆ.

**ಪ್ರಾಮಾಣಿಕ ಶ್ರದ್ಧೆ :**

ಕೈಗೊಂಡ ಕೆಲಸವನ್ನು ಶ್ರದ್ಧಾಭಕ್ತಿಯುತವಾಗಿ ಅಚ್ಚುಕಟ್ಟಾಗಿ ಮಾಡುವ ಮನೋಭಾವ, ತಿಳಿಯದಿದ್ದನ್ನು ಒಪ್ಪಿಕೊಳ್ಳುವ ಪ್ರಾಮಾಣಿಕತೆ, ಭಿನ್ನಾಭಿಪ್ರಾಯ ಬಂದರೆ ಎದುರಾಳಿಯ ಪ್ರಾಮಾಣಿಕತೆ ಶಂಕಿಸದೆ ಅವರ ಅಭಿಪ್ರಾಯಗಳನ್ನು ಮಾನ್ಯ ಮಾಡುವ ಹೃದಯಔದಾರ್ಯ ಇವು ತೀ.ನಂ.ಶ್ರೀಯವರ ಸುಸಂಸ್ಕೃತ ಚೇತನದ ಹೆಗ್ಗುರುತುಗಳಾಗಿವೆ. ಕಾವ್ಯ ನಿರ್ಮಾಣ ಮಾಡಿ ತಾಯಗುಡಿಗೆ ಅಂದ ಚೆಂದದ ಕುಸುರಿ ಕೆಲಸವನ್ನು ಮಾಡುವ ಗುಂಪಿಗೆ ಶ್ರೀಯುತರು ಸೇರಲು ಆಸೆಪಡಲಿಲ್ಲ. ಆದರೆ ಆ ಗುಡಿಯ ತಳಪಾಯವನ್ನು ಭದ್ರಪಡಿಸಿ, ಅದು ಚಿರಂತನವಾಗಿರಲು ಪ್ರಯತ್ನಿಸಿದ ರಾ. ನರಸಿಂಹಾಚಾರ್ಯ, ಬಿ.ಎಂ.ಶ್ರೀ., ಎ.ಆರ್.ಕೃ. ಮೊದಲಾದ ಮಹನೀಯರ ಪಂಕ್ತಿಗೆ ತೀ.ನಂ.ಶ್ರೀಯವರೂ ಸೇರುತ್ತಾರೆ.

"ತೀ.ನಂ.ಶ್ರೀ.ಯವರ ಬರೆವಣಿಗೆ ಹೇಗೆ ಗಂಭೀರವೋ ಅವರ ಮಾತುಗಾರಿಕೆ ಅಷ್ಟೇ ಗಂಭೀರ. ಶ್ರಾವಕರ ರಸವಂತಿಕೆಗಳನ್ನು ಉದ್ರೇಕಿಸಿ ಅವರನ್ನು ಭಾವನಾ ಪರವಶರನ್ನಾಗಿ ಮಾಡುವ ವಕ್ತೃತ್ವ ಶ್ರೀಯುತರದಲ್ಲ. ಹಾಸ್ಯವಾಗಲಿ, ಧ್ವನಿ ವೈವಿಧ್ಯವಾಗಲಿ ಶ್ರಾವಕರ ಯೋಗ್ಯತಾನುಸಾರವಾಗಿ ವಿಷಯವನ್ನು ನಿರೂಪಿಸಬಲ್ಲ ಹದವನ್ನಾಗಲಿ ಅವರು ಸಾಧಿಸಿಲ್ಲ. ಆದರೆ ತಾವು ತೆಗೆದುಕೊಂಡ ವಿಷಯಕ್ಕೆ ಅಪಚಾರವಾಗದಂತೆ ಗಂಭೀರವಾಗಿ, ಆಧಾರಸಹಿತವಾಗಿ, ತಿಳಿಯಾಗಿ ನಿರೂಪಿಸಬಲ್ಲ ಋಜುಪಾಂಡಿತ್ಯ ಶ್ರೀಕಂಠಯ್ಯನವರ ಮಾತುಗಾರಿಕೆಯಲ್ಲಿ ಕಾಣಬಹುದು. ವ್ಯಕ್ತಿಯಲ್ಲಿ ಆಡಂಬರವಿಲ್ಲ, ಪಾಂಡಿತ್ಯ ಪ್ರದರ್ಶನವಿಲ್ಲ. ತುಂಬಿದ ಕೊಡ ತುಳುಕುವುದಿಲ್ಲ" ಎಂಬ ಶ್ರೀ ಅ.ನ.ಕೃ. ಅವರ ಬಣ್ಣನೆ ತೀ.ನಂ.ಶ್ರೀ. ಅವರ ಬಗೆಗೆ ಒಂದು ಸುಂದರ ಚಿತ್ರಣವಾಗಿದೆ.

"ತೀ.ನಂ.ಶ್ರೀಯವರು ಬಹು ವರ್ಷ ಕಾಲ 'ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ' ಹಾಗೂ 'ಪ್ರಬುದ್ಧ ಕರ್ನಾಟಕ' ಪತ್ರಿಕೆಗಳ ಸಂಪಾದಕ ಮಂಡಲಿಯ ಸದಸ್ಯರಾಗಿ ದುಡಿದಿದ್ದಾರೆ. 'ಪ್ರಬುದ್ಧ ಕರ್ನಾಟಕ'ವು ದಿವಂಗತ ಟಿ.ಎಸ್. ವೆಂಕಣ್ಣಯ್ಯನವರ ನೇತೃತ್ವದಲ್ಲಿ ಪ್ರಕಟಗೊಳ್ಳುತ್ತಿದ್ದಾಗಲಂತೂ ತೀ.ನಂ.ಶ್ರೀ ಅವರು ಎಲೆಮರೆಯ ಕಾಯಾಗಿ ಇದ್ದುಕೊಂಡು ಆ ಪತ್ರಿಕೆಗಾಗಿ ಹಗಲಿರುಳೂ ದುಡಿದರು. ಈಗ ಕನ್ನಡ ಸಾಹಿತ್ಯ ಪರಿಷತ್ತು ನಿಯೋಜಿಸಿರುವ ಕನ್ನಡ ಕನ್ನಡ ನಿಘಂಟಿನ ಪ್ರಧಾನ ಸಂಪಾದಕತ್ವವನ್ನು ಅವರು ನಿರ್ವಹಿಸಿದ್ದರು.

ಪು.ತಿ.ನ., ರಾಘವ (ಎಂ.ವಿ.ಸೀ), ಕೆ.ಎಸ್. ನರಸಿಂಹಸ್ವಾಮಿ ಮುಂತಾದ ಹೀಗೆ ಹಲವಾರು ಕನ್ನಡದ ಪ್ರಮುಖರು ತೀ.ನಂ.ಶ್ರೀಯವರ ಉತ್ತೇಜನದಿಂದ ಸ್ಫೂರ್ತಿದಾಯಕವಾದ ಮಾರ್ಗದರ್ಶನದಿಂದ ಕಾವ್ಯ ಮಾರ್ಗದಲ್ಲಿ ನಡೆದಿದ್ದಾರೆ. ಈಚೆಗೆ ತೀ.ನಂ.ಶ್ರೀಯವರ ಭಾಷಾವಿಜ್ಞಾನದ ಬೋಧನೆಯಿಂದ ಸ್ಫೂರ್ತಿಗೊಂಡು ಶ್ರೀ ಹಂ.ಪ.

ನಾಗರಾಜಯ್ಯ ನವರು 'ದ್ರಾವಿಡ ಭಾಷಾ ವಿಜ್ಞಾನ' ಎಂಬ ಗ್ರಂಥ ರಚಿಸಿ ಗುರುಗಳಿಗೆ ಕಾಣಿಕೆಯನ್ನು ಅರ್ಪಿಸಿದ್ದಾರೆ. ಇತರರಿಗೆ ಸ್ಫೂರ್ತಿ ನೀಡುವುದೂ ಒಂದು ದೊಡ್ಡ ಕೆಲಸ. ಅದಕ್ಕೆ ಹಿರಿಯ ವ್ಯಕ್ತಿತ್ವ ಇರಬೇಕು.

ಆಚಾರ್ಯ ತೀ.ನಂ.ಶ್ರೀ.ಯವರು ಕರ್ನಾಟಕದ ಪರವಾಗಿ ಅನೇಕ ಸಮ್ಮೇಳನಗಳಲ್ಲಿ ಭಾಗವಹಿಸಿ ಕನ್ನಡ ವಿದ್ವತ್ತಿನ ಗೌರವವನ್ನು ಹೆಚ್ಚಿಸಿದ್ದರು. ಸ್ವಾರ್ಥವನ್ನು ಮರೆತು ಕೀರ್ತಿಯನ್ನು ಬಯಸದ ತೀ.ನಂ.ಶ್ರೀಯವರ ಕನ್ನಡದ ಶ್ರೀ' ಪರಂಪರೆ ಕೀರ್ತಿಭಾಜನವಾಗಿ ಮುಂದುವರಿಯಲು ಶ್ರಮಿಸುತ್ತಿರುವ ಪಂಡಿತಶ್ರೇಷ್ಠರಲ್ಲಿ ಒಬ್ಬರಾಗಿದ್ದರು.

(ಕೃಪೆ : ಪ್ರಜಾವಾಣಿ)

* * *

# 7. ಜೈನ ಲೇಖಕ ಹಾಗೂ ಸಂಶೋಧಕ–ಡಾ॥ ಆ.ನೇ. ಉಪಾಧ್ಯೆ

ವಿ. ರಾಣಿ ಗೋವಿಂದರಾಜು

ಆಧುನಿಕ ಜೈನ ಪುಣ್ಯ ಪುರುಷರೆನಿಸಿರುವ ಡಾ॥ ಆ.ನೇ. ಉಪಾಧ್ಯೇಯವರು ಪ್ರಾಚೀನ ಜೈನಸಾಹಿತ್ಯ, ಶಾಸ್ತ್ರಗಳ ಆಧುನಿಕ ಅಧ್ಯಯನಕ್ಕೆ ಆಧಾರಸ್ತಂಭವಾಗಿರುವ ಯುಗಪ್ರವರ್ತಕರು. ಇವರದು ಜ್ಞಾನದೀಪ್ತವ್ಯಕ್ತಿತ್ವ ಹಾಗೂ ಉತ್ತಮ ಮಾನವತಾವಾದಿಯಾಗಿದ್ದರು. ಇವರು ಜ್ಞಾನಯೋಗಿ, ವಾಙ್ಮಯ ವಟವೃಕ್ಷ, ಪ್ರಾಕೃತ ಭಾಷೆಯ ಭೀಷ್ಮಾಚಾರ್ಯ, ನಡೆದಾಡುವ, ಮಾತನಾಡುವ ಜ್ಞಾನಪೀಠ, ಶಲಾಕಾ ಪುರುಷ, ಆಧುನಿಕತಪಸ್ವಿ, ಈ ಶತಮಾನದ ಕುಂದಕುಂದರು – ಎಂದು ಅಭಿಮಾನಿಗಳಿಂದ ಹೊಗಳಿಸಿಕೊಂಡಿದ್ದಾರೆ. ಇವರ ಸನ್ನಡತೆ, ಹೊಂದಾಣಿಕೆಯ ಸ್ವಭಾವ ಮತ್ತು ಆತ್ಮೀಯತೆಯಿಂದ ತುಂಬಿದ ನುಡಿಯ ವೈಖರಿ ಸರ್ವರಿಗೂ ಪ್ರಿಯವೆನಿಸಿತ್ತು. ಜೈನ ಆಗಮಗ್ರಂಥ 'ಧವಲಾ' ಬೆಳಕು ಕಂಡದ್ದು ಉಪಾಧ್ಯೆಯವರಿಂದ. ಹದಿನಾರು ಸಂಪುಟಗಳನ್ನೊಳಗೊಂಡ ಈ ಕೃತಿ ಅಚ್ಚಾದದ್ದು ಭಗೀರಥ ಪ್ರಯತ್ನ ಸದೃಶವಾದುದು. ಇದು ಹೈಮಾಚಲೋನ್ನತ ಸಂಪಾದನೆಯ ಕಾರ್ಯ. ರಾಮಾಯಣ–ಮಹಾಭಾರತಗಳ ಗ್ರಂಥ ಸಂಪಾದನೆಯಷ್ಟು ಕಠಿಣವಾದುದಾಗಿದೆ. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಅಲಂಕರಿಸಿದ ಏಕೈಕ ಜೈನಲೇಖಕ ಡಾ॥ಉಪಾಧ್ಯೆಯವರು. ಕನ್ನಡ ನಾಡಿನಲ್ಲಿ ಅತಿಗಣ್ಯರೆನಿಸಿರುವ ಸಂಶೋಧಕರ ಶ್ರೇಣಿಯಲ್ಲಿ ಆ.ನೇ. ಉಪಾಧ್ಯೆಯವರು ಅಗ್ರಗಣ್ಯರು. ವಿದ್ವತ್ತಿನ ಬೋಧಿವೃಕ್ಷದ ಅಡಿಯಲ್ಲಿ ಕುಳಿತು, ಕನಸು–ಮನಸ್ಸುಗಳಲ್ಲಿ ಸಂಶೋಧನೆಯೊಂದನ್ನೇ ಧ್ಯಾನಿಸಿ, ಅದರ ಸಾಕ್ಷಾತ್ಕಾರ ಪಡೆದುಕೊಂಡವರು. ಹಲವು ಸಾಧನೆಗಳಿಂದ ತುಂಬಿರುವ ಇವರ ಜೀವನ ಅನುಕರಣಯೋಗ್ಯವೂ, ಮನನೀಯವೂ ಆಗಿದೆ.

ಆ.ನೇ. ಉಪಾಧ್ಯೆಯವರು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ 'ಸದಲಗಾ' ಎಂಬ ಹಳ್ಳಿಯ ಜೈನ ಕುಟುಂಬದಲ್ಲಿ ಫೆಬ್ರವರಿ 6 ರಂದು 1906ರಲ್ಲಿ ಜನಿಸಿದರು. ಇವರ ತಂದೆ ನೇಮಿನಾಥ ಉಪಾಧ್ಯೆ, ತಾಯಿ ಚಂದ್ರಾಬಾಯಿ. ಉಪಾಧ್ಯೆಯವರ ಮನೆತನದಲ್ಲಿ ಹಿರಿಯರು ಮಾಡುತ್ತ ಬಂದಂತಹ ಪೌರೋಹಿತ್ಯವನ್ನು ಮಾಡುತ್ತ ಬಂದಿದ್ದರಿಂದ ಕುಟುಂಬದ ಹಿರಿಯ 'ಯಜಮಾನನಿಗೆ' ಅಥವಾ 'ಒಡೆಯ'ನಿಗೆ 'ಉಪಾಧ್ಯೆ' ಎಂಬ [ಸಿಗಿಟಿಬಿಟಿಜ] ಅಡ್ಡಹೆಸರು ಇರುತ್ತಿತ್ತು. ನೇಮಿನಾಥ ಉಪಾಧ್ಯೆಯವರು ಅರ್ಚಕ

ಮನೆತನದವರಾಗಿದ್ದರೂ ಸಹ ಹೊಟ್ಟೆಪಾಡಿಗಾಗಿ ವ್ಯವಸಾಯವನ್ನು ಮಾಡುತ್ತಿದ್ದರು. ನೇಮಿನಾಥ ಉಪಾಧ್ಯೆ-ಚಂದ್ರಾಬಾಯಿ ದಂಪತಿಗಳಿಗೆ ಹುಟ್ಟಿದ ನಾಲ್ಕುಜನ ಗಂಡುಮಕ್ಕಳು ಚಿಕ್ಕ ವಯಸ್ಸಿನಲ್ಲಿಯೇ ಅಸು ನೀಗಿದ್ದರು. ಆದ್ದರಿಂದ ಐದನೆಯ ಮಗುವಾದರೂ ಗಟ್ಟಿಯಾಗಿ ಗುಂಡುಕಲ್ಲಿನಂತೆ ಬಾಳಿ ಬೆಳಗಲಿ ಎಂದು 'ಕಲ್ಲಪ್ಪ' ಎಂಬ ಹೆಸರಿಟ್ಟರು. ಕಲ್ಲಪ್ಪನನ್ನು ಶಾಲೆಗೆ ಕಳುಹಿಸಿದರು. ಶಾಲೆಯ ಹಾಜರಿ ಪುಸ್ತಕದಲ್ಲಿ ಈ ಹುಡುಗನ ಹೆಸರನ್ನು 'ಆದಿನಾಥ' ಎಂದು ಬರೆದರು. ಅಂದಿನಿಂದ ಕಲ್ಲಪ್ಪ ಆದಿನಾಥನಾದನು.

ಆದಿನಾಥನು ತಂದೆ ನೇಮಿನಾಥರನ್ನು ಬಹುಬೇಗ ಕಳೆದುಕೊಳ್ಳುವ ಪ್ರಸಂಗ ಒದಗಿಬಂತು. ಆಗ ಆದಿನಾಥನಿಗೆ ತಂದೆಯ ಜಾಗದಲ್ಲಿ ಲಾಲನೆ-ಪಾಲನೆ, ಪೋಷಣೆಯ ಭಾರವನ್ನು ಹೊತ್ತವರು ತಾಯಿ ಚಂದ್ರಾಬಾಯಿ ಮತ್ತು ಆದಿನಾಥನ ಅಜ್ಜ. ಆದಿನಾಥನ ಆರಂಭದ ಶಿಕ್ಷಣವೆಲ್ಲ 'ಸದಲಗಾ' ಮತ್ತು 'ಶಮನೇವಾಡಿ'ಯ ಕನ್ನಡ ಪ್ರಾಥಮಿಕ ಶಾಲೆಯಲ್ಲಿ ನಡೆಯಿತು. ಪ್ರಾಥಮಿಕ ವಿದ್ಯಾಭ್ಯಾಸ ಮುಗಿದ ನಂತರ ಬೆಳಗಾವಿಯ ಜೈನ-ಬೋರ್ಡಿಂಗ್ ಹೌಸಿನಲ್ಲಿದ್ದುಕೊಂಡು ಕೋಟೆ ಜಿ.ಎ. ಹೈಸ್ಕೂಲಿನಲ್ಲಿ ಆದಿನಾಥ ವಿದ್ಯಾರ್ಥಿಯಾದರು. ವಿದ್ಯಾರ್ಥಿ ದೆಸೆಯಲ್ಲಿ ಉಚಿತ ಶಿಕ್ಷಣ ಸೌಲಭ್ಯದೊಂದಿಗೆ ವಿದ್ಯಾರ್ಥಿ ವೇತನವೂ ಲಭಿಸಿತು. ಧಾರ್ಮಿಕ ಶಿಕ್ಷಣವೂ ಬೋರ್ಡಿಂಗಿನಲ್ಲಿ ಸಿಗುತ್ತಿತ್ತು. ಮೈಸೂರು ಸೀಮೆಯಲ್ಲಿ ಪ್ರಖ್ಯಾತ ಆಸ್ಥಾನ ವಿದ್ವಾನ್ ಪಂಡಿತರಾದ ಎರ್ತೂರು ಶಾಂತಿರಾಜಶಾಸ್ತ್ರಿಗಳು ವರ್ಷಕ್ಕೊಮ್ಮೆ ಬೋರ್ಡಿಂಗಿನ ವಿದ್ಯಾರ್ಥಿಗಳಿಗೆ ಧಾರ್ಮಿಕ ಪ್ರವಚನ ಕೊಡುತ್ತಿದ್ದರು. ಅವರ ವಿಶೇಷ ಲಕ್ಷ್ಯವೆಲ್ಲ ಆದಿನಾಥನ ಸದಲಗಾಕ್ಕೆ ಬಂದಾಗ ಗ್ರಂಥಭಂಡಾರವನ್ನು ಉಪಯೋಗಿಸಿಕೊಳ್ಳಲು ಸಹಾಯ ಮಾಡಿದರು. ಆ.ನೇ. ಉಪಾಧ್ಯೆಯವರ ದೊಡ್ಡಪ್ಪನವರ ಕಷ್ಟಕ್ಕೆ ಹಣ ದೋಹಾಪಾಹುಡ-ಯೋಗೀಂದು ಕವಿಯ ಅಪಭ್ರಂಶಕಾವ್ಯ, ತೆಲುಗು ಭಾಷೆಯಲ್ಲಿದ್ದ ವೃಷಭೇಂದ್ರವಿಜಯ, ಶಂಕರವಿಲಾಸ, ಗ್ಯಾರೆಟ್ ಸಂಪಾದಿತ ಶಬ್ದಮಣಿದರ್ಪಣ, ಪ್ರಾಕ್ಕಾವ್ಯ ಮಾಲಿಕೆ ಪುಸ್ತಕಗಳು-ಇವುಗಳ ಸತತ ಅಭ್ಯಾಸದಿಂದ ಆಸಕ್ತಿ ಬೆಳೆಯಿತು.

ಉಪಾಧ್ಯೆಯವರು ಚಿಕ್ಕಂದಿನಲ್ಲಿಯೇ ಜ್ಯೋತಿಷ್ಯಗ್ರಂಥ, ಹಳೆಗನ್ನಡ ಗ್ರಂಥ, ತೆಲುಗು-ಕನ್ನಡ-ನಾಗರಲಿಪಿಯಲ್ಲಿನ ಗ್ರಂಥ - ಎಲ್ಲವನ್ನು ಓದುವ ಅಭ್ಯಾಸ ಮನೆಯ ಸ್ವಾಧ್ಯಾಯದಿಂದ ಸಂಶೋಧನ ಪ್ರವೃತ್ತಿಯಿಂದ ಬೆಳೆಸಿಕೊಂಡರು. ಈ ರೀತಿಯಾಗಿ ಆದಿನಾಥ ನೇಮಿನಾಥ ಉಪಾಧ್ಯೆಯವರು 1923 ರಲ್ಲಿ ಮುಂಬಯಿ ವಿಶ್ವವಿದ್ಯಾನಿಲಯದ ವ್ಯಾಪ್ತಿಯಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಉತ್ತಮ ರೀತಿಯಲ್ಲಿ ತೇರ್ಗಡೆಯಾದರು. ಮುಂದಿನ ವ್ಯಾಸಂಗಕ್ಕೆ ಬೆಳಗಾವಿಯಲ್ಲಿ ಅನುಕೂಲವಿರಲಿಲ್ಲ. ಬಡವಿದ್ಯಾರ್ಥಿಗಳಿಗೆ ಊಟ-ವಸತಿಯು ಅನುಕೂಲವಿದ್ದಂತಹ ಮಹಾರಾಷ್ಟ್ರದ ಸಾಂಗಲಿಯ ಜೈನವಸತಿಗೃಹದಲ್ಲಿದ್ದು ವಿಲಿಂಗ್ಡನ್ ಕಾಲೇಜಿನಲ್ಲಿ ವಿದ್ಯಾರ್ಥಿಯಾದರು. ಇವರಿಗೆ ಆ

ಪ್ರಾಂತ್ಯದ ಜನೋಪಕಾರಿ ನಾಯಕರಾದ ಎ.ಜಿ. ಲಠ್ಠೆಯವರ ನೆರವು ಲಭಿಸಿ, ಡಾ॥ ಪಿ.ಎಲ್. ವೈದ್ಯರಿಂದ ಪ್ರಭಾವಿತರಾದರು. ತಮ್ಮ ಕಾಲೇಜಿನ ಅವಧಿಯಲ್ಲಿ ಸಂಸ್ಕೃತ ಮತ್ತು ಅರ್ಧಮಾಗಧಿ, ಪ್ರಾಕೃತ ಭಾಷೆ ಮತ್ತು ಸಾಹಿತ್ಯವನ್ನು ಪ್ರಧಾನವಾಗಿ ಆರಿಸಿಕೊಂಡು 1928ರಲ್ಲಿ ಬಿ.ಎ. ಪದವೀಧರರಾದರು. ಈ ಐದು ವರ್ಷದ ಅವಧಿಯಲ್ಲಿ ತಾವು ಸಂಪಾದಿಸಿದ ವಿದ್ವತ್ತಿನಿಂದ ತಮ್ಮ ಹೆಸರನ್ನು Surname ನ್ನು ಸಾರ್ಥಕಪಡಿಸಿಕೊಂಡು ಬಹುವಚನದಿಂದ ಕರೆಯಲ್ಪಡುವ ಆದಿನಾಥ ಆ.ನೇ. ಉಪಾಧ್ಯೆ ಆದರು. ಇವರ ರೂವಾರಿ ಘನವಿದ್ವಾಂಸರು ಡಾ॥ ಪಿ.ಎಲ್. ವೈದ್ಯರು.

1929ರಲ್ಲಿ 'ಸಮಂತಭದ್ರ' An outstanding personality ಎಂಬ ಉಪಾಧ್ಯೆಯವರ ಪ್ರಥಮ ಲೇಖನ ಪಡಿಮೂಡಿದೆ. ಉಪಾಧ್ಯೆಯವರ ಜ್ಞಾನದಾಹ ವಿಶೇಷವಾಗಿದ್ದುದರಿಂದ ಮಹಾರಾಷ್ಟ್ರದ ಸಾಂಗಲಿಯಿಂದ ಪುಣೆಗೆ ಬಂದು ಡಾ॥ ಪಿ.ಎಲ್. ವೈದ್ಯರ ಸಲಹೆ ಮತ್ತು ಸಹಾಯದಿಂದ ಪುಣೆಯ ಭಂಡಾರ್ಕರ ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಗೆ ಸೇರಿ ಮುಂಬಯಿ ವಿಶ್ವವಿದ್ಯಾನಿಲಯದಿಂದ 1930ರಲ್ಲಿ ಎಂ.ಎ. ಪದವಿಯನ್ನು ಪ್ರಥಮ ಶ್ರೇಣಿಯಲ್ಲಿ ಪಡೆದರು. ಡಾ॥ ಪಿ.ಎಲ್. ವೈದ್ಯರೊಂದಿಗೆ ಸುವಿಖ್ಯಾತ ಪ್ರಾಧ್ಯಾಪಕರಾಗಿದ್ದ ಡಾ॥ ವಿ.ಎಸ್. ಸುಕ್ತಂಕರರೂ ಮತ್ತು ಡಾ॥ ಎಸ್.ಕೆ. ಬೆಳ್ವಲ್ಕರರ ಪ್ರಭಾವದಿಂದ ಉಪಾಧ್ಯೆಯವರು ಪುನೀತರಾದರು. ಉಪಾಧ್ಯೆಯವರ ಸರಳತೆ, ಸಜ್ಜನಿಕೆ, ವೈಜ್ಞಾನಿಕ ದೃಷ್ಟಿ, ಋಜುಬಾಳ್ವೆ, ಅಧ್ಯಯನಶೀಲತೆ ಇವು ಎಲ್ಲ ಕಾಲಕ್ಕೂ, ಎಲ್ಲ ಜನಾಂಗಕ್ಕೂ, ಎಲ್ಲರಿಗೂ ಆದರ್ಶಪ್ರಾಯವಾದುದು. ಪಾಂಡಿತ್ಯ ಸಂವರ್ಧನೆಗೆ ಮೂಲಾಧಾರವಾದ ಶಿಸ್ತು, ಶ್ರದ್ಧೆ, ಸಂಯಮ, ಚುರುಕುತನ, ಪ್ರಾಮಾಣಿಕತೆಯಿಂದಾಗಿ ಸಂಶೋಧನ ಪಥದಲ್ಲಿ ನಡೆದರು. ಉಪಾಧ್ಯೆಯವರು ತಮ್ಮ ಪರಿಶ್ರಮದ ಫಲದಿಂದ ವಿದ್ವತ್ತಿನ ದಾಖಲೆಗಳನ್ನು ನೆಡುತ್ತ, ಗುರುಗಳಿಗೆ ಗುರುವಾದರು. ಶಿಷ್ಯರಿಗೆ, ಜ್ಞಾನಪಿಪಾಸುಗಳಿಗೆ ತಮ್ಮ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋಗಿದ್ದಾರೆ.

ಡಾ॥ ಪಿ.ಎಲ್. ವೈದ್ಯ, ಡಾ॥ಎಸ್.ಕೆ. ಬೆಳ್ವಲ್ಕರ್ ಮತ್ತು ಡಾ॥ ವಿ.ಎಸ್. ಸುಕ್ತಂಕರ್ – ಈ ಆಚಾರ್ಯತ್ರಯರು ಉಪಾಧ್ಯೆಯವರ ಮೇಲೆ ವಿಶೇಷವಾಗಿ ಪ್ರಭಾವ ಬೀರಿ ಮಾರ್ಗದರ್ಶಕರಾಗಿದ್ದಾರೆ. ಎಂ.ಎ. ಸ್ನಾತಕೋತ್ತರ ಪದವಿ ಪಡೆದ ಉಪಾಧ್ಯೆಯವರು 1930ರಲ್ಲಿಯೇ ಕೊಲ್ಹಾಪುರದ ರಾಜರಾಮ ಕಾಲೇಜಿನಲ್ಲಿ ಅರ್ಧಮಾಗಧಿ ಉಪನ್ಯಾಸಕರಾಗಿ ಆ ಕಾಲೇಜಿನ ಪ್ರಾಂಶುಪಾಲರಾಗಿದ್ದ ಡಾ॥ ಬಾಲಕೃಷ್ಣರ ಸಮ್ಮುಖದಲ್ಲಿ ನೇಮಕಗೊಂಡರು. ತಾವು ಕಲಿತ ಕಾಲೇಜಿನಲ್ಲಿಯೇ ಕಲಿಸುವ ಅಧ್ಯಾಪಕ ಅಥವಾ ಗುರು ಆದದ್ದು ಯೋಗಾಯೋಗ. ಅಧ್ಯಾಪಕರಾಗಿ ಕೆಲಸಕ್ಕೆ ಸೇರಿದ ಕೇವಲ ಮೂರೇ ಮೂರು ವರ್ಷಗಳಲ್ಲಿ ಉಪಾಧ್ಯೆಯವರು ಪ್ರಾಧ್ಯಾಪಕರಾದರು. ಇವರು ಆದರ್ಶ ಉಪಾಧ್ಯಾಯರಾಗಿದ್ದು, ಇವರ ಪಾಠದ ವೈಖರಿ ತುಂಬಿದ ಪಾತ್ರೆಯನ್ನು ಎಚ್ಚರಿಕೆಯಿಂದ

ತೆಗೆದುಕೊಂಡು ಹೋಗುವಂತಿತ್ತು. ಇವರು ಕಟ್ಟುನಿಟ್ಟಿನ ಶಿಸ್ತಿನ ಪ್ರಾಧ್ಯಾಪಕರಾಗಿದ್ದ ಇವರ ಪಾಠದ ವಾಗ್ಝರಿ ಎಂದೂ ನೀರಸವೆನಿಸುತ್ತಿರಲಿಲ್ಲ. ವಿದ್ಯಾರ್ಥಿಗಳು ಅವರಿಗೆ ಪ್ರೀತಿಯಿಂದ 'ಧಮ್ಮ' ಎಂದು ಅಡ್ಡಹೆಸರು ಇಟ್ಟಿದ್ದರು. ಆ ಅಡ್ಡ ಹೆಸರು ಅವರಿಗೆ ಅನ್ವರ್ಥಕವಾಗಿತ್ತು. 1932ರಲ್ಲಿ ಉಪಾಧ್ಯೆಯವರು ತಮ್ಮ ಸೋದರಮಾವನ ಮಗಳು ಸುಂದರಾಬಾಯಿಯೊಂದಿಗೆ ವಿವಾಹವಾದರು. 1933ರಲ್ಲಿ ಇವರಿಗೆ ಪ್ರಾಧ್ಯಾಪಕ ಹುದ್ದೆಗೆ ಬಡ್ತಿ ದೊರೆಯಿತು. ಉಪಾಧ್ಯೆಯವರು ತಮ್ಮ 28ನೇಯ ವಯಸ್ಸಿಗೆ ಅಜ್ಞಾತ ಕವಿಕೃತ ಪ್ರಾಕೃತ 'ಪಂಚಸುತ್ತ' ಜೈನಸಿದ್ಧಾಂತ ಕೃತಿಯನ್ನು ಶಾಸ್ತ್ರಬದ್ಧವಾಗಿ 1934ರಲ್ಲಿ ಸಂಪಾದಿಸಿದ್ದಾರೆ.

ಈ ಗ್ರಂಥದ ಮಹತ್ವವನ್ನು ಷೂಬ್ರಿಂಗ್, ಎಲ್.ಡಿ. ಬಾರ್ನೆಟ್, ವಿಂಡರ್‌ನಿಟ್ಸ್ - ಮುಂತಾದ ಉದ್ದಾಮ ಪಂಡಿತರು ಶ್ಲಾಘನೆ ಮಾಡಿದ್ದಾರೆ. 1935ರಲ್ಲಿ ಕುಂದಕುಂದಾಚಾರ್ಯರ ಮಹಾಕೃತಿಯಾದ 'ಪ್ರವಚನಸಾರ'ವನ್ನು ವೈಜ್ಞಾನಿಕವಾಗಿ ಸತತ ಎಂಟು ವರ್ಷಗಳ ಅಧ್ಯಯನದಿಂದ ಸಂಪಾದಿಸಿದ್ದಾರೆ. ಈ ಗ್ರಂಥದ ಪೀಠಿಕೆಯಲ್ಲಿ ಹಸ್ತಪ್ರತಿಗಳ ವಿವರ, ಕುಂದಾಕುಂದಾಚಾರ್ಯರ ಜೀವನ, ಕಾಲವಿಚಾರ, ಜೈನ ದರ್ಶನದ ಬೇರೆ-ಬೇರೆ ಮಗ್ಗಲುಗಳು ಮತ್ತು ಪ್ರವಚನಸಾರದಲ್ಲಿ ಅಂತರ್ಗತವಾಗಿರುವ ನೀತಿಶಾಸ್ತ್ರ - ಮೊದಲಾದವುಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ ಪ್ರವೀಣರೂ ಅಧ್ವರ್ಯುಗಳೂ ಆದ ಜರ್ಮನಿಯ ವಿದ್ವಾಂಸರು, ಪ್ರವಚನಸಾರ ಸಂಪಾದನೆಯ ಮಹತ್ವವನ್ನು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ಈ ಪುಸ್ತಕಕ್ಕೆ 1935ರಲ್ಲಿ ಉಪಾಧ್ಯೆಯವರಿಗೆ ಡಾಕ್ಟರೇಟ್ ಪದವಿ ಸಂದಿದೆ. ಹೀಗೆ ಪ್ರಬಲವಾದ ಮನಸ್ಸಿನಿಂದ ಸಾರಸ್ವತ ತಪಶ್ಚರ್ಯೆಯನ್ನು ಕೈಗೊಂಡು 'ಪ್ರವಚನಸಾರ', 'ಪರಮಾತ್ಮಪ್ರಕಾಶ', 'ವರಾಂಗಚರಿತೆ' ಮತ್ತು ಇತರ ಸಂಪ್ರಬಂಧಗಳನ್ನು ಒಟ್ಟುಗೂಡಿಸಿ ಮುಂಬಯಿ ವಿಶ್ವವಿದ್ಯಾನಿಲಯದಿಂದ 1939ರಲ್ಲಿ ಡಿ.ಲಿಟ್ ಪಡೆದರು. ಆಗ ಅವರಿಗೆ ಕೇವಲ 33 ವರ್ಷ ಮಾತ್ರ. 'ಶಿಷ್ಯಾದಿಚ್ಛೇತ್ ಪರಾಜಯಂ' ಎಂಬ ವಾಣಿಯೊಂದಿದೆ. ತಮ್ಮ ಶಿಷ್ಯನು ತಮ್ಮನ್ನು ಪರಾಜಯಗೊಳಿಸುವಂಥ ಯೋಗ್ಯತೆಗೆ ಪಾತ್ರನಾಗಲಿ ಎಂಬ ಸದ್ಭಾವನೆ ಈ ವಿವೇಕವಾಣಿಯ ತಿರುಳು. ಪ್ರವಚನಸಾರ ಗ್ರಂಥದಲ್ಲಿ ಸುಮಾರು 200 ಪುಟಗಳ ಪೀಠಿಕೆ ಹಾಗೂ ಟಿಪ್ಪಣಿಯಲ್ಲಿ ಅನೇಕ ವಿಷಯಗಳನ್ನು ಕ್ರಮಬದ್ಧವಾಗಿ ನಿರೂಪಿಸಿದ್ದಾರೆ. ಇಲ್ಲಿನ ವಿಸ್ತೃತ ಮತ್ತು ಗಹನವಾದ ಅಂತರ್‌ದೃಷ್ಟಿಗೆ ವಿದ್ವಾಂಸರಲ್ಲಿ ಒಬ್ಬರು 'ಜ್ಞಾನದ ಮುನ್ನಡೆಗೆ ಪಟ್ಟ ಕಠಿಣ ಶ್ರಮಕ್ಕೆ ಅಭಿನಂದಿಸುತ್ತೇನೆ' ಎಂದಿದ್ದಾರೆ. ಮತ್ತೊಬ್ಬರು 'ಭಾರತೀಯ ತತ್ವಶಾಸ್ತ್ರದ ವಿಕಾಸದಲ್ಲಿ ಶಾಶ್ವತ ಮೌಲ್ಯ ಹೊಂದಿದೆ' ಎಂದರು. 'ಪ್ರಾಕೃತ ಭಾಷೆಗೆ ಜೈನ ತತ್ವಶಾಸ್ತ್ರಕ್ಕೆ ನೀಡಿದ ವಿದ್ವತ್‌ಪೂರ್ಣ ಕೊಡುಗೆ. ಅಪೂರ್ವ ವಿದ್ವತ್ತು ಹಾಗೂ ವಿಷಯದ ಬಗ್ಗೆ ಹಿಡಿತವನ್ನು ವ್ಯಕ್ತಗೊಳಿಸುವುದು. ಇಂಥ ಸುಸಂಪಾದಿತ ಗ್ರಂಥ ಬೇರೆಡೆ ನೋಡಲು ದೊರೆಯದು' - ಹೀಗೆ ಅನೇಕ ಪ್ರಶಂಸೆಗಳು ಬಂದಿವೆ.

ಜೈನಕಥಾಕೋಶಗಳಲ್ಲಿ ಹರಿಷೇಣನ 'ಬೃಹತ್ಕಥಾಕೋಶ' ಬಹಳ ಪ್ರಾಚೀನವಾದುದು. ಇದನ್ನು ಡಾ॥ಉಪಾಧ್ಯೆಯವರು ಹೊರಗೆ ತಂದೊಡನೆಯೇ ದಿಗಂಬರ ಸಂಪ್ರದಾಯದಲ್ಲಿ ಬಹಳ ಜನಪ್ರಿಯವಾಗಿ ಮರಾಠಿ ಮತ್ತು ಹಿಂದಿ ಭಾಷೆಯಲ್ಲಿ ಅನುವಾದ ಗೊಂಡಿದೆ. ಕನ್ನಡದ ವಡ್ಡಾರಾಧನೆಯ 19 ಕಥೆಗಳು ಬೃಹತ್ಕಥಾಕೋಶದಲ್ಲಿದ್ದು ದಿಗಂಬರ – ಶ್ವೇತಾಂಬರ ಸಂಪ್ರದಾಯಗಳನ್ನು ಒಳಗೊಂಡಿದೆ. ಭಾರತದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಅಧ್ಯಯನದ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಡಾ॥ ಪಿ.ಎಲ್. ವೈದ್ಯರು ಶಿಷ್ಯರಾದ ಉಪಾಧ್ಯೆಯವರನ್ನು ಕರೆಸಿ ಶಿಕ್ಷಣ ಕ್ಷೇತ್ರದಲ್ಲಿ ವಿದ್ವತ್ ಸಂಪಾದನೆಯಲ್ಲಿ ನೀವೀಗ ಗುರುವನ್ನು ಮೀರಿಸಿದ ಶಿಷ್ಯರಾಗಿರುವಿರಿ ಎಂದು ಆನಂದದಿಂದ ತುಂಬುಹೃದಯದಿಂದ ಹರಸಿದರು. ಡಾ॥ವಿ.ಎಸ್. ಸುಕ್ತಂಕರರ ಶಿಫಾರಸಿನಿಂದ 1939ರಿಂದ 1942ರ ವರೆಗೆ 'ಸ್ಪ್ರಿಂಜರ್ ಫೆಲೋಶಿಪ್' ಸಹ ದೊರೆಯಿತು. ಡಾ॥ ಪಿ.ಎಲ್. ವೈದ್ಯರು ಉಪಾಧ್ಯೆಯವರಿಗೆ ವಿಶೇಷವಾಗಿ ಪ್ರಾಕೃತ ಅಧ್ಯಯನವನ್ನು ನಡೆಸಲು ಪ್ರೇರಣೆ ನೀಡಿದರು.

ಭಾರತೀಯ ಶಾಸ್ತ್ರದಲ್ಲಿ ಉಪೇಕ್ಷಿತವಾಗಿದ್ದ ಕ್ಷೇತ್ರದಲ್ಲಿ ಸಂಶೋಧನೆ ನಡೆಸಬಹುದಾಗಿದ್ದ ಸಾಧ್ಯತೆಗಳನ್ನು ತೋರಿಸಿಕೊಟ್ಟರು. ಸಾಂಗಲಿಯ ವಿಲಿಂಗಡನ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದ ದಿನಗಳಲ್ಲಿ ಡಾ॥ ಪಿ.ಎಲ್. ವೈದ್ಯರು ಮನೆಯಲ್ಲಿಲ್ಲದ ಸಂದರ್ಭಗಳಲ್ಲೂ ಅವರ ಪುಸ್ತಕಾಲಯವನ್ನು ಉಪಯೋಗಿಸಲು ಅನುವು ಮಾಡಿಕೊಟ್ಟಿದ್ದರು. ಇದರಿಂದ ಉಪಾಧ್ಯೆಯವರ ಸಂಶೋಧನಾ ಪದ್ಧತಿಗೂ ವಿಮರ್ಶಾತ್ಮಕ ಬುದ್ಧಿಮತ್ತೆಗೂ ಬುನಾದಿಯಾಯಿತು. ಈ ಗುರುಶಿಷ್ಯರ ಸಂಬಂಧ ಅಸಾಧಾರಣವಾದುದು. ಭಾರತೀಯ ಸಂಸ್ಕೃತ ಭಾಷಾತಜ್ಞರು ಪಠ್ಯದ ಬಗ್ಗೆ ಸರಿಯಾದ ಎಚ್ಚರಿಕೆ ವಹಿಸದಿರುವುದೇ ಭಾರತೀಯರ ವಿದ್ವತ್ತಿನಲ್ಲಿರುವ ದೊಡ್ಡ ಕೊರತೆ. ಉತ್ತಮ ಹಾಗೂ ವಿಮರ್ಶಾತ್ಮಕ ಪಠ್ಯ ಲಭಿಸದಿದ್ದಾಗ, ಅಂತಹ ಸಂಶೋಧನೆ ವೃಥಾ ಅಮೂಲ್ಯ ಸಮಯ ಮತ್ತು ಶಕ್ತಿಯನ್ನು ಹಾಳುಮಾಡುತ್ತದೆ. ನಾವು ಉತ್ತಮ ಪಠ್ಯ ಹೊಂದಿದ್ದರೆ ಜಗತ್ತಿನಲ್ಲಿ ಅರ್ಧಕ್ಕರ್ಧ ವಾದ – ವಿವಾದವೇ ಇರುತ್ತಿರಲಿಲ್ಲ – ಎಂಬುದಾಗಿ ಡಾ॥ ವಿ.ಎಸ್. ಪತ್ರವನ್ನು ಬರೆದಿದ್ದರು. ಪುಣೆಯ ಭಂಡಾರ್ಕರ ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಯ ಆಚಾರ್ಯ ಡಾ॥ ಎಸ್.ಕೆ. ಬೆಳ್ವಲ್ಕರರಿಂದ ಉಪಾಧ್ಯೆಯವರು ಬಹಳ ಪ್ರಭಾವಿತರಾಗಿ ಅಥರ್ವಣ ವೇದದ ಕೆಲವು ಭಾಗಗಳನ್ನು, ಕೆಲವು ಉಪನಿಷತ್ತುಗಳನ್ನು ಅಧ್ಯಯನ ಮಾಡಿ ಅವರಿಂದ ಮಾರ್ಗದರ್ಶನ ಪಡೆದಿದ್ದಾರೆ.

1941ರಲ್ಲಿ ಹೈದರಾಬಾದಿನಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯವಿದ್ಯಾ ಸಮ್ಮೇಳನದ ಪ್ರಾಕೃತ, ಪಾಲಿ, ಬೌದ್ಧಧರ್ಮ ಮತ್ತು ಜೈನಧರ್ಮ ವಿಭಾಗದ ಅಧ್ಯಕ್ಷತೆಯನ್ನು ವಹಿಸಿದ್ದರು. ಉಪಾಧ್ಯೆಯವರು ಸಮಯವನ್ನು ಜಾಗರೂಕತೆಯಿಂದ ಯೋಚಿತ ವೇಳಾಪಟ್ಟಿಗೆ

ಅನುಸಾರವಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಸೋಮಾರಿಯಂತೆ ಸುಮ್ಮನೆ ಮಾತುಕತೆಗಳಲ್ಲಿ, ಒಣಹರಟೆಗಳಲ್ಲಿ, ನೀರಸ ಭಾಷಣಗಳಲ್ಲಿ ಸಮಯವನ್ನು ವ್ಯರ್ಥ ಮಾಡುತ್ತಿರಲಿಲ್ಲ. ತಮ್ಮ ಪಾಲಿನ ಎಲ್ಲಾ ಕೆಲಸಗಳನ್ನು ಮುಂದಾಲೋಚನೆಯಿಂದ ತಾವೇ ಮಾಡಿಕೊಳ್ಳುತ್ತಿದ್ದರು. ಉಪಾಧ್ಯೆಯವರು ತಮ್ಮ ಗುರುಗಳ ಉಪದೇಶ ಮಂತ್ರಗಳನ್ನು ಚಾಚೂ ತಪ್ಪದೆ ಪರಿಪಾಲಿಸುತ್ತಿದ್ದರು. 'ಜಾಕ್ ಆಫ್ ಆಲ್, ಮಾಸ್ಟರ್ ಆಫ್ ನನ್' ಎಂಬ ಪ್ರಲೋಭನೆಯ ಅಯಸ್ಕಾಂತಕ್ಕೆ ಅವರು ಸಿಕ್ಕಿ ಹಾಕಿಕೊಳ್ಳಲಿಲ್ಲ. ಯೋಗ್ಯವಾದ ಒಂದು ಕೆಲಸವನ್ನು ಹಿಡಿದು, ಅದನ್ನು ಕೊನೆ ಮುಟ್ಟುವವರೆಗೂ ಗುರಿಯನ್ನು ಸಾಧಿಸಿದ್ದಾರೆ. ಇದು ಉಪಾಧ್ಯೆಯವರ ಸೂತ್ರ. ಈ ಸೂತ್ರದ ಅಳವಡಿಕೆ, ಈ ಮಂತ್ರ-ತಂತ್ರಗಳ ಅನುಸರಣ - ಅವರಿಗೆ ಶೀಘ್ರ ಸತ್ಫಲಗಳನ್ನು ನೀಡಿ, ಪಂಡಿತಮಂಡಳಿಯಲ್ಲಿ ಮೂರ್ಧನ್ಯರೆಂದು ಮಾನ್ಯರಾಗಿದ್ದಾರೆ. ಉಪಾಧ್ಯೆಯವರು ಪಾರದರ್ಶಕ ವ್ಯಕ್ತಿಯಾಗಿದ್ದರು. ಇವರದು ವೈದುಷ್ಯದ ಅಚ್ಚೋದದಲ್ಲಿ ಅದ್ದಿ ತೆಗೆದ ಅವರ ಕರ್ಮಭೂಮಿ. ತಪೋಕ್ಷೇತ್ರ, ಸರ್ವಸ್ವವೂ ಆಯಿತು. 1930 ರಿಂದ 1971ರ ವರೆಗೆ ಅವರು ಅಲ್ಲಿಯೇ ನೆಲಸಿದರು. ಜೈನಾಗಮ ಮತ್ತು ಪ್ರಾಕೃತ ಸಾಹಿತ್ಯವಲಯದ ಪ್ರಾಜ್ಞರಿಗೆ ಕೊಲ್ಲಾಪುರ ತೀರ್ಥಕ್ಷೇತ್ರವಾಯಿತು. ಶೆಟ್ಟಿ ಬಿಟ್ಟಲ್ಲೆ ಪಟ್ಟಣ, ವಿದ್ವಾಂಸರು ಇದ್ದಲ್ಲೆ ವಿದ್ವತ್ತು. ಉಪಾಧ್ಯೆ ಇದ್ದ ರಾಜರಾಮ ಕಾಲೇಜಿಗೆ, ಕೊಲ್ಲಾಪುರಕ್ಕೆ ಪಾಂಡಿತ್ಯದ ದಾರಿಗಳಾದವು. ಮುಂದೆ ಶಿವಾಜಿ ವಿಶ್ವವಿದ್ಯಾನಿಲಯ ಕೊಲ್ಲಾಪುರದಲ್ಲಿ ಸ್ಥಾಪನೆಯಾಗಿ ರಾಜಾರಾಮ ಕಾಲೇಜು ಅದರ ಭಾಗವಾಯಿತು. ಉಪಾಧ್ಯೆಯವರು ಶಿವಾಜಿ ವಿಶ್ವವಿದ್ಯಾನಿಲಯದಲ್ಲಿ 1962-72ರ ವರೆಗೆ ಕಲಾನಿಕಾಯದ ಡೀನ್ ಆದರು. ಸಿಂಡಿಕೇಟಿನ ಸದಸ್ಯರೂ ಆಗಿ, ಪ್ರಕಟನ ವಿಭಾಗದ ಅಧ್ಯಕ್ಷರೂ ಆದರು. 1962ರಲ್ಲಿ ಬಿಹಾರದ ರಾಜ್ಯಪಾಲರಿಂದ ಸಿದ್ಧಾಂತಾಚಾರ್ಯ ಉಪಾಧಿ ಲಭಿಸಿತು. 1962ರಲ್ಲಿ ರಾಜರಾಮ ಕಾಲೇಜಿನಲ್ಲಿ ಸೇವಾ ನಿಯಮದಂತೆ ಶಿಕ್ಷಕ ವೃತ್ತಿಯಿಂದ ನಿವೃತ್ತರಾದರೂ ಸಹ ಅವರ ಓದು-ಬರಹಕ್ಕೆ ಅಲ್ಪ-ವಿರಾಮವೇ ಹೊರತು ಪೂರ್ಣವಿರಾಮವಿರಲಿಲ್ಲ. ನಿವೃತ್ತ ಅಧ್ಯಾಪಕರು ಸಂಶೋಧನೆಯನ್ನು ಮುಂದುವರಿಸಲು ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ ಕಲ್ಪಿಸಿತು. ಈ ಯೋಜನೆಯಡಿಯಲ್ಲಿ 1963ರಿಂದ 1972ರ ವರೆಗೆ ಉಪಾಧ್ಯೆಯವರು ಸಂಶೋಧನೆಯನ್ನು ಮುಂದುವರಿಸಿದರು.

ಉಪಾಧ್ಯೆಯವರು ಆಹಾರ, ವಿಹಾರ-ವಿಚಾರಗಳಲ್ಲಿ ಶಿಸ್ತಿನ ಸಿಪಾಯಿಯಾಗಿದ್ದರು. ಮುಪ್ಪಿನ ಅಂಚಿನಲ್ಲೂ ದೃಢಕಾಯರಾಗಿದ್ದರು. ನಿವೃತ್ತಿಯ ಹೊದಿಕೆ ಹೊದ್ದು ಮೂಲೆ ಸೇರಿ ತಮ್ಮ ಕಾರ್ಯ ಚಟುವಟಿಕೆಗಳಿಗೆ ವಿದಾಯ ಹೇಳುವ ಸ್ವಭಾವದವರಾಗಿರಲಿಲ್ಲ. ಇವರು ಕೇವಲ ತಮ್ಮ ಸ್ವಂತ ಬರವಣಿಗೆಗೆ ಮಾತ್ರ ಸೀಮಿತರಾಗಿರಲಿಲ್ಲ. ಇವರಲ್ಲಿ ಪ್ರಾಚೀನ ಪಾಂಡಿತ್ಯ ಪರಂಪರೆಯ ಆಳದ ಜೊತೆಗೆ, ಪಾಶ್ಚಾತ್ಯ ಚಿಂತನೆಯ ವಿಶ್ಲೇಷಣಾತ್ಮಕ ಅಂತರ್‌ದೃಷ್ಟಿಯೂ ಇತ್ತು. ಉಪಾಧ್ಯೆಯವರು ಉತ್ತಮ ಮಾನವತಾವಾದಿಯಾಗಿದ್ದರು.

ಇವರ ಸನ್ನಡತೆ, ಹೊಂದಾಣಿಕೆ ಸ್ವಭಾವ ಹಾಗೂ ಆತ್ಮೀಯ ಮಾತುಗಾರಿಕೆ ಎಲ್ಲರಿಗೂ ಪ್ರಿಯವಾಗಿತ್ತು. ಇವರ ನೀತಿ ಮತ್ತು ಸದಾಚಾರದಿಂದ ವ್ಯಕ್ತಿತ್ವ ಎಷ್ಟು ಪೂಜ್ಯನೀಯವಾಗಿತ್ತೋ ಅಷ್ಟೇ ಪೂಜ್ಯನೀಯವಾಗಿದೆ ಅವರ ಗ್ರಂಥಗಳು. ಹಲವು ಪ್ರಕಾಶನ ಸಂಸ್ಥೆಗಳಿಗೆ ಹೆಗಲು ಕೊಟ್ಟಿದ್ದರು. ಸಿಂಹಕ್ಕೆ ತನ್ನ ಕಾಡೇನು? ಪರರ ಕಾಡೇನು? ಹುಟ್ಟು ಕನ್ನಡಿಗರಾದ ಉಪಾಧ್ಯೆಯವರು ವಿಶ್ವಪ್ರಜೆಯಾಗಿ ಬಾಳಿದರು. ಕುವೆಂಪುರವರ ಜೀವನಸಂದೇಶವಾದ ಪಂಚತಂತ್ರ, ಸಪ್ತಸೂತ್ರಗಳ ಲಕ್ಷಣಕ್ಕೆ ಲಕ್ಷ್ಯವಾಗಿದ್ದರು. 1965ರಲ್ಲಿ ಉಪಾಧ್ಯೆಯವರ ಪಾಲೀ ಮತ್ತು ಪ್ರಾಕೃತ ಕನ್ನಡ ಗ್ರಂಥ ಪ್ರಕಟಣೆಯಾಗಿದೆ. 1966ರಲ್ಲಿ ಅಲಿಘರ್‌ನಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯವಿದ್ಯಾ ಸಮ್ಮೇಳನದ ಪ್ರಧಾನ ಅಧ್ಯಕ್ಷತೆಯನ್ನು ಇವರು ವಹಿಸಿದ್ದರು. 1967ರಲ್ಲಿ ಆ.ನೇ. ಉಪಾಧ್ಯೆಯವರು ಶ್ರವಣಬೆಳಗೊಳದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. 1968ರಲ್ಲಿ ಉಪಾಧ್ಯೆಯವರ ತಾಯಿ-ಚಂದ್ರಾಬಾಯಿಯವರು ವಿಯೋಗ ಹೊಂದಿದರು. 1971ರಲ್ಲಿ ಆಸ್ಟ್ರೇಲಿಯ-ಕ್ಯಾನ್‌ಬೆರಾದಲ್ಲಿ ನಡೆದ 28ನೇ ಅಂತರ ರಾಷ್ಟ್ರೀಯ ಪ್ರಾಚ್ಯವಿದ್ಯಾ ಪರಿಷತ್ತಿನಲ್ಲಿ ಭಾರತ ಸರ್ಕಾರದ ಪ್ರತಿನಿಧಿಯಾಗಿದ್ದರು. 1971 ಫೆಬ್ರವರಿಯಿಂದ 1975 ಸೆಪ್ಟಂಬರ್‌ವರೆಗೆ ಹೊಸದಾಗಿ ಪ್ರಾರಂಭವಾದ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಕೃತ ಮತ್ತು ಜೈನಶಾಸ್ತ್ರ ಇಲಾಖೆಯ ಪ್ರಥಮ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸಿದ್ದಾರೆ. 1972ರಲ್ಲಿ ಬೆಳಗಾವಿಯಲ್ಲಿ ನಡೆದ ದಕ್ಷಿಣ ಭಾರತ ಜೈನ ಮಹಾಸಭೆಯ 62ನೇ ಅಧಿವೇಶನದ ಅಧ್ಯಕ್ಷತೆಯನ್ನು ವಹಿಸಿದ್ದರು.

1973ರಲ್ಲಿ ಪ್ಯಾರಿಸ್‌ನಲ್ಲಿ ಜರುಗಿದ ಅಂತರರಾಷ್ಟ್ರೀಯ ಪ್ರಾಚ್ಯವಿದ್ಯಾ ಪರಿಷತ್ತಿನಲ್ಲಿ ಭಾರತ ಸರ್ಕಾರದ ಪ್ರತಿನಿಧಿಯಾಗಿ ಪಾಲ್ಗೊಂಡಿದ್ದರು. 1973ರಲ್ಲಿ 'ಗೀತವೀತರಾಗ' ಗ್ರಂಥಕ್ಕೆ ದೆಹಲಿಯ ಶ್ರಮಣ ಭಜನ ಪ್ರಸಾರಕ ಮಂಡಲದಿಂದ ಸ್ವರ್ಣಪದಕ ಲಭಿಸಿತು. 1974ರಲ್ಲಿ 'ಬೆಲ್ಜಿಯಂ'ನಲ್ಲಿ ನಡೆದ ಜಾಗತಿಕ ಧರ್ಮ ಮತ್ತು ಶಾಂತಿ ಸಮ್ಮೇಳನಕ್ಕೆ ಭಾರತ ಸರ್ಕಾರದ ಪ್ರತಿನಿಧಿಯಾಗಿ ಪಾಲ್ಗೊಂಡಿದ್ದರು. 1975ರಲ್ಲಿ 'ನ್ಯಾಯಾವತಾರ' ಗ್ರಂಥಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವದ ಪಾರಿತೋಷಕ ಬಹುಮಾನ ದೊರೆತಿದೆ. ಇದೇ ವರ್ಷ 1975ರಲ್ಲಿಯೇ ರಾಷ್ಟ್ರಪತಿಗಳಿಂದ ಸಂಸ್ಕೃತ ರಾಷ್ಟ್ರೀಯ ಪಂಡಿತ ಪ್ರಶಸ್ತಿಯೂ ಲಭಿಸಿದೆ. ಡಾ॥ಆ.ನೇ. ಉಪಾಧ್ಯೆಯವರು ವಿದ್ವತ್ತಿನ ಕ್ಷೇತ್ರದಲ್ಲಿ ಸಂಶೋಧನ, ಸಂಪಾದನ ಹಾಗೂ ಪಾಂಡಿತ್ಯ – ಈ ಮೂರೂ ಕ್ಷೇತ್ರಗಳಲ್ಲಿ ಸಮುದ್ರಪ್ರಾಯರಾಗಿದ್ದಾರೆ. 65 ವರ್ಷಗಳ ಜೀವಿತ ಕಾಲದಲ್ಲಿ ಉಪಾಧ್ಯೆಯವರು ಮಾಡಿದ ಬರವಣಿಗೆ ಬೃಹತ್ ಪ್ರಮಾಣದಲ್ಲಿದೆ. ಮೂವತ್ತು ಗ್ರಂಥಗಳು, ಇನ್ನೂರು ಸಂಪ್ರಬಂಧಗಳು ಹಾಗೂ ಎಪ್ಪತ್ತೈದು ಪುಸ್ತಕ ವಿಮರ್ಶೆಗಳು. ಇವರು ವಿದ್ವದ್‌ಗೋಷ್ಠಿಗೆ ಭೂಷಣಪ್ರಾಯರು. ವಿದ್ವದ್‌ರೇಣ್ಯರ ತಾರಾಮಂಡಲಕ್ಕೆ ಉಪಾಧ್ಯೆಯವರು ಧ್ರುವನಕ್ಷತ್ರವಾಗಿ ಶೋಭಿಸುತ್ತಿದ್ದಾರೆ. ಇವರು ಹೆಚ್ಚಾಗಿ ಬರೆದಿರುವುದು ಇಂಗ್ಲೀಷಿನಲ್ಲಿ.

ಆನುಷಂಗಿಕವಾಗಿ, ಕನ್ನಡದಲ್ಲೂ, ಹಿಂದಿಯಲ್ಲೂ ಬರೆದಿದ್ದಾರೆ. ಕನ್ನಡದಲ್ಲಿ ಹನ್ನೆರಡು ಲೇಖನಗಳನ್ನು, ಒಂದು ಸ್ವತಂತ್ರ ಕೃತಿಯನ್ನೂ ಬರೆದಿದ್ದಾರೆ. ಯುಗಕ್ಕೊಮ್ಮೆ ಮಹಾಕವಿ ಹುಟ್ಟಿ ಬರುವಂತೆ, ಡಾ॥ಆ.ನೇ. ಉಪಾಧ್ಯೆಯಂಥ ಮಹಾಸಂಶೋಧಕರು ಯುಗಕ್ಕೊಮ್ಮೆ ಜನ್ಮತಾಳಿ ತಮ್ಮ ಬದುಕನ್ನೆ ಬರಹವನ್ನಾಗಿಸಿಕೊಂಡ ಮಹಾನ್ ವಿದ್ವತ್‌ಪ್ರಭೆ. ಡಾ॥ಉಪಾಧ್ಯೆಯವರ ಪರಿಪೂರ್ಣ ವ್ಯಕ್ತಿತ್ವದ ಬಗ್ಗೆ ಅವರ ಆಪ್ತಮಿತ್ರರು ಮತ್ತು ಶಿಷ್ಯರ ಮಾತುಗಳನ್ನು ನಾವಿಲ್ಲಿ ಉಲ್ಲೇಖಿಸಬಹುದು.

"ನಾಣೇಣ ಜಾಣಈ ಭಾವೇ, ದಂಸಣೇಣ ಯ ಸದ್ದಹೇ ।
ಚರಿತ್ತೇಣ ನಿಗಿಣ್ಹಾ ಇ, ತವೇಣ ಪರಿಸುಜ್ಝ ಈ ॥"

[ಜ್ಞಾನದಿಂದ ತಿಳಿಯಬಹುದು, ದರ್ಶನದಿಂದ ಶ್ರದ್ಧೆ ಗಳಿಸಬಹುದು, ಚಾರಿತ್ರ್ಯದಿಂದ ತಡೆಯಬಹುದು, ತಪದಿಂದ ಪರಿಶುದ್ಧಿ ಹೊಂದಬಹುದು.]

ಡಾ॥ಉಪಾಧ್ಯೆಯವರು ಜ್ಞಾನ, ದರ್ಶನ, ಚಾರಿತ್ರ್ಯ, ತಪಸ್ಸಿನ ಮೂಲಕ ಹರಿದುಬರುತ್ತಿದ್ದ ಕರ್ಮವನ್ನು ತೊಳೆದು, ಆತ್ಮವನ್ನು ಕ್ಷಣ-ಕ್ಷಣವೂ ನಿರ್ಮಲಗೊಳಿಸಿ ಕೊಳ್ಳುತ್ತಿದ್ದರು. ಇಂಥ ನಿರ್ಮಲಾತ್ಮನನ್ನು 'ಧಮ್ಮ' ಎಂಬ ಅನ್ವರ್ಥನಾಮದಿಂದ ಕರೆದಿರುವುದು ಬಹಳ ಔಚಿತ್ಯಪೂರ್ಣವಾಗಿದೆ. ಇವರು ಕೇವಲ ಓರ್ವ ವಿದ್ವಾಂಸರಾಗಿರಲಿಲ್ಲ. ಸಾಕ್ಷಾತ್ ಉಪಾಧ್ಯಾಯ ಪರಮೇಷ್ಠಿಯಾಗಿದ್ದರು ಎಂದರೆ ಉತ್ಪ್ರೇಕ್ಷೆಯಲ್ಲ. ಇಂಥ ನಿರ್ಲಿಪ್ತಯೋಗಿ ಉಪಾಧ್ಯೆಯವರು 1975 ಸೆಪ್ಟಂಬರ್ 30ರಂದು ಮೈಸೂರು ಆಕಾಶವಾಣಿ ಕೇಂದ್ರದಲ್ಲಿ ಡಾ॥ ಹಾ.ಮಾ.ನಾಯಕರೊಂದಿಗೆ ಸಂದರ್ಶನ ಕಾರ್ಯಕ್ರಮವನ್ನು ನೀಡಿದರು. 1975 ಅಕ್ಟೋಬರ್ 9 ರಂದು ಕೊಲ್ಲಾಪುರದಲ್ಲಿ ಉಪಾಧ್ಯೆಯವರು ತಮ್ಮ ಮಡದಿ ಸುಂದರಬಾಯಿಯವರನ್ನು, ಮಕ್ಕಳಾದ ಗುಣಪಾಲ್, ಜಯಪಾಲ್, ನೇಮಿನಾಥರನ್ನು, ಮಗಳು ಕಾಂಚನಳನ್ನು, ಮುದ್ದುಮೊಮ್ಮಕ್ಕಳನ್ನು ಅಗಲಿ, ತಮ್ಮ ದೇಹವನ್ನು ಇಹದಲ್ಲಿ ತ್ಯಜಿಸಿ, ಅವರ ನಿರ್ಮಲಾತ್ಮ ಪಕ್ಷಿ ಸಿದ್ಧಾಲಯದ ಕಡೆಗೆ ಗಂಭೀರವಾಗಿ ಗಮಿಸಿತು. 1975, ಅಕ್ಟೋಬರ್ 9 ರಂದು ದಿವಂಗತ ಉಪಾಧ್ಯೆಯವರ ಗೌರವಾರ್ಥವಾಗಿ ಭಾರತೀಯ ಜ್ಞಾನಪೀಠದ ಎಲ್ಲಾ ಕಚೇರಿಗಳನ್ನು ಮುಚ್ಚಲಾಗಿತ್ತು. 1975, ನವಂಬರ್ 9 ರಂದು ಬೆಂಗಳೂರು ಆಕಾಶವಾಣಿ ಕೇಂದ್ರದಲ್ಲಿ ಡಾ॥ ಆ.ನೇ. ಉಪಾಧ್ಯೆಯವರ ಸಂದರ್ಶನ ಪ್ರಸಾರವಾಯಿತು. ಮರಾಠಿಯಲ್ಲಿ ಜೈನಧರ್ಮದ ಬಗ್ಗೆ ಸಂಪೂರ್ಣ ಮಾಹಿತಿ ಕೊಡುವ ಅನ್ಯಧರ್ಮಗಳ ಸತ್ವಗಳನ್ನು ತುಲನೆ ಮಾಡಿರುವ ಜೈನಧರ್ಮದ ಜೈನರಿಗೂ, ಜೈನೇತರರಿಗೂ ಉಪಯುಕ್ತವಾದ ಗ್ರಂಥವನ್ನು ಬಾಲಬ್ರಹ್ಮಚಾರಿಣಿ ಪಂಡಿತಾ ಸುಮತಿಬಾಯಿ ನೇಮಿಚಂದ್ ಶಹಾ ಅವರು 'ಪೂರ್ಣಾರ್ಘ್ಯ' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಈ ಗ್ರಂಥ 'ನ ಭೂತೋ ನ ಭವಿಷ್ಯತಿ' ಎಂದು ವಿಮರ್ಶಕರಿಂದ ಖ್ಯಾತಿವೆತ್ತಿದೆ. ಇಂಥ ಮಹತ್ವಪೂರ್ಣವಾದ ಗ್ರಂಥ

ಡಾ॥ ಆ.ನೇ. ಉಪಾಧ್ಯೆಯವರ ಸಹಾಯ, ಸಹಕಾರ ಮಾರ್ಗದರ್ಶನದಲ್ಲಿ ಪೂರ್ಣಗೊಂಡಿದೆ.

ಕನ್ನಡದಲ್ಲಿ ಪ್ರಕಟವಾಗಿರುವ ಎ.ಎನ್. ಉಪಾಧ್ಯೆಯವರ ಲೇಖನಗಳ ಪಟ್ಟಿಯನ್ನು ಹೀಗೆ ಸಂಗ್ರಹಿಸಬಹುದು.

1. ಜಟಾನಂದಿಯ 'ವರಾಂಗಚರಿತೆ'. ಇದರ ಸಂಗ್ರಹಾನುವಾದ: ಡಿ.ಎಲ್. ನರಸಿಂಹಾಚಾರ್. 25ರ ಮಾರ್ಚ್ 1940ರಲ್ಲಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗಿದೆ.

2. 'ವಡ್ಡಾರಾಧನೆ'ಯೆಂಬ ಹಳೆಗನ್ನಡ ಗದ್ಯಗ್ರಂಥ. ಇದರ ಸಾರಾನುವಾದ: ಡಿ.ಎಲ್. ನರಸಿಂಹಾಚಾರ್ 24ರ ಫೆಬ್ರವರಿ 1942ರಲ್ಲಿ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಗೊಂಡಿದೆ. ಈ ಎರಡೂ ಲೇಖನಗಳು ಡಿ.ಎಲ್.ಎನ್. ಅವರ 'ಪೀಠಿಕೆಗಳು-ಲೇಖನಗಳು ಪುಸ್ತಕದಲ್ಲಿದೆ. ಎರಡನೆಯ ಲೇಖನ ಮಾತ್ರ ಡಾ॥ ಕಮಲಾ ಹಂಪನಾ ಅವರ ಸಂಪಾದಕತ್ವದಲ್ಲಿ ಡಿ.ಎಲ್.ಎನ್. ಅವರ 'ಆಯ್ದ ಲೇಖನಗಳು' 1983ರ ಪುಸ್ತಕದಲ್ಲಿದೆ.

3. 'ಧರ್ಮಪರೀಕ್ಷೆ ಮತ್ತು ಧೂರ್ತಾಖ್ಯಾನ' ಪ್ರಬುದ್ಧ ಕರ್ನಾಟಕದಲ್ಲಿ 26 ರ ಏಪ್ರಿಲ್ 1945ರಲ್ಲಿ ಪ್ರಕಟವಾಗಿದೆ.

4. 'ಕವಿಪರಮೇಶ್ವರ ಅಥವಾ ಪರಮೇಷ್ಠಿ'. ಪ್ರಬುದ್ಧ ಕರ್ನಾಟಕದಲ್ಲಿ 28ರ ಮಾರ್ಚ್ 1947ರಲ್ಲಿ ಪ್ರಕಟಣೆಯಾಗಿದೆ.

5. 'ಪ್ರಾಕೃತ ಭಾಷೆಯಲ್ಲಿ ಸಾಹಿತ್ಯ'. ಸರ್ವಧರ್ಮ ಸಮ್ಮೇಳನದ ರಜತ ಮಹೋತ್ಸವದ ವಿಶೇಷಾಂಕ ಸಂಚಿಕೆಯಲ್ಲಿ 1957ರಲ್ಲಿ ಧರ್ಮಸ್ಥಳದಲ್ಲಿ ಪ್ರಕಟವಾಗಿದೆ.

6. 'ಚಾವುಂಡರಾಯ ಮತ್ತು ಆತನ ಹಿಂದಿನ ಕೃತಿಕರ್ತರು, 1966ರಲ್ಲಿ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾಗಿದೆ. ಇದರ ಅನುವಾದಕರು ಎಸ್.ಶಿವಣ್ಣನವರು.

7. 'ಪ್ರಾಕೃತ': ಕರ್ನಾಟಕ ಪರಂಪರೆ-ಸಂಪುಟ ಒಂದರಲ್ಲಿ ಎಲ್. ಗುಂಡಪ್ಪನವರ ಅನುವಾದದಲ್ಲಿ ಪ್ರಕಟಣಗೊಂಡಿದೆ.

8. 'ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಯ ಇತಿಹಾಸದಲ್ಲಿ ಜೈನ ಆಚಾರ್ಯ ಮತ್ತು ಕವಿಗಳ ಸ್ಥಾನ. - ಗುರುದೇವ.

9. 'ಕನ್ನಡ ಕವಿ ಚಕ್ರವರ್ತಿ ರನ್ನನ ಅಮರ ಸಾಹಿತ್ಯ ಸೇವೆ' - ಅಕ್ಟೋಬರ್ 1965ರಲ್ಲಿ 'ಸನ್ಮತಿ'ಯಲ್ಲಿ ಪ್ರಕಟಗೊಂಡಿದೆ.

10. 'ಸಹೃದಯ ಸಂಶೋಧಕ ಮಿತ್ರರು' - 1971ರಲ್ಲಿ ಕನ್ನಡನುಡಿಯಲ್ಲಿ ಪ್ರಕಟವಾಗಿದೆ.

11. 'ಆದಿಪುರಾಣದ ಎರಡು ಶ್ಲೋಕಗಳ ಅರ್ಥ'-ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ.

12. 'ಆದಿಪುರಾಣದ ಎರಡು ಪದ್ಯಗಳ ಅರ್ಥದ ಔಚಿತ್ಯ'-ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

13. 'ದೇಶೀ ಕೋಶಗಳಲ್ಲಿನ ಕನ್ನಡ ಶಬ್ದಗಳು' – ಇದು ಬಿಡಿಯಾಗಿ ಪ್ರಕಟವಾಗಿದೆ.

14. 'ಮಹಾವೀರ' – ದಿವ್ಯಧ್ವನಿಯಲ್ಲಿ ಡಾ। ಹಂಪನಾ ಅವರ ಸಂಪಾದಕತ್ವದಲ್ಲಿ 1978ರಲ್ಲಿ ಪ್ರಕಟವಾಗಿದೆ.

15. 'ರನ್ನ ಕವಿಯ ಕಾಲ, ದೇಶ ಮತ್ತು ವ್ಯಕ್ತಿತ್ವ' – ರನ್ನಕವಿ ಕರ್ನಾಟಕ ವಿಶ್ವವಿದ್ಯಾಲಯ 1966ರಲ್ಲಿ ಧಾರವಾಡದಲ್ಲಿ ಪ್ರಕಟಗೊಂಡಿದೆ.

16. 'ವಾಸೀಚಂದನ ಕಲ್ಪತ್ವ' – ಮೈಸೂರಿನ 'ಉಪಾಯನ'ದಲ್ಲಿ 1967ರಲ್ಲಿ ಪ್ರಕಟಣೆಯಾಗಿದೆ.

17. '46ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷ ಭಾಷಣ' ಅಧ್ಯಕ್ಷರ ಭಾಷಣಗಳು ಸಂಪುಟ ಮೂರರಲ್ಲಿ 1967ರಲ್ಲಿ ಪ್ರಕಟವಾಗಿದೆ.

18. ವಡ್ಡಾರಾಧನೆ ಹಿನ್ನೆಲೆ: 'ವಡ್ಡಾರಾಧನೆ – ವಿ.ಸೀತಾರಾಮಯ್ಯನವರ ಸಂಪಾದಕತ್ವದಲ್ಲಿ ಐ.ಬಿ.ಹೆಚ್.ಪ್ರಕಾಶನ. ಕವಿಕಾವ್ಯಮಾಲೆ – 1977ರಲ್ಲಿ ಪ್ರಕಟಣೆಯಾಗಿದೆ.

ಉಪಾಧ್ಯೆಯವರು 1944ರಲ್ಲಿ "ಸ್ವರೂಪ ಸಂಬೋಧನ ಪಂಚವಿಂಶತಿ" ಎಂಬ ಮೊದಲ ಸ್ವತಂತ್ರ ಕನ್ನಡ ಗ್ರಂಥ ಪ್ರಕಟಿಸಿದ್ದಾರೆ. ಆತ್ಮಜ್ಞಾನ ಸಂಬಂಧಿಯಾದ ಎರಡು ಕಾವ್ಯಗಳನ್ನು ಪ್ರೊ.ಕೆ.ಜಿ. ಕುಂದಣಗಾರರ ಸಹಸಂಪಾದಕತ್ವದಲ್ಲಿ ಸಂಪಾದಿಸಿದ್ದಾರೆ. ಮೊದಲನೆಯದಾಗಿ 'ಚಿನ್ಮಯ ಚಿಂತಾಮಣಿ' ಕಲ್ಯಾಣ ಕೀರ್ತಿ ಆಚಾರ್ಯವಿರಚಿತ ಕನ್ನಡ ಕಾವ್ಯ. ಈ ಕಾವ್ಯ 1930ರಲ್ಲಿ ಶ್ರೀಜಿನವಿಜಯ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಅನಂತರ ಪ್ರತ್ಯೇಕ ಪುಸ್ತಕವಾಗಿಯೂ ಹೊರಬಂದಿದೆ. ಎರಡನೆಯದಾಗಿ 'ಜ್ಞಾನಭಾಸ್ಕರಚರಿತೆ' 1931ರಲ್ಲಿ ಬೆಳಗಾವಿಯ ಶ್ರೀಜಿನವಿಜಯ ಪತ್ರಿಕೆಯಲ್ಲಿ ಕೆ.ಜಿ. ಕುಂದಣಗಾರರ ಸಹಸಂಪಾದಕತ್ವದಲ್ಲಿ ಅಚ್ಚಾಗಿರುವ ಕಾವ್ಯ ಪ್ರೊ.ಕೆ.ಜಿ. ಕುಂದಣಗಾರರು ಕೊಲ್ಲಾಪುರದ ರಾಜರಾಮ ಕಾಲೇಜಿನಲ್ಲಿ ಉಪಾಧ್ಯೆಯವರು ಕರ್ನಾಟಕದ ಸಹೋದ್ಯೋಗಿ ಪ್ರಾಧ್ಯಾಪಕರಾಗಿದ್ದರು. ಡಾ॥ಆ.ನೇ. ಉಪಾಧ್ಯೇಯವರು ಕರ್ನಾಟಕದ ಅಗ್ರಗಣ್ಯ ಸಂಶೋಧಕ ವಿದ್ವಾಂಸರಾಗಿದ್ದು, ಕನ್ನಡವನ್ನು ರಾಷ್ಟ್ರೀಯ-ಅಂತರಾಷ್ಟ್ರೀಯ ಮಟ್ಟಗಳಲ್ಲಿ ಬೆಳಗಿಸಿಕೊಂಡು, ಜೈನ ಲೇಖಕರಾಗಿ ವಿದ್ವತ್‌ಪ್ರಭೆಯ ಸ್ಥಾನ-ಮಾನಗಳನ್ನು ಉಳಿಸಿ ಬೆಳೆಸಿದ್ದಾರೆ. ಡಾ॥ ಕೆ.ವಿ.ಪುಟ್ಟಪ್ಪನವರು 'ವಿಚಾರ ಕ್ರಾಂತಿಗೆ ಆಹ್ವಾನ' ಎಂಬ ಲೇಖನದಲ್ಲಿ

ಡಾ॥ ಉಪಾಧ್ಯೆಯವರನ್ನು 'ವಿದ್ವತ್ತಿನಲ್ಲಿ ಆನೆ-ವಿನಯದಲ್ಲಿ ಅಣು' ಎಂಬುದಾಗಿ ಸ್ಮರಿಸಿದ್ದಾರೆ. ಈ ಲೇಖನ 1987ರಲ್ಲಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಣೆಯಾಗಿದೆ. ಡಾ॥ಆದಿನಾಥ ನೇಮಿನಾಥ ಉಪಾಧ್ಯೆ ಡಾ॥ ಹಂಪನಾ ಅವರು 1967ರಲ್ಲಿ ಕನ್ನಡನುಡಿಯಲ್ಲಿ ರಚಿಸಿ ಪ್ರಕಟಿಸಿದ್ದಾರೆ. ಎಚ್ಚೆಸ್ಕೆ ಅವರ ಡಾ॥ ಆದಿನಾಥ ನೇಮಿನಾಥ ಉಪಾಧ್ಯೆ ಎಂಬ ಲೇಖನ 21.9.1975ರಲ್ಲಿ ಪ್ರಕಟಗೊಂಡಿದೆ. 'ಜ್ಞಾನದಿಗ್ಗಜ ಡಾ.ಉಪಾಧ್ಯೆ' ಬಿ.ವಿ. ವೈಕುಂಠರಾಜು ಅವರ ಲೇಖನ 10.10.1975ರಲ್ಲಿ ಪ್ರಕಟವಾಗಿದೆ. 'ಬುಕ್ಸ್ ಅಂಡ್ ಪೇಪರ್ಸ್' - ಪ್ರೊ.ಎ.ಎನ್. ಉಪಾಧ್ಯೆ 1957ರಲ್ಲಿ ಪ್ರಕಟವಾಗಿದೆ. ಡಾ॥ ಆ.ನೇ. ಉಪಾಧ್ಯೆ-ಎ.ಎನ್. ಕುಲಕರ್ಣಿ, 1979ರಲ್ಲಿ ಪ್ರಕಟಗೊಂಡಿದೆ. 'ಕನ್ನಡ ರಥಿಕರು' - ಲೇಖಕರಾದ ಡಿ. ಲಿಂಗಯ್ಯನವರ ಲೇಖನ ಪ್ರಕಟಣೆಯಾಗಿದೆ. ಡಾ॥ ಎ.ಎನ್. ಉಪಾಧ್ಯೆ ಸ್ಮೃತಿ ಆಣಿ ಶ್ರೀ.ಶಾಂತ ಪಾಟಣಿ ಗೌರವ ಅಂಕ ಮರಾಠಿಯಲ್ಲಿ ಪ್ರೊ. ಶ್ರೀಧರ ಶಾಮರಾವ್ ಹೇರ್‌ವಾಡೆ ಯವರ ಸಂಪಾದಕತ್ವದಲ್ಲಿ 1988ರಲ್ಲಿ ಪ್ರಕಟಗೊಂಡಿದೆ. ಡಾ॥ ಎ.ಎನ್. ಉಪಾಧ್ಯೆಯವರೊಡನೆ ಒಂದು ಸಂದರ್ಶನ-ಡಾ.ಹಾ.ಮಾ. ನಾಯಕರ ಲೇಖನ 1978ರಲ್ಲಿ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾಗಿದೆ. "ಸಮಾಜ ಧ್ರುವನಕ್ಷತ್ರ ಸಂಸ್ಕೃತ-ಪ್ರಾಕೃತಗಳ ದಿಗ್ಗಜ ದಿ.ಡಾ॥ ಆ.ನೇ. ಉಪಾಧ್ಯೆ"- ಅನಂತರಾವ್ ಭೋಸಗೆಯವರ ಲೇಖನ ಪ್ರಗತಿ ಮತ್ತು ಜಿನವಿಜಯ ಪತ್ರಿಕೆಯಲ್ಲಿ 1984ರಲ್ಲಿ ಪ್ರಕಟಣೆಯಾಗಿದೆ. 'ಗುರು ಸಂಭಾಷಣೆ' - ಎಂಬ ಲೇಖನಗಳು ಡಾ॥ ಪಿ.ಬಿ. ಬಡಿಗೇರ ಮತ್ತು ಗುರುದೇವ ಅವರು 1977ರಲ್ಲಿ ರಚಿತಗೊಂಡು ಪ್ರಕಟವಾಗಿವೆ. 'ನಿರಾಡಂಬರ ಹೃದಯ ಸಂಪನ್ನ ಡಾ॥ ಆ.ನೇ. ಉಪಾಧ್ಯೆ' - ಆದಿಚುಂಚನಗಿರಿ, ನವಂಬರ್ 1989ರಲ್ಲಿ ಡಾ॥ ಹಂಪನಾ ಅವರ ಲೇಖನಗಳು ಪ್ರಕಟಣೆಯಾಗಿದೆ. ಡಾ॥ ಆ.ನೇ. ಉಪಾಧ್ಯೆ-ಡಾ॥ ಎಂ.ಎ. ಜಯಚಂದ್ರ ಅವರ ಲೇಖನಗಳನ್ನು 1991ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಪಡಿಸಿದೆ.*

* * *

---

*ದಿನಾಂಕ 5.10.2000 ದಂದು ಪ್ರತಿಷ್ಠಾನದಲ್ಲಿ ನೀಡಿದ ಆ.ನೇ.ಉಪಾಧ್ಯೆ ದತ್ತಿ ಉಪನ್ಯಾಸ.

## 8. ರಸಿಕರಂಗ ಡಾ॥ ರಂ.ಶ್ರೀ. ಮುಗಳಿ

– ಎಸ್.ವಿ. ಶ್ರೀನಿವಾಸರಾವ್

'ಹೊರನಾಡಿನಲಿ ಕುಳಿತು ಈ ರಸಿಕರಂಗ
ಬಾರಿಸಿದನು ಕನ್ನುಡಿಯಲಿ ಜಲತರಂಗ
ಅದರ ಮೋಹಕ ದಿವ್ಯನಾದ ಮಾಧುರ್ಯ
ಬೆಳಗಿಸಿತು ಕನ್ನಡ ಅಭಿಮಾನ ಸೂರ್ಯ'

ಜಿ.ಎಸ್. ಅವಧಾನಿಯವರು 'ರಸಿಕರಂಗ' ಕಾವ್ಯನಾಮದ ರಂಗನಾಥ ಶ್ರೀನಿವಾಸ ಮುಗಳಿ ಯವರ ಕಾವ್ಯ ಪ್ರತಿಭೆಯನ್ನು ಮೇಲ್ಕಂಡ ಕವನದಲ್ಲಿ ಪರಿಚಯಿಸಿದ್ದಾರೆ. ಖ್ಯಾತಕವಿ ಸುಬ್ಬಣ್ಣ ಎಕ್ಕುಂಡಿಯವರು ಅವರ ವಿದ್ವತ್ತನ್ನು ತುಂಬಿದ 'ಕಲಶ'ಕ್ಕೆ ಹೋಲಿಸಿದ್ದಾರೆ. ಹೊರನಾಡಿನಲ್ಲಿದ್ದೇ ಹೇಗೆ ಸನಿಹಬಂದ ಕನ್ನಡದ ಅಭಿಮಾನಿಗಳಿಗೆಲ್ಲಾ ಸವಿನುಡಿಯ ಜೇನುಣಿಸಿ ತಣಿಸಿದರು ಎಂಬುದನ್ನು ಈ ಕೆಳಗಿನ ಸಾಲುಗಳು ಬಣ್ಣಿಸುತ್ತಿವೆ.

'ಇಷ್ಟೆಲ್ಲ ತುಂಬಿದರು ಒಮ್ಮೆಯೂ ತುಳುಕಿಲ್ಲ
ಕನ್ನಡ ಈ ಕಲಶ, ನುಡಿಯ ಜೇನುಣಿಸಿದರು
ಬಂದ ಬಂದವರೆದೆಯ ದಾಹವನು ತಣಿಸಿದರು'

ರಂ.ಶ್ರೀ. ಮುಗಳಿಯವರ ಅಪಾರ ಜನಪ್ರಿಯತೆ ಹಾಗೂ ಅವರ ನಿರಾಡಂಬರ ವ್ಯಕ್ತಿತ್ವದ ಮೇಲೆ ಎನ್.ಎಸ್. ಗದಗಕರ ರವರ ಕವಿತೆಯ ಕೆಳ ಸಾಲುಗಳು ಬೆಳಕು ಚೆಲ್ಲುತ್ತವೆ.[

'ಕನ್ನಡ ವಾಙ್ಮಯದ ವಿಸ್ತೀರ್ಣ ಲೋಕದಲಿ
ಇವರ ಹೆಸರನು ಕೇಳದವರೆ ವಿರಳ!
ಆಡಂಬರದ ಸೋಂಕು ಬಿರುಸುತನ ನಗುವಿಲ್ಲ
ಇವರ ವ್ಯಕ್ತಿತ್ವವೋ ಎನಿತು ಸರಳ!

'ಗಡಿನಾಡಿನ ಕನ್ನಡ ದೀಪ', 'ಕನ್ನಡದ ಪಾರಿಜಾತ' ಎಂಬ ಬಿರುದು ಗಳಿಸಿದ್ದ ರಂಗನಾಥ ಶ್ರೀನಿವಾಸ ಮುಗಳಿಯವರು ಧಾರವಾಡ ಜಿಲ್ಲೆಯ ಹೊಳೆ ಆಲೂರಿನಲ್ಲಿ ಶ್ರೀನಿವಾಸ ಮತ್ತು ಕಮಲಮ್ಮನವರ ಪುತ್ರನಾಗಿ ದಿನಾಂಕ 15/7/1906ರಂದು ಜನಿಸಿದರು. ವಿದ್ಯಾಭ್ಯಾಸ ಬಾಗಲಕೋಟೆ, ವಿಜಾಪುರ, ಧಾರವಾಡಗಳಲ್ಲಿ ನಡೆಯಿತು. 1928ರಲ್ಲಿ

ಸಂಸ್ಕೃತ, ಕನ್ನಡ, ಇಂಗ್ಲಿಷ್‌ಗಳಲ್ಲಿ ಬಿ.ಎ., ಪದವಿಯೊಡನೆ ಶ್ರೇಷ್ಠ ವಿದ್ಯಾರ್ಥಿಗೆ ಲಭಿಸುವ 'ದೀಪದ ಮೆಡಲ್' ಸಹ ಪಡೆದರು. ಅನಂತರ ಕರ್ನಾಟಕ ಕಾಲೇಜು ಸೇರಿ 'ಕನ್ನಡ'ದಲ್ಲಿ ಸ್ನಾತಕೋತ್ತರ ಪದವಿ ಎಂ.ಎ., ಗಳಿಸಿದರು. ಉತ್ತಮ ವಿದ್ಯಾರ್ಥಿಗೆ ಲಭಿಸುವ 'ವಿದ್ಯಾರಣ್ಯ ಪಾರಿತೋಷಕ' ಸಹ ಪ್ರಾಪ್ತವಾಯಿತು. ಬೇಂದ್ರೆ ಮಾಸ್ತರಿಂದ ಪ್ರಭಾವಿತರಾಗಿದ್ದ ಮುಗಳಿಯವರು ವಿದ್ಯಾ ಕ್ಷೇತ್ರದಲ್ಲಿ ದುಡಿಯುವ ಆಸೆಯಿಂದ ಮುಂಬಯಿಯ ಬಿ.ಟಿ. ಪರೀಕ್ಷೆ ತೇರ್ಗಡೆ ಹೊಂದಿ 1932ರಲ್ಲಿ ಹುಬ್ಬಳ್ಳಿಯ ಇಂಗ್ಲಿಷ್ ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ಸೇರಿ ಜೀವನ ಪ್ರಾರಂಭಿಸಿದರು. ಆಪ್ತ ಮಿತ್ರರೊಬ್ಬರ ಪ್ರಯತ್ನದಿಂದ ಇವರು ಮಹಾರಾಷ್ಟ್ರದ ಸಾಂಗಲಿಯ ವಿಲ್ಲಿಂಗ್‌ಡನ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಪ್ರವೇಶ ಪಡೆದರು. ತಮ್ಮ ಪ್ರತಿಭೆಯಿಂದಾಗಿ ಅಲ್ಲೇ ಭಡ್ತಿ ಪಡೆದು ಪ್ರಾಧ್ಯಾಪಕರು, ಅನಂತರ ಪ್ರಾಚಾರ್ಯರಾಗಿ 1966ರಲ್ಲಿ ನಿವೃತ್ತಿಗೊಂಡರು. ಬೆಂಗಳೂರಿಗೆ ಬಂದು ಕೆಲಕಾಲ ಸರ್ಕಾರದ ಸಾಹಿತ್ಯ ಸಂಸ್ಕೃತಿ ಇಲಾಖೆಯಲ್ಲಿ ನಿರ್ದೇಶಕರಾಗಿ ಸೇವೆ ಸಲ್ಲಿಸಿದರು.

ಸಾಹಿತ್ಯ ಕ್ಷೇತ್ರದಲ್ಲಲ್ಲದೆ ಪತ್ರಿಕೋದ್ಯಮದತ್ತಲೂ ಆಸಕ್ತಿ ಬೆಳೆಸಿಕೊಂಡಿದ್ದ, ಶ್ರೀಯುತರು 1940-43ರ ತನಕ 'ಜೀವನ' ಪತ್ರಿಕೆಯ ಸಂಪಾದಕರಾಗಿ ಪತ್ರಿಕಾಕ್ಷೇತ್ರಕ್ಕೂ ಅಪೂರ್ವ ಸೇವೆ ಸಲ್ಲಿಸಿದ್ದಾರೆ. 'ಜಯಕರ್ನಾಟಕ', 'ಜೀವನ' ಪತ್ರಿಕೆಗಳೊಡನೆಯೂ ಇವರು ಬಹುಕಾಲ ಸಂಪರ್ಕವಿರಿಸಿಕೊಂಡಿದ್ದರು.

ಸಾಂಗಲಿಯಿಂದ ನಿವೃತ್ತರಾದ ಮೇಲೆ ಬೆಂಗಳೂರಿಗೆ ಬಂದು ನೆಲೆಸಿದ ಮುಗಳಿಯವರು 1967ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದು ಅಧಿಕಾರ ಸ್ವೀಕರಿಸಿ ಮೂರು ವರ್ಷಕಾಲ ಯಶಸ್ವಿಯಾಗಿ ಆ ಹುದ್ದೆಯನ್ನು ನಿರ್ವಹಿಸಿ ಅನಂತರ 1970-73ರ ವರೆಗೆ ಯು.ಜಿ.ಸಿ ಪ್ರಾಧ್ಯಾಪಕರಾಗಿ ಸಂಶೋಧನೆ ನಡೆಸಿ 'ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು' ಎಂಬ ಶ್ರೇಷ್ಠ ಗ್ರಂಥವನ್ನು ರಚಿಸಿದರು. ಯು.ಜಿ.ಸಿ ಪ್ರಾಧ್ಯಾಪಕರ ಹುದ್ದೆಯ ಅವಧಿ ಮುಗಿದ ನಂತರವೂ ಬೆಂಗಳೂರು ವಿಶ್ವವಿದ್ಯಾನಿಲಯವು ಇವರನ್ನು 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ರಚನೆ ಯೋಜನೆಯ ಕಾರ್ಯ ನಿರ್ವಾಹಕ ಸಂಪಾದಕರಾಗಿ ನೇಮಿಸಿತು. ಇದು ಅವರ ಪ್ರಗಲ್ಭ ವಿದ್ವತ್ ಮತ್ತು ಪ್ರತಿಭೆಗೆ ಅಪೂರ್ವ ಸಾಕ್ಷಿಯಾಗಿದೆ.

ಮುಗಳಿಯವರ ಜೀವನದಲ್ಲಿ ಸಾಂಗಲಿಯ ವಿಲ್ಲಿಂಗ್‌ಡನ್ ಕಾಲೇಜಿನಲ್ಲಿದ್ದ ಅವಧಿ ಚಿರಸ್ಮರಣೀಯ ದಿನಗಳಾಗಿದ್ದವು. ಅಲ್ಲೇ ಅವರಿಗೆ ಡಾ||ವಿ.ಕೃ. ಗೋಕಾಕ್‌ರ ಸ್ನೇಹ ಲಭಿಸಿದ್ದುದು. ಅವರು ಆಂಗ್ಲ ಪ್ರಾಧ್ಯಾಪಕರಾಗಿ ಕಾಲೇಜಿನಲ್ಲಿ ನೇಮಕಗೊಂಡಿದ್ದರು. ಇವರಿಬ್ಬರ ಮಧುರ ಸ್ನೇಹದ ಕುಡಿಯಾಗಿ ಅಲ್ಲೇ 'ವರುಣಕುಂಜ' ಜನ್ಮ ತಾಳಿದ್ದುದು. ಯುವ ಪೀಳಿಗೆಯ ಲೇಖಕರೊಡನೆ ಸೇರಿ ಮುಕ್ತ ವಾತಾವರಣದಲ್ಲಿ ನಕ್ಕು ನಲಿಯುವ ಹಾಗೂ ಗಂಭೀರ ಚರ್ಚೆ ಮಾಡುವ ಸಂದರ್ಭಗಳು ಒದಗಿಬಂದು. ಅವರಲ್ಲಿ

ಕನ್ನಡಾಭಿಮಾನವನ್ನು ಉದ್ರೇಕಿಸಲು ಇವರು ಸಮರ್ಥರಾಗಿದ್ದರು.

ಮುಗಳಿಯವರು ಸಾಂಗಲಿಯಲ್ಲಿದ್ದುಕೊಂಡೇ ಧಾರವಾಡದ ಗೆಳೆಯರ ತಂಡದೊಡನೆ ಸಂಪರ್ಕ ಇರಿಸಿಕೊಂಡಿದ್ದರು. ಈ ಸಂಪರ್ಕದಿಂದಲೇ ಉಪಾಧ್ಯಾಯ ಮುಗಳಿಯವರು ಸಾಹಿತಿಯಾಗಲ್ಲದೆ, ವಿಮರ್ಶಕರಾಗಿಯೂ ರೂಪುಗೊಂಡರು. ಧಾರವಾಡ ಗೆಳೆಯರ ಗುಂಪಿನಲ್ಲಿದ್ದ ವರಕವಿ ಬೇಂದ್ರೆ, ಗೋಕಾಕ್, ಮಧುರ ಚೆನ್ನ, ಆನಂದಕಂದ, ಶಂಬಾ ಜೋಶಿ, ಪ್ರಹ್ಲಾದ ನರೇಗಲ್ಲ ಮುಂತಾದ ಅತಿರಥ ಮಹಾರಥರ ಸ್ನೇಹ ಸಂಪರ್ಕ ಇವರನ್ನು ಬಹುಮುಖ ಪ್ರತಿಭೆಯ ಸಾಹಿತಿಯಾಗಿ ರೂಪಿಸಿತ್ತು.

ಸಾಂಗಲಿಯಲ್ಲಿದ್ದ ಅವಧಿಯಲ್ಲಿ ಇವರು ಗಡಿನಾಡಿನ ಹಲವು ಸಾಹಿತಿಗಳಿಗೆ ಮಾರ್ಗದರ್ಶಕರಾಗಿದ್ದುದಲ್ಲದೆ ಭಾಷಾ ಸೌಹಾರ್ದ ಕಾಪಾಡಲು ಇವರು ಹಲವು ಸಂಸ್ಥೆಗಳನ್ನು ಹುಟ್ಟು ಹಾಕಿದರು. ಮುಖ್ಯವಾದವುಗಳು ಸೇಡಬಾಳದ 'ಮಿರ್ಜಿ ಅಣ್ಣಾರಾಯರ ಶಾಂತಿ ಸೇವಾ ಸದನ', 'ಸಾಂಗಲಿಯ ಕಾವ್ಯ ಪ್ರಕಾಶನ ಸಮಿತಿ', ಶಮನೇ ವಾಡಿಯ 'ಸ್ನೇಹ ಪ್ರಕಾಶನ' ಮುಂತಾದವನ್ನು ಹೆಸರಿಸಬಹುದು.

ಮುಗುಳು ನಗೆ, ತೆಳ್ಳಗಿನ ನಿಲುವು, ಗೌರವವರ್ಣ, ಪ್ರಶಾಂತ ಮುಖ ಮುದ್ರೆ, ನಯವಿನಯದ ನುಡಿಯ ರಸಿಕವ್ಯಕ್ತಿ, ಡಾ॥ರಂ.ಶ್ರೀ. ಮುಗಳಿ ಕನ್ನಡ ಸಾರಸ್ವತ ಲೋಕದ ಚಿರಸ್ಮರಣೀಯ ವ್ಯಕ್ತಿ, ಇವರು ಕಥೆಗಾರರಾಗಿ, ಕಾದಂಬರಿ ರಚನಕಾರರಾಗಿ, ನಾಟಕಕಾರರಾಗಿ, ವಿಮರ್ಶಕರಾಗಿ, ಕವಿಯಾಗಿ, ಸಂಶೋಧಕರಾಗಿ, ಕನ್ನಡ ಸಾಹಿತ್ಯ ಪಥದಲ್ಲಿ ಮುತ್ತು, ರತ್ನ, ಪಚ್ಚೆ, ಮರಕತ, ಹವಳ, ಹುದಿಗಿಸಿದ್ದಾರೆ. ಈ ಪಥದಲ್ಲಿ ಶ್ರಮಿಸುವ ಪಥಿಕನ ರಸಿಕಮನ ತಣಿದು ಮಣಿಯುತ್ತದೆ. ಮುದಗೊಳ್ಳುತ್ತದೆ. ಬುದ್ಧಿ ವಿಕಸಿತಗೊಳ್ಳುತ್ತದೆ.

'ಹೃದಯ ಸಂಪತ್ತು, ಸಂಕಲ್ಪ ಬಲ, ಸೂಕ್ಷದೃಷ್ಟಿ ಇವು ನನಗೆ ಹುಟ್ಟಿನಿಂದ ದೊರೆತ ಸೊತ್ತು', ಎನ್ನುವ ಈ ರಸಿಕರಂಗರು ಸಾಹಿತ್ಯೋದ್ಯಾನದಲ್ಲಿ ವಿವಿಧ ರಂಗುರಂಗಿನ ವೈವಿಧ್ಯಮಯ ಪುಷ್ಪಕಾಶಿಯ ನಿರ್ಮಾಣಕ್ಕೆ ಇವರು ಕಾರಣರಾಗಿದ್ದಾರೆ. ಇವರು ರಚಿಸಿರುವ ಕೃತಿಗಳ ಸಂಖ್ಯೆ ಸುಮಾರು 60. ಇವುಗಳಲ್ಲಿ ಕಾದಂಬರಿ, ಕಥೆ, ಕವನ, ನಾಟಕ, ವಿಮರ್ಶೆ, ಸಂಶೋಧನೆ, ವೈಚಾರಿಕ ಲೇಖನಗಳು, ಜೀವನ ಚಿತ್ರ ಮುಂತಾದುವು ಸೇರಿವೆ. ಇವರು 'ಹೆರಿಟೇಜ್ ಆಫ್ ಕರ್ನಾಟಕ', 'ಹಿಸ್ಟರಿ ಆಫ್ ಕನ್ನಡ ಲಿಟರೇಚರ್' ಎಂಬೆರಡು ಕೃತಿಗಳನ್ನು ಇಂಗ್ಲಿಷ್‌ನಲ್ಲೂ ರಚಿಸಿದ್ದಾರೆ. ಕೈಲಾಸಂ ರವರ 'ಹೋಂ ರೂಲ್' ಮತ್ತು 'ಬಂಡ್ವಾಳಿಲ್ಲದ ಬಡಾಯಿ' ನಾಟಕಗಳನ್ನು ಅನುವಾದಿಸಿ ಪ್ರಕಟಿಸಿದ್ದಾರೆ.

ಇವರು ರಚಿಸಿರುವ ಮುಖ್ಯ ಕೃತಿಗಳು **ಕಾದಂಬರಿಗಳು:** 'ಬಾಳುರಿ' (1934) ಇದು ಇವರ ಚೊಚ್ಚಲ ಕೃತಿ ಇದರಲ್ಲಿ ಬಡತನ, ನಿರುದ್ಯೋಗಳ ಸುಳಿಗೆ ಸಿಲುಕಿ

ನರಳಿದ ಆದರ್ಶವಾದಿಯೊಬ್ಬನ ಚಿತ್ರಣವಿದೆ. 'ಅನ್ನ' ಬರಗಾಲದ ಬವಣೆಯಲ್ಲೂ ಆದರ್ಶ ಮೆರೆಯ ಬಯಸುವ ವ್ಯಕ್ತಿಯ ಚಿತ್ರಣವಿದೆ. ಪ್ರಸ್ತುತ ಇರುವ ಸಮಾಜದ ವಿರುದ್ಧದ ಪ್ರತಿಭಟನೆಯೇ ಈ ಕಾದಂಬರಿಯ ಮೂಲದ್ರವ್ಯವಾಗಿದೆ.

ಪ್ರತಿಭಟನೆ ಕಾವ್ಯ ರೂಪದಲ್ಲೂ ಹೊರಹೊಮ್ಮಿದೆ ಎಂಬುದಕ್ಕೆ ಅಲ್ಲಿನ ಕೆಲ ಪದ್ಯಗಳು:

'ಅನ್ನ! ಅನ್ನ! ಕೊಟ್ಟರೆ ಚೆನ್ನ!
ಕೊಡದಿರೆ ನಾವೂ ನೀವೂ ಸಾವಿನ ಬಾಯಿಗೆ ಅನ್ನ!
ನಮಗಿಲ್ಲದೆ ನೀವುಣ್ಣುವ ತುತ್ತು
ನಮ್ಮಯ ವಿಷಹುಸಿರಿನ ಹೆಬ್ಬಾವಿನ ಹುತ್ತು!

ಕೇಳುವ ಕಿವಿಗೇ ಕೇಳುವುದಿಂತು
ಬರಿಯೊಡಲಿನನಡೆ ಹೆಣಗಳ ರೋಮರೋಮಗಳ ಮಾತು
ಕೇಳದ ಕಿವುಡರು ದೇವರೆ ಇದ್ದರು
ಬಡವರ ಪಾಲಿಗೆ ಕಮರಿದ ಕರುಳಿನ ಕಾಳ್ ರಕ್ಕಸರು

'ಕಾರಣಪುರುಷ'ದಲ್ಲಿ ಬಡತನದ ಹಿನ್ನೆಲೆಯಲ್ಲಿ ಕರ್ನಾಟಕಏಕೀಕರಣ ಸಮಸ್ಯೆ ಕಾದಂಬರಿಯಾಗಿ ಬೆಳೆದಿದೆ. 'ಅಗ್ನಿವರ್ಣ' 1982ರಲ್ಲಿ ರಚಿಸಿದ ಕಾದಂಬರಿ. ಇಲ್ಲಿನ ವಸ್ತು ಹಿಂದಿನ ಮೂರು ಕಾದಂಬರಿಗಳಿಗಿಂತ ತೀರಾ ಭಿನ್ನವಾಗಿದೆ. ದೇಶಿ ಶೈಲಿಯ ಸಂಭಾಷಣೆಯ ಸೊಗಡು ಈ ಎಲ್ಲಾ ಕಾದಂಬರಿಗಳಲ್ಲಿನ ಆಕರ್ಷಕ ಅಂಶವಾಗಿದೆ. ಪಾತ್ರಗಳಲ್ಲಿ ಕಾಣಬರುವ ವೈಚಾರಿಕ ದೃಷ್ಟಿ, ಸನ್ನಿವೇಶಗಳ ಸುಂದರ ಕಲ್ಪನೆ, ಸರಳ ನಿರೂಪಣೆ ಕಾದಂಬರಿಯನ್ನು ಚೆನ್ನಾಗಿ ಓದಿಸಿಕೊಂಡು ಹೋಗುತ್ತವೆ.

**ಕಥಾಸಂಕಲನ:** 'ಕನಸಿನ ಕೆಳದಿ' ಈ ಕಥಾಸಂಕಲನದಲ್ಲಿ ಕನಸಿನ ಕೆಳದಿ, ವಿತಂತು ವೇಶ್ಯೆ, ಕೂಟಪ್ರಶ್ನೆ, ನೀರಿನ ನಾರಪ್ಪ, ವೇದಾಂತಿ, ಮಂಜನ ಮನೆ, ಕಲ್ಯಾಣ ಮಂಟಪ, ಆಯುಷ್ಯರ್ಮಿ ಮುಂತಾಗಿ ಹನ್ನೊಂದು ಕಥೆಗಳಿವೆ. ಕೆಲವಲ್ಲಿ ಘಟನೆಗಳ ಸುರುಳಿ ಪ್ರಧಾನವಾಗಿದ್ದರೆ ಮತ್ತೇ ಕೆಲವಲ್ಲಿ ಸಾಮಾಜಿಕ ನಿತ್ಯದ ಸಮಸ್ಯೆಗಳಿವೆ. ಇವೆಲ್ಲವುಗಳಲ್ಲೂ ಕಲ್ಪನೆ ಕೆನೆಗಟ್ಟಿದಂತಿದೆ. ನಿರೂಪಣಾ ಸಾಮರ್ಥ್ಯ ಮೆಚ್ಚುವಂತಿದೆ.

**ಕವನಸಂಕಲನಗಳು:** ಇದೇ ಇವರ ಸಾಹಿತ್ಯದ ಪ್ರಮುಖ ಪ್ರಕಾರ. ಸೃಜನಶಕ್ತಿ ಮೈತಳೆದು, ಮೆರೆದಿರುವುದನ್ನು ಇವರೆಲ್ಲಾ ಕವನಗಳಲ್ಲಿ ಕಾಣಬಹುದಾಗಿದೆ. ನವೋದಯ ಕಾಲದ ಕವಿಗಳಿಗೆ ಮಾದರಿಯಾಗಿದ್ದಾರೆ. ಪರಿಪಕ್ವ ಭಾವ, ನಾದ ವೈವಿಧ್ಯ ಲಾಸ್ಯವೆಸಗುತ್ತಿರುವುದಕ್ಕೆ 'ಮಂದಾರ ಹೂವಿನ' ಕೆಲವು ಕವನಗಳನ್ನು ಉದಾಹರಿಸಲಾಗಿದೆ.

"ಬಂದಾರ ತಂದಾರ ಮಂದಾರ ಹೂವಾ
ಇಂದ್ರನ ನಂದನದ ಪೂವಾಡಗಿತ್ತೇರು
ಒಂದಾರ ಕೊಳ್ಳೀರೊ ಮಂದಾರ ಎಂದು
ಅಂದಾರ ಇಂದ್ರವನ ನಂದನದ ಚೆನ್ನೇರು
ಅಂದಾರ ಇಂದ್ರನ ಬಳಿಗೋಡಿ ಹೋಗಿ
ಮಂದಾರ ಹೂವನ್ನು ಒಂದಾರ ಕೊಳಲಿಲ್ಲ
ಒಂದಾರ ಕೊಳಲಿಲ್ಲ ಲೋಕದ ಮಂದಿ
ನಿಂದಾವ ಲೋಕದ ಬಲುಹೂವು ಎಂದೇನೊ!"

'ನೆಳಲಿನ ತಂಪೇ' ಕವನದಲ್ಲಿ ಸೃಜನಶೀಲ ಚೈತನ್ಯ, ಕಾವ್ಯ ಸೃಷ್ಟಿಯ ಕ್ರಿಯೆಯಲ್ಲಿ ಅನನ್ಯ ರೀತಿಯಲ್ಲಿ ತೊಡಗಿರುವುದನ್ನು ಗುರುತಿಸುತ್ತೇವೆ.

'ನೆಳಲಿನ ತಂಪೇ ನಲಿವಿನ ಜೊಂಪೇ ಓ ಸವಿ ಸೊಂಪೇ!
ನಿನ್ನನೆ ಬಯಸಿ ಎಲ್ಲೆಡೆ ಅರಸಿ ಬೆವರನು ಸುರಿಸಿ
ಮೌನದ ಮಾಮರ ದಡಿಯಲಿ ಒರಗಲು ಧಾವಿಸಿ ಬಂದೆ
ಧ್ಯಾನದ ತಾನದ ತಲ್ಲೀನತೆಯಲಿ ನಿನ್ನೆಯ ಬಳಿಸಂದೆ

ಇದರೆಲ್ಲ ಕವನಗಳಲ್ಲಿ ಹೀಗೆ ಗೇಯತೆಯ ಸೊಬಗಿ ನೊಂದಿಗೆ ಭಾಷೆಯ ಲಾಲಿತ್ಯವೂ ಸುಮಧುರವಾಗಿ ಮಿಳಿತಗೊಂಡಿರುವುದನ್ನು ಕಾಣುತ್ತೇವೆ.

ಇವರು ರಚಿಸಿರುವ ಕವನ ಸಂಕಲನಗಳು ಆರು, ಬಾಸಿಗ, ಅಪಾರ–ಕರುಣೆ, ಓಂಶಾಂತಿ, ನಿತ್ಯ ನಿರಂತರ, ನವ ಮಾನವ, ಮತ್ತು ಮಣಿಮಾಲೆ.

'ಮಂದಾರಹೂವು' ಕವಿತೆ ಆಕಾಶವಾಣಿ ಕೇಂದ್ರಗಳಿಂದ ಮತ್ತೇ ಮತ್ತೇ ಪ್ರಸಾರಗೊಂಡು ಅತ್ಯಂತ ಜನಪ್ರಿಯವಾಗಿದೆ.

ಮುಗಳಿಯವರು 'ತಮ್ಮದು ಭಕ್ತಿಕವಿಯ ಅಂತರಂಗ' ಎಂದು ಹೇಳಿ ಕೊಂಡಿದ್ದಾರೆ. ಜೀವನದ ಸುಖ ದುಃಖ, ನೋವು ನಲಿವುಗಳನ್ನು ಭಕ್ತನ ಸಂವೇದನೆಯ ಮೂಲಕ ಅಭಿವ್ಯಕ್ತಿಗೊಳಿಸಲು ಸುಕುಮಾರ ಶೈಲಿಯನ್ನು ಅವಲಂಬಿಸಿದ್ದಾರೆ. ಜೀವನಾನುಭವ ಹೆಪ್ಪುಗಟ್ಟಿ ಕವಿತೆಗಳಾಗಿವೆ.

**ನಾಟಕಗಳು:** ನಾಟಕಕಾರರಾಗಿಯೂ ಇವರು ಯಶಸ್ವಿಯಾಗಿದ್ದಾರೆ. ತಾವೇ ಬರೆದ ನಾಟಕಗಳನ್ನು ಹೃದಯಂಗಮವಾಗಿ ರಂಗಮಂಟಪದ ಮೇಲೆ ಪ್ರದರ್ಶಿಸಿ ಅಪಾರ ಜನಮನ್ನಣೆ ಗಳಿಸಿದ್ದಾರೆ. ಇವರು ರಚಿಸಿರುವ ಮುಖ್ಯ ನಾಟಕಗಳು: ಸೇವಾಪ್ರದೀಪ, ಅಕ್ಕಮಹಾದೇವಿ, ಪಾವನ ಪಾವಕ, ನಾಮಧಾರಿ, ವಿಜಯಸಾಮ್ರಾಜ್ಯ,

ಮನೋರಾಜ್ಯ, ಧನಂಜಯ, ಅಪೂರ್ವ, 'ಪಾವನಪಾವಕ' ನಾಲ್ಕು ನಾಟಕಗಳ ಸಂಕಲನ. ಭರತನ ಕನಸುಗಳನ್ನು ವಿನೂತನ ಶೈಲಿಯಲ್ಲಿ ದೃಶ್ಯರೂಪಕಗಳಾಗಿ ನಿರೂಪಿಸಲಾಗಿದೆ. 'ಸೇವಾಪ್ರದೀಪ ಮತ್ತು 'ವಿಜಯಿ ಸಾಮ್ರಾಜ್ಯ' ವಿಜಯನಗರ ಕುರಿತ ಐತಿಹಾಸಿಕ ನಾಟಕಗಳು. 'ನಾಮಧಾರಿ' ಹಾಸ್ಯಪ್ರಧಾನ ನಾಟಕ.

**ವಿಮರ್ಶೆ:** ಸೃಜನಾತ್ಮಕ ಸಾಹಿತಿಯಾಗಿ ಇವರು ಹೆಸರುಗಳಿಸಿದ್ದಕ್ಕಿಂತ ಹೆಚ್ಚಿಗೆ ಸಹೃದಯ ವಿಮರ್ಶಕರಾಗಿ ಸಾಹಿತ್ಯಚರಿತ್ರೆ ರಚನಕಾರರಾಗಿ ಪ್ರಸಿದ್ಧಿಗೆ ಬಂದಿದ್ದಾರೆ. ಹಳೆಯ ಪೀಳಿಗೆಯ ವಿದ್ವಾಂಸರುಗಳಾದ ಗೋವಿಂದ ಪೈ; ತೀ.ನಂ.ಶ್ರೀಕಂಠಯ್ಯ; ಡಿ.ಎಲ್. ನರಸಿಂಹಾಚಾರ್, ಮುಳಿಯ ತಿಮ್ಮಪ್ಪಯ್ಯ ನವರ ಸಂಶೋಧನಾ ಕಾರ್ಯಗಳಿಂದ ಪ್ರಭಾವಿತರಾಗಿದ್ದ ಮುಗಳಿಯವರು 'ರನ್ನನಕೃತಿರತ್ನ',; ತವನಿಧಿ, ಸಾಹಿತ್ಯೋಪಾಸನೆ, ಕನ್ನಡ ಸಾಹಿತ್ಯ ಚರಿತ್ರೆ, ಪ್ರಾಚೀನ ಸಾಹಿತ್ಯ ರೂಪಗಳು, ಕನ್ನಡ ಸಾಹಿತ್ಯದಲ್ಲಿ ಸರಸ್ವತಿಯ ದರ್ಶನ ಮುಂತಾದ ಮೌಲ್ಯಾಧಾರಿತ ಕೃತಿಗಳನ್ನು ವಿಮರ್ಶಾಕ್ಷೇತ್ರಕ್ಕೆ ಅರ್ಪಿಸಿದ್ದಾರೆ. ಸಾಹಿತ್ಯ ವಿಮರ್ಶೆಯ ಮಾರ್ಗದರ್ಶನ ಸೂಚಿಗಳು' ಮಾಹಿತಿಯ ಕಣಜವೆಂದು ಖ್ಯಾತಿಗಳಿಸಿವೆ.

ಮುಗಳಿಯವರು ಸಾಂಗಲಿಯಲ್ಲಿದ್ದಾಗಲೇ ತಮ್ಮ ಉಪನ್ಯಾಸಕ ಹುದ್ದೆಯಲ್ಲಿ ಗಳಿಸಿದ ಅಪಾರ ವಿದ್ವತ್ತು ಹಾಗೂ ಅನುಭವವನ್ನು ಕೂಡಿಸಿ ಸಾಹಿತ್ಯಾಸಕ್ತ ವಿದ್ಯಾರ್ಥಿಗಳಿಗೆ ಅದುವರೆಗೆ ಯಾವ ಪತ್ಯದಲ್ಲೂ ಒಟ್ಟಿಗೆ ಲಭ್ಯವಿರದ ಮಾಹಿತಿಯನ್ನು ಕಲೆಹಾಕಿ ಅವರ ಆಚಾರ್ಯ ಕೃತಿಯಾದ 'ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ ನೀಡಿರುತ್ತಾರೆ. ಇದು ವಿದ್ಯಾರ್ಥಿಗಳಿಗಲ್ಲದೆ ಸಮಸ್ತ ಕನ್ನಡ ಜನತೆಯ ಪ್ರೀತಿ, ಆದರಕ್ಕೆ ಭಾಜನವಾಗಿದೆ. ಪುಣೆ ವಿಶ್ವವಿದ್ಯಾನಿಲಯ ಇವರ ಈ ವಿದ್ವತ್ ಕೃತಿಗೆ ಡಿ.ಲಿಟ್ ನೀಡಿ ಗೌರವಿಸಿದೆ. ಪುಣೆ ವಿಶ್ವವಿದ್ಯಾನಿಲಯದ ಡಿ.ಲಿಟ್ ಪಡೆದ ಪ್ರಥಮ ಕನ್ನಡಿಗರಾದ ಹೆಗ್ಗಳಿಕೆ ಇವರದು. ಇದೇ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಸಹ ಪ್ರಶಸ್ತಿ ನೀಡಿ ಪುರಸ್ಕರಿಸಿದೆ. ಇದರಲ್ಲಿ ಪ್ರಾಚೀನ ಕಾವ್ಯ, ಶಾಸ್ತ್ರಗಳ ಜ್ಞಾನ, ಇತಿಹಾಸ ಪ್ರಜ್ಞೆ, ಭಾರತೀಯ ರಸ ಸಂಪ್ರದಾಯದ ತಿಳುವಳಿಕೆ, ಮೌಲ್ಯಮಾಪನ ಸಾಮರ್ಥ್ಯದ ಬಗ್ಗೆ ವಿದ್ವತ್‌ಪೂರ್ಣ ವಿಶ್ಲೇಷಣೆ ನಡೆದಿದೆ.

ಮುಗಳಿಯವರು ವೈಚಾರಿಕ ಕ್ಷೇತ್ರಕ್ಕೂ ಅಮೂಲ್ಯ ಕೊಡುಗೆಗಳನ್ನು ನೀಡಿ ಸಂಪನ್ನ ಗೊಳಿಸಿದ್ದಾರೆ. ಮುಖ್ಯವಾದ ಕೃತಿಗಳು: 'ಮಾತೆಂಬುದು-ಜ್ಯೋತಿರ್ಲಿಂಗ'. 'ಕನ್ನಡದ ಕಲೆ', 'ಶಿಕ್ಷಣದ ಮುನ್ನಡೆ', 'ಕನ್ನಡ ನಾಡಿನಲ್ಲಿ ಪರೋಪಕಾರ', 'ಕನ್ನಡ ನುಡಿ ತನ್ನ ಕಾಲ ಮೇಲೆ ತಾ ನಿಲ್ಲ ಬಹುದೆ?' 'ಕಟುಸತ್ಯ ಪಾರ್ಥೀಯ' ಮುಂತಾದವು.

ಜೀವನ ಚರಿತ್ರ ರಚನಾ ಕ್ಷೇತ್ರಕ್ಕೂ ಇವರು ದುಡಿದಿದ್ದಾರೆ. 'ಜೀವನ ರಸಿಕ', 'ಅರವಿಂದ-ಮಕರಂದ', 'ಶಾಂತಕವಿ', ಮುಂತಾದ ಕೃತಿಗಳನ್ನು ನೀಡಿರುತ್ತಾರೆ.

ಸಾಹಿತ್ಯ ಕ್ಷೇತ್ರವಲ್ಲದೆ ಸಾಮಾಜಿಕ ಜೀವನದಲ್ಲೂ ಮುಗಳಿಯವರ ದುಡಿಮೆ ಅಪೂರ್ವವಾದುದು. ಡೆಕ್ಕನ್ ಎಜುಕೇಷನ್ ಸೊಸೈಟಿಯ ಆಜೀವ ಸದಸ್ಯತ್ವ ಇವರಿಗೆ ಲಭ್ಯವಾಗಿತ್ತು. 1964ರಲ್ಲಿ ಇಂಕ್ಲಾ ಸಂಸ್ಥೆಯ ಪರವಾಗಿ ಸ್ವಿಜರ್‌ಲೆಂಡ್‌ನ ಫ್ರಿಬುವಿನಲ್ಲಿ ಸೇರಿದ್ದ ಜಾಗತಿಕ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿ ತಮ್ಮ ಪ್ರೌಢ ಪ್ರಬಂಧದಿಂದ ವಿದೇಶದಲ್ಲಿ ಕನ್ನಡದ ಕೀರ್ತಿಯನ್ನು ಬೆಳಗಿಸಿದ್ದರು. ಕೇಂದ್ರ ಸಾಹಿತ್ಯ ಅಕಾಡೆಮಿಯ ಕಾರ್ಯಕಾರಿ ಸಮಿತಿಯಲ್ಲಿ ಹತ್ತು ವರ್ಷ ಸೇವೆ ಸಲ್ಲಿಸಿ ಅಕಾಡೆಮಿಯ 'ಮನಃಸಾಕ್ಷಿಯ ಸಂರಕ್ಷಕ' ಎಂಬ ಪ್ರಶಂಸೆಗೆ ಪಾತ್ರರಾಗಿದ್ದರು.

ಇವರ ಜೀವನದ ಮಹತ್ವದ ಹೆಗ್ಗುರುತುಗಳು ಅಗಣಿತ, ಮುಖ್ಯವಾದವುಗಳು: ಹೈದರಾಬಾದಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ನಾಟಕ ಗೋಷ್ಠಿಯ ಅಧ್ಯಕ್ಷತೆ; ಮೈಸೂರಿನ ಸಮ್ಮೇಳನದಲ್ಲಿ ವಿಮರ್ಶನ ಗೋಷ್ಠಿಯ ಅಧ್ಯಕ್ಷತೆ; ಧಾರವಾಡದ ಸಮ್ಮೇಳನದಲ್ಲಿ 19ನೇ ಶತಮಾನದ ಸಾಹಿತ್ಯ ವಿಮರ್ಶೆ ಗೋಷ್ಠಿಯ ಅಧ್ಯಕ್ಷತೆ; 1963ರಲ್ಲಿ ತುಮಕೂರು ಜಿಲ್ಲೆಯ ಸಿದ್ಧಗಂಗಾ ಕ್ಷೇತ್ರದಲ್ಲಿ ಜರುಗಿದ 44ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದುದು ಇವರ ವಿದ್ವತ್ತು ಹಾಗೂ ಪ್ರತಿಭೆಗೆ ಸಂದ ಪುರಸ್ಕಾರಗಳಾಗಿವೆ.

**ಅಧ್ಯಕ್ಷ ಪೀಠದಿಂದ ಅಂದು ಮುಗಳಿಯವರು ನುಡಿದಿದ್ದರು :**

'ನಮ್ಮ ಭಾಷೆಯ ವಿಷಯದಲ್ಲಿ ನಿರಭಿಮಾನವೂ ಸಲ್ಲದು, ದುರಭಿಮಾನವೂ ಸಲ್ಲದು, ಸದಭಿಮಾನವಿರಬೇಕು. ಈ ಸದಭಿಮಾನವೂ ನಮ್ಮ ಭಾಷೆಯ, ಸಾಹಿತ್ಯ ಸಂಸ್ಕೃತಿಗಳ ಜ್ಞಾನದಿಂದ ಪ್ರೇರಿತವಾದದ್ದಿರಬೇಕು. ಕೇವಲ ಭಾವನೆಯ ಗುರುಳೆಯ ಮೇಲೆ ಕಟ್ಟಿದ ಗಾಳಿಗೋಪುರವಾಗಿರಬಾರದು.

'...... ಸಾಹಿತ್ಯ ಮಂದಿರಕ್ಕೆ ಮೂಲಆಧಾರ ಭಾಷೆ. ಅದರ ಶಿಖರ ಸಂಸ್ಕೃತಿ. ಭಾಷೆ, ಸಾಹಿತ್ಯ, ಸಂಸ್ಕೃತಿ ಈ ಮುಪ್ಪರಿಯ ಮುನ್ನಡೆ, ಪರಿಷತ್ತು ಸಮ್ಮೇಳನಗಳ ಹಿರಿಯ ಗುರಿಯಾಗಿರಬೇಕು......'

'ಕನ್ನಡ ಸ್ವರೂಪದ ಜ್ಞಾನ, ಜ್ಞಾನ ಪೂರ್ವಕವಾದ ಸದಭಿಮಾನ; ಸದಭಿಮಾನದಿಂದ ಪ್ರೇರಿತವಾದ ನಡೆನುಡಿ, ಇದೇ ಕನ್ನಡಿಗರನ್ನು ಒಂದುಗೂಡಿಸುವ ಶಕ್ತಿ. ಸರ್ವವ್ಯಾಪಿಯಾಗಿ ಇದು ಜನರಲ್ಲಿ ಜಾಗೃತವಾದರೆ, ನಾಡಿನ ತುಂಬೆಲ್ಲ ಮಿಂಚಿನಂತೆ ಹರಿದಾಡಿದ ದೋಷಗಳನ್ನೆಲ್ಲಾ ಸಿಡಿಲಿನಂತೆ ಅದು ನಾಶಗೊಳಿಸುತ್ತದೆ. ಗುಣಗಳೆಲ್ಲಾ ಬೆಳಕಿಗೆ ತರುತ್ತದೆ......'

'ಕನ್ನಡಿಗರನ್ನು ಒಂದುಗೂಡಿಸುವ ಅಪೂರ್ವಶಕ್ತಿ ಕನ್ನಡ ಸಾಹಿತ್ಯ ಪರಿಷತ್ತಿಗಿದೆ. ಕನ್ನಡಭಾಷೆಯಲ್ಲಿ ಅದು ಅಡಕವಾಗಿದೆ. ಸಂಸ್ಕೃತಿಯಲ್ಲಿನ ಸುಪ್ತಚೇತನ ಶಕ್ತಿ ಇದನ್ನೆಲ್ಲಾ

ಸದಾ ಜಾಗೃತ ಸ್ಥಿತಿಯಲ್ಲಿರಿಸಲು ಶಕ್ತವಾಗಿದೆ.' ಎಂಬ ನಿತ್ಯ ಸತ್ಯ ಅವರ ಮಾತುಗಳಲ್ಲಿ ಸ್ಫುರಿಸಿತ್ತು.

'ಕನ್ನಡವು ಆಡಳಿತ ಭಾಷೆಯಾಗಿರಬೇಕೆಂಬುದೇ ಕರ್ನಾಟಕ ಪ್ರಾಂತ ರಚನೆಯ ಮೂಲ ಮಂತ್ರ. ಹಳ್ಳಿ, ಹೋಬಳಿ, ಜಿಲ್ಲಾ ಮಟ್ಟದಲ್ಲಿ ಕನ್ನಡ ಆಡಳಿತ ಭಾಷೆಯಾದರೆ ಸಾಲದು, ವಿಧಾನಸೌಧದಲ್ಲಿ ಅದು ಆಡಳಿತ ಭಾಷೆಯಾಗಿ ವಿಜೃಂಭಿಸಬೇಕು. ವಿಶ್ವವಿದ್ಯಾಲಯದ ಪಾಠ ಪ್ರವಚನಗಳು, ನ್ಯಾಯಲಯಗಳ ಕಾರ್ಯಕಲಾಪಗಳು ಕನ್ನಡದಲ್ಲೇ ನಡೆಯಬೇಕು. ಇದನ್ನೇ ಮುಗಳಿ ಹಂಬಲಿಸಿದ್ದರು. ಇದು ಸಾಧ್ಯವಾದಾಗಲೇ ಡಾ॥ ಮುಗಳಿಯವರ ಆತ್ಮಕ್ಕೆ ಶಾಂತಿ. ನಮ್ಮ ಸಮಸ್ಯೆಗಳಿಗೆ ಮುಕ್ತಿ. ಇದನ್ನು ಸಾಧಿಸುವ ಹೊಣೆಗಾರಿಕೆ ಪ್ರತಿಯೊಬ್ಬ ಕನ್ನಡಿಗನದು.

ಕನ್ನಡ, ಮರಾಠಾ ಭಾಷೆಗಳೆರಡರಲ್ಲೂ ಸರಿಸಮನಾದ ಪ್ರಭುತ್ವ ಹೊಂದಿದ್ದ ಡಾ॥ಮುಗಳಿ ಭಾಷಾ ಬಾಂಧವ್ಯ ಅಭಿವೃದ್ಧಿಗಾಗಿ ಅಹರ್ನಿಶಿ ಶ್ರಮಿಸಿದ್ದರು. ಭಾಷೆ ಇರುವುದು ಕೂಡಿಸುವುದಕ್ಕಾಗಿ, ಕೆಡಿಸುವುದಕ್ಕಲ್ಲ ಎಂಬುದು ಅವರ ನಿಶ್ಚಿತ ನಿಲುವಾಗಿತ್ತು. ಈ ಆದರ್ಶ ಸಾಧನೆಗಾಗಿಯೇ ಜೀವ ತೇಯ್ದ ಈ ರಸಿಕರಂಗ ನಿಧನರಾದದ್ದು ಫೆಬ್ರವರಿ 20, 1993.

ಡಾ॥ರಂ.ಶ್ರೀ. ಮುಗಳಿ ತಮ್ಮ ಪ್ರಗಲ್ಭ ಪ್ರತಿಭೆಯಿಂದ, ಮಾದರಿಯಾದ ಆದರ್ಶ ಜೀವನದಿಂದ, ಕನ್ನಡ ಜನಮನದಲ್ಲಿ ಇವರು ಜೀವಂತ ಉಳಿದಿದ್ದಾರೆ. ಯುವಜನಕ್ಕೆ ಸ್ಫೂರ್ತಿಯ ಸೆಲೆಯಾಗಿದ್ದಾರೆ.

* * *

# 9. ಟೀಕೆ-ಟಿಪ್ಪಣೆಗಳು

## (ಅ) 'ಬೆಂಗಳೂರು' ರೂಪನಿಷ್ಪತ್ತಿ – ಪ್ರತಿಕ್ರಿಯೆ

ತಿರುಮಲೆ ಶ್ರೀರಂಗಾಚಾರ್ಯರು 'ಬ್ಯಾಂಗಳೂರ್ ಅಲ್ಲ – ಬೆಂಗಳೂರು' ಲೇಖನದಲ್ಲಿ ('ಲೋಚನ' ಜೂನ್-ಡಿಸೆಂಬರ್ 2004) ಬೆಂಗಳೂರು ಎಂಬ ಮಾತಿನ – ರೂಪದ ನಿಷ್ಪತ್ತಿ ಬಗ್ಗೆ ಚಿಂತನೆ ಮಾಡಿದ್ದಾರೆ.

ಬೆಂಗುಳ+ಊರು ಬೆಂಗುಳ

1. ಬೆಳ್+ಕುಳ=ಬೆಂಗುಳ
2. ಬಿಳಿದು+ಕುಳ=ಬೆಂಗುಳ
3. ಬೆಸಂ+ಕುಳ ಬೆಂಗುಳ

ಎಂದು ಬರೆಯುತ್ತಾ ಕುಳ ಎಂದರೆ ಆಳು ಎಂಬರ್ಥವಿದೆ ಎಂದು ಬರೆದಿದ್ದಾರೆ.

'ಭಾರಿ ಕುಳ' ಅಂದರೆ ಆರ್ಥಿಕವಾಗಿ ವರ್ಚಸ್ಸಿಯಾದ ಮನುಷ್ಯ

ತುಳುಭಾಷೆಯಲ್ಲಿ ಕುಳ ಅಂದರೆ ಸಮೃದ್ಧಿ.

'ಪಿಲಿ ಕುಳ' ಎಂದರೆ ಪಿಲಿಗಳು ಸಮೃದ್ಧಿಯಾಗಿವೆ ಎಂದು.

ಕುಳ ಸಮೃದ್ಧಿಯಾದ ಭೂಮಿ. ತೇವಾಂಶ ಅಥವಾ ನೀರಿನಾಶ್ರಯವಿರುವ ಫಲವತ್ತಾದ ಭೂಮಿ.

ವಿಟ್ಲಸೀಮೆಯಲ್ಲಿ ಒಂದು ಮನೆಯ ಹೆಸರೇ 'ಕುಳ' ಎಂದು. ಊರು ಕುಳ. ನೀರಿನಾಶ್ರಯವಿದ್ದು ಫಲವತ್ತಾಗಿದೆ 'ಭೂಮಿ'. ಅದಕ್ಕೆ ಅದು 'ಕುಳ'. ಈ ಪದ ನಿಷ್ಪತ್ತಿಯಿಂದ ಬೆಂಗಳೂರು ಹೆಸರಿನ ಮೂಲ ಹುಡುಕ ಹೊರಟರೆ ಇದು ಬೆಂಗಾಡು ಅಲ್ಲ. ಕುಳ ಭೂಮಿ ಎಂದು ಹೇಳಬಹುದು. ಇಲ್ಲಿಯ ನಿಸರ್ಗ ಕೆರೆಗಳು ಈ ಮಾತಿಗೆ ಪೂರಕವಾಗಿದೆ. ಬೆಂಗಾಡಲ್ಲಿ ಯಾರೂ ನಗರ ನಿರ್ಮಿಸುವುದಿಲ್ಲ. ಈ ಹಿನ್ನೆಲೆಯಿಂದ ಈ ಪದ ನಿಷ್ಪತ್ತಿಯನ್ನು ಪಂಡಿತ ವರ್ಗ ಗಮನಿಸಬೇಕು ಎಂದು ಸೂಚಿಸಬಯಸುತ್ತೇನೆ.

**– ಇಂದಿರಾ ಹೆಗ್ಗಡೆ**

## (ಆ) ವಿದ್ವಾನ್ ಟಿ.ಕೇಶವಭಟ್ಟರು ಮತ್ತು 'ಲೋಚನ'

ಕನ್ನಡ ಸಾಹಿತ್ಯಲೋಕದಲ್ಲಿ ಮಿನುಗುತಾರೆಯಾಗಿರುವ ವಿದ್ವಾನ್ ಟಿ. ಕೇಶವಭಟ್ಟರು ವ್ಯಾಕರಣ, ಛಂದಸ್ಸು, ಗ್ರಂಥಸಂಪಾದನೆ, ಯಕ್ಷಗಾನ ಮತ್ತು ಪ್ರಾಚೀನ ಸಾಹಿತ್ಯ ಅಧ್ಯಯನ ಕ್ಷೇತ್ರಗಳಲ್ಲಿ ಅಗ್ರಗಣ್ಯ ಪಾಂಡಿತ್ಯವನ್ನು ಹೊಂದಿದ್ದ ಶ್ರೇಷ್ಠ ವಿದ್ವಾಂಸರಾಗಿದ್ದರು. ಇಂತಹ ಘನವಿದ್ವಾಂಸರ ಸಂಗದಲ್ಲಿ ಇಪ್ಪತ್ತು ವರ್ಷಗಳನ್ನು ಕಳೆದಿದ್ದೇನೆ ಎಂಬುದೇ ನನ್ನ ಜೀವನದಲ್ಲಿ ಒಂದು ಅವಿಸ್ಮರಣೀಯ ನೆನಪು. ಇದು ನನಗೆ ಕಟ್ಟಿಕೊಟ್ಟ ಅನುಭವ ಮತ್ತು ಅರಿವು ಅನನ್ಯವಾದದ್ದು.

ವಿದ್ವಾನ್ ಕೇಶವಭಟ್ಟರನ್ನು ನೆನಪಿಸಿಕೊಳ್ಳುತ್ತಿದ್ದಂತೆ ಮೃದುಮಧುರ ಮಂದಹಾಸದ ಮುಖ ನನ್ನ ಮುಂದೆ ಸುಳಿಯುತ್ತದೆ. ಮೇಲ್ನೋಟಕ್ಕೆ ಅತ್ಯಂತ ಸರಳವಾಗಿ ಕಂಡರೂ ಅವರೊಂದಿಗೆ ಬೆರೆಯುತ್ತಿದ್ದಂತೆ ನಮಗಾಗುವ ಆಳವಾದ ವಿದ್ವತ್ತು ನಮ್ಮನ್ನು ಬೆರಗುಗೊಳಿಸುತ್ತದೆ. ಸಹಜವಾಗಿ ಪ್ರಾಚೀನ ಸಾಹಿತ್ಯದತ್ತ ಒಲವಿದ್ದ ನನಗೆ ಕೇಶವಭಟ್ಟರ ಉಪನ್ಯಾಸ-ಭಾಷಣ ಆಗಾಗ್ಗೆ ಕಿವಿಗೆ ಬೀಳುತ್ತಿತ್ತು. ಸಭೆ-ಸಮಾರಂಭಗಳಲ್ಲಿ ದೂರದಿಂದಲೇ ನೋಡಿ ಗೌರವವಿಟ್ಟುಕೊಂಡಿದ್ದೆ. ಇವರೊಂದಿಗೆ ನನಗೆ ನಿಕಟವಾದ ಸಂಬಂಧ ಬೆಳೆದದ್ದು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ಮೂಲಕ.

1986ರಿಂದ ಪ್ರತಿಷ್ಠಾನದ ಷಾಣ್ಮಾಸಿಕ ವಿದ್ವತ್ ಪತ್ರಿಕೆಯಾದ 'ಕರ್ನಾಟಕ ಲೋಚನ' ಪತ್ರಿಕೆಯ ಸಂಪಾದಕರಾಗಿ ಟಿ.ಕೇಶವಭಟ್ಟರು ನೇಮಕವಾದ ಮೇಲೆ ಪ್ರತಿಷ್ಠಾನದಲ್ಲಿ ಸಂಸ್ಥಾಪಕರಾದ ಎಂ.ವಿ.ಸೀತಾರಾಮಯ್ಯನವರೊಂದಿಗೆ ಕಾರ್ಯ ನಿರ್ವಹಿಸುತ್ತಿದ್ದ ನನಗೆ ಭಟ್ಟರು ದಿನೇ ದಿನೇ ಹತ್ತಿರವಾಗುತ್ತಾ ಬಂದರು. ಸೀತಾರಾಮಯ್ಯನವರು ಮತ್ತು ಟಿ.ಕೇಶವಭಟ್ಟರು ಪದೇ ಪದೇ ಭೇಟಿಯಾಗಿ ಲೇಖನಗಳ, ವಿದ್ವತ್ ವಿಚಾರಗಳ ಬಗ್ಗೆ ಚರ್ಚಿಸುತ್ತಿದ್ದಾಗಲೆಲ್ಲ ನಾನು ಮೂಕ ಪ್ರೇಕ್ಷಕನಾಗಿರುತ್ತಿದ್ದೆ. ಆ ರಸವತ್ತಾದ ಚರ್ಚೆಗಳ ನನ್ನಲ್ಲಿ ಸಾಹಿತ್ಯದತ್ತ ಒಲವು ಮೂಡಿಸಲು ಪ್ರೇರಣೆಯಾಯಿತು. ಲೋಚನ ಪತ್ರಿಕೆಗಾಗಿ ಪ್ರತಿಷ್ಠಾನದ ವಿಚಾರಗಳನ್ನು ಪಡೆದುಕೊಳ್ಳುವಾಗಲೆಲ್ಲ ನನ್ನೊಂದಿಗೆ ಅವರು ನಡೆದುಕೊಳ್ಳುತ್ತಿದ್ದ ರೀತಿ ನನ್ನಲ್ಲಿ ಆಶ್ಚರ್ಯವನ್ನುಂಟುಮಾಡುತ್ತಿತ್ತು. 65-70 ವರ್ಷಗಳ ಆ ಹಿರಿಯರ ಮುಂದೆ 25-30 ವರ್ಷಗಳ ಬಾಲಕ ನಾನು. ಸಾಹಿತಿಯೂ ಅಲ್ಲದ ಒಬ್ಬ ಸಾಮಾನ್ಯ ಕಾರ್ಯಕರ್ತನಾಗಿದ್ದೆ. ನನ್ನ ಮುಂದೆ ವಿಧೇಯರಾಗಿ ನಿಂತು 'ಗೀತಾಚಾರ್ಯ ಅವರೆ, ನೋಡಿ ಈ ವಿಮರ್ಶೆ ಸರಿ ಇದೆಯೆ, ಈ ವಿಚಾರ ಇಷ್ಟು ಸಾಕೆ' ಎಂಬಿತ್ಯಾದಿ ಕೇಳುತ್ತ, ನನಗೆ ತೋರಿಸುತ್ತಿದ್ದ ಗೌರವದಿಂದ ನಾನು ತುಂಬ ಮುಜಗರಪಟ್ಟು ಕೊಳ್ಳಬೇಕಾಗುತ್ತಿತ್ತು. ಅವರು ಬರುತ್ತಿದ್ದಂತೆಯೇ ನಾನು ಎದ್ದು ನಿಂತು ನಮಸ್ಕಾರ ಹೇಳಿ ಅವರನ್ನು ಕೂಡಿಸಿದ ನಂತರವೇ ನನಗೆ ಸಮಾಧಾನವಾಗುತ್ತಿದ್ದುದು. 'ಸರ್, ನೀವು ಬರೆದದ್ದನ್ನು ನಾನು ನೋಡುವುದೆ !' ಎಂದು ವಿನಯದಿಂದ ನಿರಾಕರಿಸಿದರೆ

'ಹಾಗಲ್ಲ, ಒಬ್ಬರು ಬರೆದದ್ದನ್ನು ಮತ್ತೊಬ್ಬರು ನೋಡುವುದು ಒಳ್ಳೆಯದು. ಒಮ್ಮೆ ನೀವು ನೋಡಿದ ಮೇಲೆ ಸೀತಾರಾಮಯ್ಯನವರಿಗೆ ಕೊಡಿ ಆಯ್ತಾ' ಎಂದು ನಯವಾಗಿ ಮಂದಹಾಸ ಬೀರುತ್ತ ಹೇಳುತ್ತಿದ್ದರು. ಅವರ ನಯ-ವಿನಯ-ಸರಳತೆ-ಸಜ್ಜನಿಕೆಗಳು ನನ್ನನ್ನು ಮೂಕನಾಗಿಸುತ್ತಿದ್ದವು.

1986ರಿಂದ 2000ದವರೆಗೆ ನಿರಂತರವಾಗಿ 14 ವರ್ಷ ಲೋಚನ ವಿದ್ವತ್ ಪತ್ರಿಕೆಗೆ ಸಂಪಾದಕರಾಗಿ ಸೇವೆ ಸಲ್ಲಿಸುವ ಮೂಲಕ ಟಿ. ಕೇಶವಭಟ್ಟರು ಪ್ರತಿಷ್ಠಾನದಂತಹ ವಿದ್ವತ್ ಸಂಸ್ಥೆಗೆ ಒಂದು ಶಕ್ತಿಯಾಗಿದ್ದರೆಂದರೆ ತಪ್ಪಾಗಲಾರದು. ಅವರು ಸಂಪಾದಕರಾಗಿದ್ದ ಕಾರಣದಿಂದಲೇ 'ಲೋಚನ'ಕ್ಕೆ ವಿದ್ವತ್ ಲೋಕದಲ್ಲಿ ವಿಶೇಷವಾಗಿ ಮುನ್ನಡೆಯು ಪ್ರಾಪ್ತವಾಗಿದ್ದದನ್ನು ಅಲ್ಲಗಳೆಯಲಾಗುವುದಿಲ್ಲ. ಒಂದು ಕಡೆ ಎಂ.ವಿ.ಸೀತಾರಾಮಯ್ಯನವರು ಮತ್ತೊಂದು ಕಡೆ ಟಿ.ಕೇಶವಭಟ್ಟರು ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಆಧಾರಸ್ಥಂಭಗಳಾಗಿ, ನಿಂತುಹೋಗಿದ್ದ ವಿದ್ವತ್ ಪತ್ರಿಕೆಗಳ ಪರಂಪರೆಯನ್ನು ಯಶಸ್ವಿಯಾಗಿ ಮುಂದುವರಿಸಿದ ಕೀರ್ತಿಗೆ ಭಾಜನರಾಗಿದ್ದಾರೆ.

ಈ ಇಬ್ಬರು ಮಹನೀಯರು ಹಾಕಿಕೊಟ್ಟ ಮಾರ್ಗದಲ್ಲೆ ಈ ಪತ್ರಿಕೆ ಇಂದಿಗೂ ಮುಂದುವರಿಯುತ್ತಿದ್ದು, ಇವರುಗಳು ತಂದುಕೊಟ್ಟಿದ್ದ ಘನತೆ-ಗೌರವಗಳಿಗೆ ಕುಂದುಂಟಾಗದಂತೆ ನೋಡಿಕೊಂಡು ಬಹಳ ಎಚ್ಚರಿಕೆಯಿಂದ ಆ ಹೆಸರನ್ನು, ಉಳಿಸುವ ಪ್ರಯತ್ನವನ್ನು ನಾವು ಮಾಡುತ್ತಿದ್ದೆವೆ. ಈ ಪತ್ರಿಕೆಯಲ್ಲಿ 1993ರಿಂದ 'ಸಮಸ್ಯಾಪೂರಣ' ಎಂಬ ವಿಶಿಷ್ಟ ಅಂಕಣವನ್ನು ಪ್ರೊ। ಗಗೇರ್ಶ್ವರಿ ವೆಂಕಟ ಸುಬ್ಬಯ್ಯನವರ ಸಲಹೆಯ ಮೇರೆಗೆ ಆರಂಭಿಸಲಾಯಿತು. ಅದು ಟಿ.ಕೇಶವಭಟ್ಟರಿಗೆ ಅಚ್ಚುಮೆಚ್ಚಿನ ಅಂಕಣವಾಗಿತ್ತು. ಅದಕ್ಕೆ ಪ್ರತಿ ಸಂಚಿಕೆಗೂ ಒಂದು ಸಮಸ್ಯೆಯನ್ನು ಕೊಡುವುದರಲ್ಲಿ, ಅದಕ್ಕೆ ಬರುತ್ತಿದ್ದ 'ಪೂರಣ'ಗಳನ್ನು ಓದಿ ಆನಂದಪಡುವುದರಲ್ಲಿ ಅದರ ಲೋಪದೋಷಗಳನ್ನು ಸರಿಪಡಿಸುವಲ್ಲಿ ಮತ್ತು ತಪ್ಪದೆ ತಾವೂ ಒಂದು ಪದ್ಯವನ್ನು ಬರೆಯುವುದರಲ್ಲಿ ಅವರು ತೋರುತ್ತಿದ್ದ ಶ್ರದ್ಧೆ, ಆಸಕ್ತಿ, ಅನುಭವಿಸುತ್ತಿದ್ದ ತೃಪ್ತಿ ವರ್ಣನಾತೀತ. ಲೇಖನಗಳ ಓರೆ-ಕೋರೆ ಉಲ್ಲೇಖ ದೋಷಗಳನ್ನು ಸರಿಪಡಿಸುತ್ತ ಅಚ್ಚಿನ ದೋಷಗಳನ್ನು ತಿದ್ದುತ್ತ ಲೋಚನವನ್ನು ಆ ಪತ್ರಿಕೆಯ ಧ್ಯೇಯೋದ್ದೇಶಕ್ಕೆ ಅನುಗುಣವಾಗಿ ಸರ್ವಾಂಗ ಸುಂದರವಾಗಿ ಸಿದ್ಧಪಡಿಸುತ್ತಿದ್ದ ಅವರ ಕಾರ್ಯಸಿದ್ಧಿ ಅನುಕರಣೀಯವಾಗಿತ್ತು.

ಎಂ.ವಿ.ಸೀತಾರಾಮಯ್ಯನವರು ಕೇಶವಭಟ್ಟರಿಗೆ ಪತ್ರಿಕೆಯನ್ನು ವಹಿಸಿ ನಿರಾತಂಕವಾಗಿದ್ದರು. ಒಂದೆರಡು ವಸ್ತುಸಂಗ್ರಹದ ಟಿಪ್ಪಣಿಗಳನ್ನೋ ತಮ್ಮದೇ ಯಾವುದಾದರೂ ಲೇಖನವನ್ನೋ ಕೊಟ್ಟು ಅಂತಿಮ ಪ್ರೂಫನ್ನು ಒಮ್ಮೆ ಕಣ್ಣಾಡಿಸುತ್ತಿದ್ದುದಷ್ಟೇ ಅವರ ಕೆಲಸವಾಗಿರುತ್ತಿತ್ತು. ಮಿಕ್ಕ ಎಲ್ಲ ಸಂಪಾದನೆಯ

ಕಾರ್ಯವನ್ನೂ ಕೇಶವಭಟ್ಟರೇ ನಿರ್ವಹಿಸುತ್ತಿದ್ದರು. ಬಂದ ಲೇಖನ-ಟಿಪ್ಪಣಿಗಳನ್ನೆಲ್ಲ ತಲಸ್ಪರ್ಶಿ ಓದಿ ಭಿನ್ನಾಭಿಪ್ರಾಯವಿರುತ್ತಿದ್ದ ಕೆಲವು ಲೇಖನಗಳ ಬಗ್ಗೆ ಮಾತ್ರ ಸೀತಾರಾಮಯ್ಯನವರೊಂದಿಗೆ ಚರ್ಚಿಸುತ್ತಿದ್ದರು. ಬಸವಾರಾಧ್ಯರು ಅಧ್ಯಕ್ಷರಾದ ಮೇಲೆ ಪೂರ್ಣಹೊಣೆಯನ್ನು ಕೇಶವಭಟ್ಟರಿಗೆ, ವಹಿಸಿ ನಿರಾಳವಾಗಿರುತ್ತಿದ್ದರು.

ವ್ಯಾಕರಣ, ಛಂದಸ್ಸು, ಅಲಂಕಾರ ವಿಷಯಗಳ ಲೇಖನಗಳ ಬಗ್ಗೆ ಭಿನ್ನಾಭಿಪ್ರಾಯವಿದ್ದರೆ ಮುಂದಿನ ಸಂಚಿಕೆಯಲ್ಲಿ ಕೇಶವಭಟ್ಟರು ತಾವೇ ಪ್ರತಿಕ್ರಿಯೆ ಬರೆದು ಚರ್ಚೆಯನ್ನು ಬೆಳೆಸುತ್ತಿದ್ದರು. ಪ್ರೊ| ಗಗೇಶ್ವರಿ, ವಿದ್ವಾನ್ ಎನ್.ರಂಗನಾಥಶರ್ಮ, ಎಚ್.ಎಸ್.ಬಿಳಿಗಿರಿ, ಎಂ.ವಿ.ಸೀ., ಮುಂತಾದವರ ಲೇಖನ -ಟಿಪ್ಪಣಿಗಳಿಗೆ ಇಂತಹ ಆರೋಗ್ಯಪೂರ್ಣ ಚರ್ಚೆಗಳನ್ನು ಬೆಳೆಸಿರುವುದನ್ನು ನೋಡಬಹುದು. 'ಖ' ವಿಚಾರ, 'ಗಮಕಸಮಾಸ' ವಿಚಾರ, 'ಆರ್‌ಕವೊತ್ತು (ೞ)' ವಿಚಾರಗಳಲ್ಲಿ ಲೋಚನದಲ್ಲಿ ತುಂಬ ಮೌಲಿಕವಾದ ಚರ್ಚೆಗಳನ್ನು ಕೇಶವಭಟ್ಟರು ಬೆಳೆಸಿದ್ದಾರೆ. ಇದು ಕನ್ನಡ ವಿದ್ವತ್ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆಯಾಗಿದೆ.

ಪ್ರತಿಷ್ಠಾನದಲ್ಲಿ, ಲೋಚನದ ಸಂಪಾದನೆಗಷ್ಟೇ ಸೀಮಿತವಾಗದೆ ಟಿ.ಕೇಶವಭಟ್ಟರು ಎಲ್ಲ ಚಟುವಟಿಕೆಗಳ ಒಂದು ಭಾಗವಾಗಿದ್ದರು. 'ಹಸ್ತಪ್ರತಿಶಾಸ್ತ್ರ' ತರಗತಿಯ ಅತಿಥಿ ಅಧ್ಯಾಪಕರಾಗಿ ವ್ಯಾಕರಣ, ಛಂದಸ್ಸುಗಳನ್ನು ಬೋಧಿಸುತ್ತಿದ್ದರು. ಹಲವು ಉಪನ್ಯಾಸಗಳನ್ನೂ ನೀಡಿರುವುದಲ್ಲದೆ ಸಭೆಗಳಲ್ಲಿ ಸೂಕ್ತ ಸಲಹೆ-ಮಾರ್ಗದರ್ಶನಗಳನ್ನು ನೀಡುತ್ತಿದ್ದರು. ಬಿ.ಎಂ.ಶ್ರೀ ಪ್ರತಿಷ್ಠಾನ ಟಿ.ಕೇಶವಭಟ್ಟರ ವಿದ್ವತ್ ಸೇವೆಯನ್ನು ಸಾಕಷ್ಟು ಪಡೆದು ಬೆಳೆದಿದೆ. ಇದರೊಂದಿಗೆ ಕೇಶವಭಟ್ಟರ ಈ ವಿದ್ವತ್ ಸಂಸರ್ಗ ನನ್ನನ್ನೂ ಬೆಳೆಸಿದೆ. ಅವರು ಬರೆಯುತ್ತಿದ್ದ ಪುಸ್ತಕಗಳ ಒಂದೊಂದು ಪ್ರತಿಯನ್ನು ನನಗೆ ಆತ್ಮೀಯತೆಯ ಸಹಿಯೊಂದಿಗೆ ನೀಡುತ್ತಿದ್ದರು. ನನ್ನ ಸಣ್ಣ-ಪುಟ್ಟ ಲೇಖನಗಳ ಬಗೆಗೂ ಮೆಚ್ಚುಗೆ ವ್ಯಕ್ತಪಡಿಸಿ ಪ್ರೋತ್ಸಾಹಿಸುತ್ತಿದ್ದರು.

ಟಿ.ಕೇಶವಭಟ್ಟರಿಗೆ ಶ್ರವಣಶಕ್ತಿ ಕುಗ್ಗಿ ದೇಹಾಲಸ್ಯದ ಕಾರಣದಿಂದ ಲೋಚನದ ಸಂಪಾದಕೀಯ ಜವಾಬ್ದಾರಿಯಿಂದ ನಿವೃತ್ತರಾದರೂ ಬರವಣಿಗೆಯ ಸಂಪರ್ಕದಿಂದ ಕೊನೆಯವರೆಗೂ ನಮ್ಮೊಂದಿಗೇ ಇದ್ದರು. ಕಿವಿ ಸರಿಯಾಗಿ ಕೇಳಿಸದಿದ್ದರೂ ಸಭೆ-ಸಮಾರಂಭಗಳಿಗೆ ಬಂದು ಶೋಭೆ ತರುತ್ತಿದ್ದರು. ಪುಸ್ತಕಗಳ ವಿಮರ್ಶೆ-ಸಮಸ್ಯಾಪೂರಣ ಪದ್ಯಗಳ ರಚನೆಗಳನ್ನು ಮಾಡುತ್ತಲೇ ಇದ್ದರು. ಕೇಶವಭಟ್ಟರು ನನ್ನ ಮೇಲೆ ಅಪಾರವಾದ ಪ್ರೀತಿ-ವಿಶ್ವಾಸಗಳನ್ನಿಟ್ಟುಕೊಂಡು ನನ್ನ ಪ್ರತಿಯೊಂದು ಪುಸ್ತಕದ ಬಗೆಗೂ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಹರಿದಾಸ ಸಾಹಿತ್ಯದಲ್ಲಿ ಶ್ರೀವೈಷ್ಣವ ಪರಂಪರೆಯ ಹಾಡುಗಳ ಸಂಗ್ರಹಕಾರ್ಯವನ್ನು ಸಂಪಾದನಾ ಕೌಶಲ್ಯವನ್ನು ಶ್ಲಾಘಿಸಿ ತಮ್ಮ ಹಾಡುಗಳ ಸಂಕಲನಕ್ಕೆ

ಈ ಪರಂಪರೆಯ ಹಾಡುಗಳು ಸಿಗದೆ ಹೋದವಲ್ಲ ಎಂದು ವಿಷಾದಿಸುತ್ತ, ತಮ್ಮಿಂದ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಭಂಡಾರವೆ ದೊರಕಿದಂತಾಯಿತು ಎಂದು ಅಭಿನಂದಿಸಿದ್ದರು.

ಟಿ.ಕೇಶವಭಟ್ಟರು ನಿಧನರಾಗುವುದಕ್ಕೆ ಕೇವಲ ಎಂಟುದಿನ ಮೊದಲು 5-6 ಪುಸ್ತಕಗಳನ್ನು, ತಾವು ಬರಲಾಗದಿದ್ದರೂ ಬೇರೆಯವರಿಂದ ತರಿಸಿಕೊಂಡು ಅದರಲ್ಲಿ ನಾಲ್ಕು ಪುಸ್ತಕಗಳಿಗೆ ಸೊಗಸಾದ ವಿಮರ್ಶೆಗಳನ್ನು ಬರೆದು ಪುಸ್ತಕದ ಸಮೇತ ಹಿಂತಿರುಗಿದಿದ್ದರು. ಆ ವಿಮರ್ಶೆಗಳು ಲೋಚನದಲ್ಲಿ ಪ್ರಕಟವಾಗುವ ಮೊದಲೇ ಅವರು ನಮ್ಮನ್ನು ಅಗಲಿದುದು ತುಂಬ ದುಃಖವನ್ನು ತಂದಿತು.

ಕೇಶವಭಟ್ಟರು ಕನ್ನಡ ಸಾಹಿತ್ಯಕ್ಕೆ ನೀಡಿರುವ ಸಾಹಿತ್ಯ ಕೊಡುಗೆ ಮೌಲಿಕವಾದದ್ದು. ಪ್ರಾಚೀನ ಸಾಹಿತ್ಯ ವಿಚಾರಗಳ ಮೌಲಿಕ ಚರ್ಚೆಗಳ ಲೇಖನಗಳು, ಸಂಪ್ರದಾಯದ ಹಾಡುಗಳ ಸಂಗ್ರಹ, ಯಕ್ಷಗಾನಗಳ ಪ್ರಕಟನೆ, ಎಲ್ಲಕ್ಕಿಂತ ಹೆಚ್ಚಾಗಿ ವ್ಯಾಕರಣ-ಛಂದಸುಗಳ ಬಗ್ಗೆ ಗಂಭೀರ ಚಿಂತನ ಬರಹಗಳು, ಛಂದೋಬದ್ಧ ಕವಿತೆಗಳಲ್ಲಿ ಸ್ವತಃ ಕಾವ್ಯರಚನೆ ಮತ್ತು 'ಗೋವಿನ ಹಾಡು' ಸಂಪಾದನೆ, ಹೀಗೆ ಹಲವು ಪಾಂಡಿತ್ಯ ಕ್ಷೇತ್ರಗಳಲ್ಲಿ ಕೇಶವಭಟ್ಟರ ಸಾಧನೆ ಸ್ಮರಣೀಯವಾಗಿ ನಿಲ್ಲುತ್ತದೆ.

ಶ್ರೇಷ್ಠ ಪರಂಪರೆಯ ವಿದ್ವತ್ತು ಮತ್ತು ವ್ಯಕ್ತಿತ್ವವನ್ನು ಹೊಂದಿದ್ದ ವಿದ್ವಾನ್ ಟಿ.ಕೇಶವಭಟ್ಟರಿಗೆ ಕನ್ನಡ ಸಾಹಿತ್ಯ ಕೊಡಬೇಕಾದ ರೀತಿಯ ಮನ್ನಣೆಯನ್ನು ಕೊಡಲಿಲ್ಲವೆಂಬ ಕೊರಗು ಕಾಡುತ್ತಿರುತ್ತದೆ. ಯಾವುದೇ ಗಣ್ಯಪ್ರಶಸ್ತಿ ಬಾರದಿದ್ದರೂ ಸಂಘ-ಸಂಸ್ಥೆಗಳು ಗೌರವಿಸಿವೆ. ಬಿ.ಎಂ.ಶ್ರೀ. ಪ್ರತಿಷ್ಠಾನವೂ ರಜತೋತ್ಸವ ಸಂದರ್ಭದಲ್ಲಿ ತನ್ನ ಗೌರವವನ್ನು ಸಲ್ಲಿಸಿದೆ. ಕೇಶವಭಟ್ಟರಿಗೆ ಸಾರ್ವಜನಿಕವಾಗಿ ಒಂದು ಸನ್ಮಾನಗ್ರಂಥದ ಸಮರ್ಪಣೆಯೂ ಆಗಲಿಲ್ಲ. ಅಂಥ ಒಂದು ಪ್ರಯತ್ನ ವಿಫಲವಾಗಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದತ್ತಿನಿಧಿಯಾಗಿ ಮಾರ್ಪಟ್ಟಿತು. ಮತ್ತೊಮ್ಮೆ ಆ ಪ್ರಯತ್ನದಲ್ಲಿರುವಾಗಲೇ ಅವರು ನಮ್ಮನ್ನಗಲಿ ಅದು ಸಂಸ್ಮರಣಗ್ರಂಥವಾಗಿ ಮಾರ್ಪಟ್ಟುದು ವಿಧಿಲೀಲೆಯಲ್ಲದೆ ಮತ್ತೇನು? ಎಂ.ವಿ.ಸೀತಾರಾಮಯ್ಯನವರ ಸಾವೂ ಹೀಗೇ ಆದದ್ದು ನನ್ನನ್ನು ಕಾಡುತ್ತದೆ. 80ನೇ ವರ್ಷದ ನೆನಪಿನ ಅಭಿನಂದನ ಗ್ರಂಥ ಸಿದ್ಧತೆಗೆ ಅಭಿನಂದನ ಸಮಿತಿ ಕಾರ್ಯಪ್ರವೃತ್ತವಾಗಿದ್ದಲೇ ಸೀತಾರಾಮಯ್ಯನವರು ವಿಧಿವಶರಾಗಿ ಅದನ್ನು ಸಂಸ್ಮರಣ ಸಂಪುಟವನ್ನಾಗಿ ಪರಿವರ್ತಿಸಿ ಹೊರತರಬೇಕಾಯಿತು. ಟಿ.ಕೇಶವಭಟ್ಟರ ಈ ಅಭಿನಂದನ ಗ್ರಂಥದ ಪ್ರಯತ್ನ ಎರಡನೆಯದಾಗಿತ್ತು. ಇದೂ ಅವರಿಗೆ ಸಲ್ಲದೇಹೋಯಿತಲ್ಲ ಎಂದು ಯೋಚನೆಯಾಗುತ್ತದೆ. ಅವರ ಆತ್ಮ ಈ ಪರಿವರ್ತಿತ ಸಂಸ್ಮರಣ ಸಂಪುಟವನ್ನು ಸ್ವೀಕರಿಸಿ ನಮ್ಮಗಳ ಮನಸ್ಸನ್ನು ನಿರಾಳ ಮಾಡುತ್ತದೆಂದು ಆಶಿಸೋಣವೇ?

**- ನಾ. ಗೀತಾಚಾರ್ಯ**

# 10. ಗ್ರಂಥವಿಮರ್ಶೆ–ಗ್ರಂಥಾವಲೋಕನ–ಸಾದರ ಸ್ವೀಕಾರ

## 1. ಗುರುಪೀಠದ ಇತಿಹಾಸದೊಂದಿಗೆ ಚಾರಿತ್ರಿಕ ಗುಪ್ತ ದಾಖಲೆಗಳ ಅನಾವರಣ :

**ಶ್ರೀ ರಾಮಚಂದ್ರಾಪುರ ಮಠದ 'ರಾಜಮಾನ್ಯ ಇತಿಹಾಸ ವೈಭವ' ಸಂಪುಟ 1 ಶಾಸನಗಳು:** ಸಂಪಾದಕರು : ಕೆಳದಿ ಗುಂಡಾಜೋಯಿಸ್; ಪ್ರಕಾಶನ : ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ಕರ್ನಾಟಕ ಸರಕಾರ, ಬೆಂಗಳೂರು, ಪ್ರಕಟಣೆ : 2002. ಪುಟಗಳು 3+13+160 ದರ: ರೂ. 100.00

ಭಾರತದ ಪ್ರಮುಖ ಧಾರ್ಮಿಕ ಗುರುಪೀಠಗಳ ಸಾಲಿನಲ್ಲಿ ಶ್ರೀ ರಾಮಚಂದ್ರಾಪುರ ಮಠವು ಗಮನಾರ್ಹವಾದುದು. ಈ ಮಠದ ಪೂರ್ವೇತಿಹಾಸದ ಬಗ್ಗೆ ಹಸ್ತಪ್ರತಿಗಳ ತಲಸ್ಪರ್ಶಿ ಅಧ್ಯಯನ ಮಾಡಿ ಹೊಸ ಮಾಹಿತಿಗಳನ್ನು ದಾಖಲಿಸಿದವರು ಶ್ರೀ ಕೆಳದಿ ಗುಂಡಾ ಜೋಯಿಸರು. ಈಗಾಗಲೇ ಶೃಂಗೇರಿ, ಚಿತ್ರಾಪುರ, ಗೋವಾ ಪರ್ತಗಾಳಿಮಠ, ಉಡುಪಿ, ಕಾಶಿಮಠ, ಹುಬ್ಬಳ್ಳಿಯ ಮೂರು ಸಾವಿರ ಮಠ, ಧರ್ಮಸ್ಥಳ ಮೊದಲಾದ ಧಾರ್ಮಿಕ ಕ್ಷೇತ್ರಗಳ ಪುರಾತನ ಹಸ್ತಪ್ರತಿ ದಾಖಲೆಗಳ ಅಧ್ಯಯನ ನಡೆಸಿ, ಅನುಭವಗಳಿಸಿದ್ದ ಶ್ರೀಯುತರು ಇದೀಗ ಶ್ರೀಮಠದ ಓಲೆಗರಿಗಳಲ್ಲಿ ಅಡಗಿದ್ದ ಅಪೂರ್ವ ಮಾಹಿತಿಗಳನ್ನು ಲಭ್ಯವಿರುವ ಶಾಸನಗಳೊಂದಿಗೆ ಪರಿಚಯಿಸಿದ್ದಾರೆ.

ಈ ಕೃತಿಯ ಅತಿಮುಖ್ಯ ಭಾಗ – ಸಂಸ್ಕೃತ ಭಾಷೆ, ತಿಗಳಾರಿ ಲಿಪಿಯಲ್ಲಿರುವ "ಶ್ರೀ ರಘೂತ್ತಮ ಮಠೋದ್ಧಾರಃ" ಎಂಬ ಅಪ್ರಕಟಿತ ಹಸ್ತಪ್ರತಿಯ ಪರಿಚಯ. ಈ ಮಠದ ಹಿಂದಿನ ಸ್ವಾಮಿಗಳು ಇದನ್ನು ಪೆಟ್ಟಿಗೆಯಲ್ಲಿಟ್ಟು ಪೂಜಿಸುತ್ತಿದ್ದರಂತೆ. ಇದು ಇಲ್ಲಿಯ ಗುರುಪೀಠ ಪರಂಪರೆಯನ್ನು ಕುರಿತಾದ, ಅನೇಕ ಚಾರಿತ್ರಿಕಾಂಶಗಳನ್ನೊಳಗೊಂಡ ದಾಖಲೆಯಾಗಿದೆ. ಇದರ ಬಗ್ಗೆ ಚರ್ಚಿಸುವಾಗ ಪೂರಕ ಮಾಹಿತಿಯಾಗಿ ಲೂಯಿ, ರೈಸ್, ಎಮ್.ಎಚ್.ಕೃಷ್ಣ ಮುಂತಾದ ಪ್ರಾಚ್ಯ ಸಂಶೋಧನ ವಿದ್ವಾಂಸರ ಅಭಿಪ್ರಾಯಗಳನ್ನು ಉಲ್ಲೇಖಿಸಿದ್ದಾರೆ. ಮುಂದಿನ ಭಾಗಗಳಲ್ಲಿ ಎಪಿಗ್ರಾಫಿಯಾ ಕರ್ನಾಟಿಕಾ (ಲೂಯಿ ರೈಸ್ ಸಂಪುಟಗಳು) ದ ಎಂಟು ಶಾಸನಗಳು, ಮೈಸೂರು ಪುರಾತತ್ವ ವರದಿಯ ಆರುಶಾಸನಗಳು, ಕೆಳದಿ ಇತಿಹಾಸ ಸಂಶೋಧನ ಕೇಂದ್ರ ಪ್ರಕಟಿಸಿದ ಒಂದು ಶಾಸನವಲ್ಲದೇ, ಮದ್ರಾಸಿನ ಸರಕಾರಿ ಪ್ರಾಚ್ಯ ಹಸ್ತಪ್ರತಿ ಗ್ರಂಥಾಲಯದಲ್ಲಿನ ಏಳು ಹಸ್ತಪ್ರತಿಗಳು, ತಿಗಳಾರಿ ಲಿಪಿಯ ಒಂದು ತಾಳೆಯೋಲೆಯನ್ನು ಆಧರಿಸಿ ಮಾಹಿತಿಗಳನ್ನು ನೀಡಿದ್ದು ಈ ಗ್ರಂಥದ ಅಧಿಕೃತತೆಗೆ ಸಾಕ್ಷಿಯಾಗಿದೆ. ಅನುಬಂಧ ರೂಪದಲ್ಲಿ ಕೊಟ್ಟಿರುವ ಶ್ರೀಶಂಕರರ ಯಾತ್ರೆಯ ನಕ್ಷೆ, ಶ್ರೀಮಠದ ಗುರುಪರಂಪರೆಗಳ ಪಟ್ಟಿ ಕೂಡ ಇವರು ಸಾದರಪಡಿಸಿದ ವಿಚಾರಸರಣಿಗಳಿಗೆ ಪೂರಕವಾಗಿವೆ. ಒಟ್ಟಿನಲ್ಲಿ

ಒಂದು ಸಾವಿರದ ಇನ್ನೂರು ವರ್ಷಗಳಿಗೂ ಅಧಿಕ ಇತಿಹಾಸವಿರುವ ಶ್ರೀಮಠದ ಇಲ್ಲಿಯ ದಾಖಲೆಗಳು - ಈ ಪರಿಸರದ ಜನಜೀವನ, ಸಂಸ್ಕೃತಿ, ಆಚಾರ ವಿಚಾರಗಳು, ಕಟ್ಟುಪಾಡುಗಳು, ಜೀವನ ವಿಧಾನಗಳು ಹಾಗೂ ಸಾಮಾಜಿಕ ಪರಿಸ್ಥಿತಿಗಳ ಬಗ್ಗೆ ವಿಶೇಷ ಮಾಹಿತಿಗಳನ್ನು ನೀಡುವಲ್ಲಿ ಯಶಸ್ವಿಯಾಗಿವೆ. ಸಾಂಸ್ಕೃತಿಕ ಸಂಪತ್ತುಗಳ ರಕ್ಷಣೆ ಹಾಗೂ ಸಂಶೋಧನೆ ನಮ್ಮ ಇಂದಿನ ಜವಾಬ್ದಾರಿ. ಈ ನಿಟ್ಟಿನಲ್ಲಿ ಧರ್ಮಸೂಕ್ಷ್ಮಗಳನ್ನು ಒಳಗೊಂಡ ಗುರುಪೀಠದ ಇತಿಹಾಸ ಸಿದ್ಧಪಡಿಸಿದ, ಜತೆಗೆ ಅಪೂರ್ವ ದಾಖಲೆಗಳನ್ನು ಅನಾವರಣಗೊಳಿಸಿದ ವಿದ್ವಾಂಸ ಕೆಳದಿ ಗುಂಡಾ ಜೋಯಿಸರು, ಪ್ರಕಟಿಸಿದ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ಅಧಿಕಾರವರ್ಗದವರು ಪ್ರಶಂಸನಾರ್ಹರು. ಇಂತಹ ಇನ್ನೂ ಅನೇಕ ಬೆಳಕು ಕಾಣದ ದಾಖಲೆಗಳು ಪುಸ್ತಕರೂಪದಲ್ಲಿ ಪ್ರಕಟವಾಗಿ ಎಲ್ಲರಿಗೂ ಲಭ್ಯವಾಗಲಿ, ತನ್ಮೂಲಕ ಚಾರಿತ್ರಿಕ ದಾಖಲೆಗಳ ಬಗೆಗೆ ಜನರಲ್ಲಿ ಜಾಗೃತಿ ಮೂಡಲಿ ಎಂದು ಹಾರೈಸುತ್ತೇನೆ.

**- ಡಾ॥ ಕೆ.ಎಸ್.ಎನ್. ಉಡುಪ**

## 2. ಶ್ರೀ ತುಲಸೀ ರಾಮಾಯಣ ಅಥವಾ ಶ್ರೀರಾಮಚರಿತ ಮಾನಸ

ಕವಿ: ಮೈ.ಶೀ. ಅನಂತಪದ್ಮನಾಭ ರಾವ್, ಪ್ರಕಾಶಕರು: ಎಂ.ವಿ. ಜಯರಾಮರಾವ್, 12ನೇ ಮುಖ್ಯರಸ್ತೆ, ರಾಜಾಜಿನಗರ ಎರಡನೆ ಹಂತ, ಬೆಂಗಳೂರು - 560010, ಪುಟಗಳು (ಡೆಮ್ಮಿ 1/8) 520. ಬೆಲೆ: ರೂ.100.00 ದ್ವಿತೀಯ ಮುದ್ರಣ 2002.

ಗೋಸ್ವಾಮಿ ತುಲಸೀದಾಸರು ಹಿಂದಿಯ ಅವಧೀ ಭಾಷೆಯಲ್ಲಿ ರಚಿಸಿರುವ ಮೂಲಗ್ರಂಥದ ಕನ್ನಡ ಭಾಮಿನಿ ಷಟ್ಪದೀ ಪದ್ಯ ರೂಪದ ಅನುವಾದ ಕಾವ್ಯವಿದು. ಇದರಲ್ಲಿ ಬಾಲಕಾಂಡದಿಂದ ಸುಂದರಕಾಂಡದ ವರೆಗಿನವು ಭಾಮಿನಿಷಟ್ಪದಿಯಲ್ಲಿವೆ. ಆ ಮೇಲಣ ಯುದ್ಧಕಾಂಡ, ಶ್ರೀರಾಮ ಪಟ್ಟಾಭಿಷೇಕ - ಎಂಬ ಕಥಾಭಾಗಗಳು ವಾರ್ಧಕ ಷಟ್ಪದಿಯಲ್ಲಿವೆ. ಪ್ರಾಣಿಕಾಂಡದಲ್ಲಿಯೂ ವಿಶ್ರಾಮನಾಮಾಂಕಿತವಾಗಿ ಸಂಧಿಗಳಿವೆ. ಅವುಗಳ ಪ್ರಾರಂಭದಲ್ಲಿ ಕಥಾಸೂಚಕ ಪದ್ಯಾರ್ಧವಿರುತ್ತದೆ. ಕಾವ್ಯದಲ್ಲಿ ಒಟ್ಟು ಪದ್ಯಸಂಖ್ಯೆ 2482. ಅವುಗಳಲ್ಲಿ 430 ಮಾತ್ರ ವಾರ್ಧಕ ಷಟ್ಪದಿಯವು. ಈ ಕಾವ್ಯಕ್ಕೆ ಮೆಚ್ಚುಗೆಯ ಮುನ್ನುಡಿಯಿತ್ತವರು - ಡಿ.ವಿ.ಜಿ.ಯವರು.

ಈ ಕಾವ್ಯಕರ್ತೃ ಅನಂತಪದ್ಮನಾಭರಾಯರು ಕವಿ, ಗಮಕಿ ಹಾಗೂ ದಕ್ಷ ಆಡಳಿತಗಾರರಾಗಿ ಹೆಸರಾಂತು 1960 ವರೆಗೆ ಕೊಡಗಿನ ಮಡಿಕೇರಿಯಲ್ಲಿದ್ದರು. ಅವರ ಗಮಕಿ ಶಿಷ್ಯರಲ್ಲಿ ನಾನೂ ಒಬ್ಬನು. ಆಗ ನಾನು ಮಡಿಕೇರಿಯಲ್ಲಿ ಕನ್ನಡ ಅಧ್ಯಾಪಕನಾಗಿದ್ದೆ. ಅವರ ಸುಪುತ್ರ ಹಾಗೂ ಗಮಕಿ ಸಾಹಿಸಿ ಜಯರಾಮರಾಯರೇ ಈ ಕಾವ್ಯದ ಪ್ರಕಾಶಕರು. ಈ ಕಾವ್ಯವನ್ನು 1936ರಲ್ಲಿ ಬರೆದು ಮುಗಿಸಿದುದಾಗಿ ತಿಳಿದು

ಬರುತ್ತದೆ. ಅನಂತಪದ್ಮನಾಭರಾಯರು ವಿಶೇಷವಾಗಿ ಕನ್ನಡ ಕಾವ್ಯಾಭ್ಯಾಸ ಮಾಡಿದ ಕವಿಯಾಗಿ, ಅನೇಕ ಕಾವ್ಯರಚನೆ ಮಾಡಿದ್ದಾರೆ. 'ಕರ್ನಾಟ ಭಾರತ ಕಥಾ ಮಂಜರಿ' ಅವುಗಳಲ್ಲಿ ಒಂದಾಗಿರುವ ಬೃಹತ್ಕಾವ್ಯ. ರಾಮಚರಿತಮಾನಸ ಕಾವ್ಯದ ಮಂಗಲಾಚರಣೆಯಲ್ಲಿ ತಮ್ಮನ್ನು ಕುರಿತು ಹೇಳಿರುವುದು ಹೀಗಿದೆ.

ಕನ್ನಡದ ಕವಿಕುಲದ ಗುರುಗಳು
ರನ್ನ ಕವಿ ಲಕ್ಷ್ಮೀಶ ಪಂಪರು
ಜನ್ನ ಕುಮಾರವ್ಯಾಸ ಹರಿಹರ ಪೊನ್ನ ಮುದ್ದಣರು
ಕನ್ನಡದ ಹಿರಿಮೆಯನು ಬೆಳಗಿದ
ರನ್ನ ನಂದಿಸುತವರ ಚರಣಗ
ಳನ್ನು ನೆನೆದಾಂ ರಾಮಮಾನಸ ಚರಿತವೊರೆಯುವೆನು ॥

ಭಾರತೀಯ ಸಾಹಿತ್ಯ ಪ್ರಪಂಚದಲ್ಲಿ ರಾಮಾಯಣಕ್ಕೆ ವಿಶೇಷ ಮಹತ್ವವಿದೆ. ಅವುಗಳ ಸಂಖ್ಯೆ ಶತಕೋಟಿ ಎನ್ನಲಾಗಿದೆ. ಅಂತಹ ಶತಕೋಟಿ ರಾಮಾಯಣಗಳು ಸತ್ಯಲೋಕದಲ್ಲಿದ್ದು ಇಪ್ಪತ್ತೈದು ಸಾವಿರ ರಾಮಾಯಣಗಳು ಭೂಲೋಕಕ್ಕೆ ಬಂದಿರುವುದಾಗಿ ಮುದ್ದಣ್ಣನ ಅದ್ಭುತ ರಾಮಾಯಣದಲ್ಲಿ ಹೇಳಿದೆ. ಕನ್ನಡದಲ್ಲಿರುವ ರಾಮಾಯಣಗಳ ಸಂಖ್ಯೆ ಒಂದು ಸಾವಿರವನ್ನು ದಾಟಿದೆಯೆಂದು ವಿದ್ವಾಂಸರ ಅಭಿಪ್ರಾಯವಿದೆ. ತುಲಸೀದಾಸರ ರಾಮಚರಿತ ಮಾನಸವನ್ನು ಕನ್ನಡದಲ್ಲಿ ಮಕರಂದ ವ್ಯಾಖ್ಯೆಯೊಂದಿಗೆ ಹತ್ತು ಸಂಪುಟಗಳಲ್ಲಿ ಡಾ॥ ಭಾರತೀರಮಣಾಚಾರ್ಯರು ಗದ್ಯಾನುವಾದದೊಂದಿಗೆ ಪ್ರಕಾಶನ ಪಡಿಸಿದ್ದಾರೆ. ಆದರೆ ಕಾವ್ಯರೂಪದಲ್ಲಿ ಕಾವ್ಯವಾಚನಕ್ಕೆ ಸೊಗಸಾದ ರೂಪ ತಾಳಿದ ಕಾವ್ಯ ಕೃತಿಯೆಂದರೆ ಅನಂತಪದ್ಮನಾಭರಾಯರದೇ ಆಗಿದೆ.

ತುಲಸೀ ರಾಮಾಯಣದ ಬಾಲಕಾಂಡದಲ್ಲಿರುವಂತೆ ಭಾರದ್ವಾಜನಿಗೆ ಯಜ್ಞವಲ್ಕ್ಯನು ಶ್ರೀ ರಾಮನ ಚರಿತಗಳನ್ನು ಹೇಳುತ್ತಾನೆ. ಶಿವನ ಪತ್ನಿ ದಕ್ಷ ಯಾಗದಲ್ಲಿ ದೇಹತ್ಯಾಗ ಮಾಡಿ ಪರ್ವತ ರಾಜನ ಕುಮಾರಿಯಾಗಿ ಶಿವನನ್ನೊಲಿಯುತ್ತಾಳೆ. ಶಿವನು ರಾಮ ಧ್ಯಾನದಲ್ಲಿದ್ದಾಗ ತಪಸ್ಸನ್ನು ಕೆಡಿಸಲು ಬಂದ ಮನ್ಮಥನು ಶಿವನ ನೇತ್ರಾಗ್ನಿಯಿಂದ ಭಸ್ಮೀ ಭೂತನಾಗುವನು. ಮುಂದೆ ಪಾರ್ವತಿಯ ವಿವಾಹ. ಅಂತಹ ಪಾರ್ವತಿಯ ಅಪೇಕ್ಷೆಯಂತೆ ಶಿವನು ರಾಮ ಚರಿತವನ್ನು ವಿವರಿಸುತ್ತಾನೆ. ಈ ಕಾವ್ಯದಲ್ಲಿ ದಶರಥ, ರಾಮ, ರಾವಣ, ಕುಂಭಕರ್ಣ, ವಿಭೀಷಣ, ಕಪಿಗಳು – ಇಂತಹರೆಲ್ಲರ ಜನ್ಮ ಪೂರ್ವವೃತ್ತಾಂತಗಳು ಮೊದಲಿನ ನಾಲ್ಕು ವಿಶ್ರಾಮ (ಸಂಧಿ) ಗಳಲ್ಲಿ ನಿರೂಪಿತವಾಗಿವೆ. ಆಮೇಲೆ ಪುತ್ರಕಾಮೇಷ್ಟಿಯಿಂದ ಕಥೆ ಮುಂದುವರಿಯುತ್ತದೆ. ಪದ್ಯರಚನೆ ಸರಳವಾಗಿದೆ. ಅರ್ಥವು ಸುಲಭಗ್ರಾಹ್ಯವಾಗಿದೆ. ಗಮಕದಲ್ಲಿ ಹಾಡಲು ಒಗ್ಗುವಂತಿದೆ. ಕನ್ನಡಕ್ಕೆ ಇದೊಂದು

ವಿನೂತನ ಅಮೂಲ್ಯವಾದ ಕೊಡುಗೆಯೇ ಆಗಿದೆ. ಪ್ರತಿಯೊಬ್ಬ ಕನ್ನಡಿಗನೂ ಕೊಂಡಿಟ್ಟು ಓದಿ, ಕೇಳಿ, ಆನಂದದಿಂದ ಅನುಭವ ಹೆಚ್ಚಿಸಿಕೊಳ್ಳಲು ದಕ್ಕುದಾಗಿದೆ.

## 3. ಕರ್ನಾಟಕ ಭಾರತ ಕಥಾಮಂಜರಿ

ಕವಿ: ಮೈ.ಶೀ. ಅನಂತಪದ್ಮನಾಭರಾವ್, ಪ್ರಕಾಶಕರು: ಎಂ.ಎ. ಜಯರಾಮರಾವ್, ರಾಜಾಜಿನಗರ, ಬೆಂಗಳೂರು – 560010, ಪುಟಗಳು: (ಡೆಮ್ಮಿ 1/4) 604. ಬೆಲೆ: ರೂ.200.00, ಪ್ರಥಮ ಮುದ್ರಣ 2002.

ಈ ಕಾವ್ಯದ ಹೆಸರು ಕೇಳಿದೊಡನೆ ಕುಮಾರವ್ಯಾಸ ಭಾರತದ ನೆನಪಾಗುವುದು. ಅವನ ಕಾವ್ಯದ ಹೆಸರೇ ಇಲ್ಲಿದೆ. ಆದರೆ ಕುಮಾರವ್ಯಾಸ ಭಾರತದಲ್ಲಿರುವುದು ಹತ್ತು ಪರ್ವಗಳು ಮಾತ್ರ. ಆದುದರಿಂದ ಅದಕ್ಕೆ ದಶ ಪರ್ವ ಭಾರತ ಎಂತಲೂ ಹೆಸರಿದೆ. ಕುಮಾರವ್ಯಾಸನ ಕಾಲ ಕ್ರಿ.ಶ. 1430. ಮುಂದೆ ವಿಜಯನಗರದ ಕೃಷ್ಣದೇವರಾಯನು ತನ್ನ ಆಸ್ಥಾನ ಕವಿಯಾಗಿದ್ದ ತಿಮ್ಮಣ್ಣ ಕವಿಯನ್ನು ಒತ್ತಾಯಿಸಿ ಮುಂದಿನ ಎಂಟು ಪರ್ವಗಳನ್ನು ಅದೇ ಭಾಮಿನಿ ಷಟ್ಪದಿಯಲ್ಲಿ ಬರೆಯಿಸಿರುವುದು ಕಂಡುಬರುತ್ತದೆ. ಹಾಗೆ ತಿಮ್ಮಣ್ಣಕವಿಯಿಂದ ರಚಿತವಾದುದಕ್ಕೆ ಕೃಷ್ಣರಾಜ ಭಾರತ ಎಂದು ಹೆಸರು. ಕವಿ ಚರಿತೆಯಲ್ಲಿ ಹೇಳಿರುವಂತೆ ಅದರಲ್ಲಿರುವ ಸಂಧಿಗಳು 40, ಪದ್ಯಸಂಖ್ಯೆ 3736. ಈ ಕಾವ್ಯವು ಅಷ್ಟೇನೂ ಪ್ರಚಾರಕ್ಕೆ ಬಂದಿಲ್ಲ. ಈ ಕೊರತೆಯನ್ನು ನಿವಾರಿಸುವುದರಲ್ಲಿ ಅನಂತ ಪದ್ಮರಾಯರ ಕಾವ್ಯವು ಅದೇ ಹೆಸರಿನಲ್ಲೇ ಇದ್ದು ಯಶಸ್ವಿಯಾಗಿದೆ.

ಅನಂತಪದ್ಮನಾಭ ರಾಯರು ಮಡಿಕೇರಿಯಲ್ಲಿ ಸರಕಾರಿ ಉದ್ಯೋಗದಲ್ಲಿದ್ದಾಗಲೇ ಕನ್ನಡ ತುಲಸೀ ರಾಮಾಯಣ, ಶ್ರೀ ಕೃಷ್ಣಚರಿತಾಮೃತಂ ಎಂಬ ಬೃಹತ್ ಕಾವ್ಯಗಳನ್ನಲ್ಲದೆ, ಕಾವೇರಿ ಕಥಾಮೃತ, ಕರ್ಣ, ಕಬೀರ ದಾಸ – ಮುಂತಾದ ಚಿಕ್ಕ ಕಾವ್ಯಗಳನ್ನು ಬರೆದಿದ್ದಾರೆ. 1960ರಲ್ಲಿ ಅವರು ಶಿವಮೊಗ್ಗಕ್ಕೆ ಹೋದ ಮೇಲೆ ಅಲ್ಲಿಯ ಮತ್ತು ಇತರ ಕಡೆಯ ವಿದ್ವಾಂಸರ ಒತ್ತಾಯಕ್ಕೆ ಮಣಿದು ಈ ಕಾವ್ಯವನ್ನು ರಚಿಸಿದರು. ಕಾವ್ಯದಲ್ಲಿ ತನ್ನನ್ನು 'ಶಿವಮೊಗನಗರಾಧೀಶ ಶ್ರೀ ಸೀತಾರಾಮಚಂದ್ರ ಪದಪದ್ಮರಾಧಕ ಅನಂತಪದ್ಮರಾಯ ವಿರಚಿತ'ವೆಂದು ಹೇಳಿಕೊಂಡಿದ್ದಾರೆ. 1969ರಲ್ಲಿ ಇದನ್ನು ಬರೆದು ಪೂರ್ಣಗೊಳಿಸಿರುತ್ತಾರೆ. ಸಂತ ಭದ್ರಗಿರಿ ಅಚ್ಯುತದಾಸರು ಈ ಕಾವ್ಯವನ್ನು ಮೆಚ್ಚಿ ಮುನ್ನುಡಿ ನೀಡಿರುತ್ತಾರೆ. ಈ ಕಾವ್ಯದಲ್ಲಿ ಸ್ತ್ರೀಪರ್ವ, ಶಾಂತಿ ಪರ್ವ, ಅನುಶಾಸನಿಕ ಪರ್ವ, ಆಶ್ವಮೇಧಿಕ ಪರ್ವ, ಆಶ್ರಮ ವಾಸಿಕ ಪರ್ವ, ಮೌಸಲ ಪರ್ವ, ಮಹಾಪ್ರಾಸ್ಥಾನಿಕ ಪರ್ವ, ಸ್ವರ್ಗಾರೋಹಣ ಪರ್ವ – ಎಂಬ ಎಂಟು ಪರ್ವಗಳಿವೆ. ಒಟ್ಟು ಸಂಧಿಗಳು (ಮಂಗಳಾ ಚರಣ ಸೇರಿ) 154 ಆಗಿವೆ. ಪದ್ಯಸಂಖ್ಯೆ 7614 ಆಗಿರುತ್ತದೆ. ಗಾತ್ರದಲ್ಲಿ ತಿಮ್ಮಣ್ಣ ಕವಿಯ ರಚನೆಯ ದ್ವಿಗುಣವಾಗಿರುತ್ತದೆ. ವರ್ಣನೆಯಲ್ಲಿ, ವಿವರಣೆಯಲ್ಲಿ,

ನೀತಿ ಧರ್ಮ ಬೋಧೆಯಲ್ಲಿ ಅದ್ವಿತೀಯವೆನಿಸುವ ಕಾವ್ಯವಿದು. ಮಾದರಿಗಾಗಿ ಕೆಲವು ತದ್ಪೋದಾಹರಣಗಳನ್ನು ಕೊಡಬಹುದು. ಕವಿ ತನ್ನ ಬಗ್ಗೆ ಹೇಳಿಕೊಂಡ ಮಾತಿದು.

ಅಪ್ಪಿದುದು ಮಾಪ್ಪೆನ್ನ ಜಲಧಿಯ
ತೆಪ್ಪದಿಂ ದಾಂಟಕ್ಕೆ ಯತ್ನಿಸು
ತೆಪ್ಪ ಗಾವಿಲನಂತೆ ಸುಕೃತಿಯ ರಚಿಸಿ ಪರಿಪದವ
ಅಪ್ಪಲೆಂ ದಾಂ ಹರಿಕಥಾಮೃತ
ದೊಪ್ಪದಿಂ ರಘುವರನ ಪದಕ
ನೊಪ್ಪಿಸುವನೀ ಕಾವ್ಯಕುಸುಮವ ಚರಣಕೆರಗುತಲಿ॥ (ಮಂಗಲಾಚರಣೆ)

ಭಾರತ ಕಾವ್ಯದ ಹಿರಿಮೆಯನ್ನುದ್ಘೋಷಿಸುವ ಪದ್ಯ ಹೀಗಿದೆ-
ವರದೆ ತುಂಗಾ ಸ್ನಾನ ಮಾಡುತ
ಸಿರಿಯನರ್ಚಿಸಿ ಕುಸುಮ ಮಾಲೆಯ
ಕೊರಲೊಲಡುತಲಿ ಹಣೆಗೆ ಕುಂಕುಮವಿಟ್ಟು ನಗೆಮೂಡಿ
ಪರಮ ಸಂತೋಷದಲಿ ಪತಿಯೇ
ಪರಮ ಪುರುಷನೆಂದು ಭಾವಿಸಿ
ನೆರೆವ ಭಾಮಿನಿಯಂತೆ ಸತ್ಕಾವ್ಯವಿದು ಭಾರತವು (ಮಂ-18)

ನೀತಿಬೋಧಕವಾಗಿ ಇದರಲ್ಲಿ ವಿದುರನೀತಿಯಿದೆ. ರಾಜಧರ್ಮಾನು ಶಾಸನ ಪರ್ವವೆನಿಸುವ ಶಾಂತಿ ಪರ್ವದಲ್ಲಿ ಧರ್ಮರಾಯನಿಗೆ ಮಾಡಿದ ನೀತಿಬೋಧೆಗಳು ಮನೋಜ್ಞವಾಗಿವೆ. ಭೀಷ್ಮನು ಧರ್ಮರಾಯನಿಗೆ ರಾಜ ಧರ್ಮೋಪದೇಶ ಮಾಡುವುದು ಓದಲೇ ಬೇಕಾದ ಭಾಗವೇ ಸರಿ. ಅಂದಿನ ರಾಜಧರ್ಮ ಇಂದಿನ ಮಂತ್ರಿಧರ್ಮಕ್ಕೆ ದಿಕ್ಸೂಚಿಯಾಗಿದೆ. ಕಾವ್ಯದ ಕಥಾವಸ್ತು ಅಲ್ಲಲ್ಲಿ ಉಪಕಥೆಗಳಿಂದ ವಿಶೇಷದ ಮೆರಗು ಪಡೆದಿದೆ. ಇಂತಹ ಈ ಕಾವ್ಯಗಳಾದರೂ ಪ್ರಕಾಶಿತವಾಗಿರುವುದು ಭುವನದ ಭಾಗ್ಯವೇ ಸರಿ. ಅನೀತಿಯಿಂದ ರಾಜ್ಯವಾಳಿದರೆ ಏನಾಗುವುದು? ಎಂಬುದನ್ನು ತಿಳಿಸುವ ಒಂದು ಪದ್ಯವಿದು. – (ಶಾಂತಿಪರ್ವ, ಸಂಧಿ 18 – 41)

ಕರವನಿಮ್ಮಡಿಗೈದು ಸತ್ಪ್ರಜೆ
ಗುರುವ ಹಿಂಸೆಯನಿತ್ತು ವಂಚಕ
ಹಿರಿಯನೆನಿಸುತ ಲಾಭಲೋಭಿಗಳನ್ನು ಪೆರ್ಚಿಸಲು
ಸಿರಿಯು ಕೊರೆಯುವಳವನ ಶೀಘ್ರದೊ
ಳರಸುತನ ತೊಲಗುವುದು ದುರ್ಮತಿ
ನರಕ ಕೂಪದಿ ಬಿದ್ದು ಭವಸಾಗರದಿ ನರಳುವನು ॥

## 4. ಕನ್ನಡ ರಾಮಾಯಣಗಳು (ತೌಲನಿಕ ವಿಮರ್ಶೆ)

ಲೇ: ಡಾ॥ ಎಸ್.ವಿ. ಪ್ರಭಾವತಿ, ಪ್ರಕಾಶಕರು: ಸುಮುಖ ಪ್ರಕಾಶನ, 1ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಬೆಂಗಳೂರು - 560 023, ಪುಟಗಳು: (ಡೆಮ್ಮಿ1/8) 438. ಬೆಲೆ: ರೂ.175.00 ಪ್ರಥಮ ಮುದ್ರಣ 2005.

ರಾಮಾಯಣ ಪರಂಪರೆಯಲ್ಲಿ ಕನ್ನಡ ರಾಮಾಯಣಗಳು - ಒಂದು ತೌಲನಿಕ ಅಧ್ಯಯನ ರೂಪದ ಈ ಸಂಶೋಧನ ಕೃತಿಯನ್ನು ಲೇಖಕಿ ತಮ್ಮ ಎಂಟು ವರ್ಷಗಳ ಅಭ್ಯಾಸದ ಫಲಿತಾಂಶವೆಂದು ಕೊಂಡಿದ್ದಾರೆ. ಎರಡನೆ ಸಂಶೋಧನವೆಂದಿದ್ದಾರೆ. ಮೊದಲನೆ ಸಂಶೋಧನ ಗ್ರಂಥ - 'ಕನ್ನಡ ಸಾಹಿತ್ಯದಲ್ಲಿ ದ್ರೌಪದಿ' ಎಂಬುದು ಅವರಿಗೆ ಪಿ.ಎಚ್.ಡಿ ಪದವಿ ನೀಡಿದುದಾಗಿದ್ದಿತು. ಕನ್ನಡ ರಾಮಾಯಣಗಳು - ಎಂಬ ಕೃತಿಗೆ ಡಾ॥ಹಂ.ಪ. ನಾಗರಾಜಯ್ಯನವರ ಮೆಚ್ಚಿಗೆಯ ಮುನ್ನುಡಿಯಿದೆ.

ಈ ಗ್ರಂಥದಲ್ಲಿ ಪೀಠಿಕೆಯಾಗಿ ರಾಮಾಯಣದ ವೈದಿಕ ಪರಂಪರೆಯ ಸಮೀಕ್ಷೆಯಿದೆ. ಹಿಂದೂಧರ್ಮ, ವೇದ, ಸಂಹಿತೆ, ಆರಣ್ಯಕ, ಬ್ರಾಹ್ಮಣ, ಉಪನಿಷತ್ತು, ಸ್ಮೃತಿ - ಮುಂತಾದವುಗಳಲ್ಲಿ ರಾಮಾಯಣದ ಛಾಯೆಯನ್ನು ಕಾಣಿಸಲಾಗಿದೆ. ವೈದಿಕ ಪರಂಪರೆ, ಜೈನ ಪರಂಪರೆ, ಬೌದ್ಧಪರಂಪರೆ, ಪುರಾಣಾಂತರ್ಗತ ಕಥೆ, ಕನ್ನಡೇತರ ರಾಮಾಯಣ, ವಿಶ್ವರಾಮಾಯಣ - ಇವುಗಳ ದಿಗ್ದರ್ಶನಗಳಿವೆ. ಕನ್ನಡದಲ್ಲಿ ರಾಮಾಯಣಗಳ ಸಂಖ್ಯೆ ಒಂದು ಸಾವಿರವನ್ನು ದಾಟಿದುದಾಗಿ ಪ್ರೊ॥ ಟಿ.ವಿ. ವೆಂಕಟಾಚಲ ಶಾಸ್ತ್ರಿಗಳ ಅಭಿಪ್ರಾಯವನ್ನಿಲ್ಲಿ ಪ್ರಸ್ತಾಪಿಸಲಾಗಿದೆ. ಪ್ರಕೃತ ಈ ಗ್ರಂಥದಲ್ಲಿ ಕನ್ನಡ ರಾಮಾಯಣಗಳನ್ನು ಪದ್ಯ, ಗದ್ಯ, ವಿಮರ್ಶೆ, ಅನುವಾದ, ನಾಟಕಗಳು - ಎಂಬ ವಿಭಾಗಗಳಲ್ಲಿ ಸಮೀಕ್ಷಿಸಲಾಗಿದೆ. ಅನುಬಂಧದಲ್ಲಿ ವಿಮಲಸೂರಿಯ ಪಉಮಚರಿಅ ಅಧ್ಯಾಯಗಳು, ರವಿಶೇಷನ ಪದ್ಮಚರಿತೆಯ ಅಧ್ಯಾಯಗಳು, ಶ್ರೀರಾಮಾಯಣ ದರ್ಶನಂ ಕಾವ್ಯದ ವಿಮರ್ಶಗ್ರಂಥಗಳು, ಅಡಿಗರ ಶ್ರೀರಾಮನವಮಿ, ವಿ.ಸೀ.ಯವರ ಕಾದಿರುವಳು ಶಬರಿ, ಹೀಗೊಂದು ರಾಮನ ಹಾಡು - ಮುಂತಾದ ನವ್ಯರೂಪದ ರಾಮಾಯಣ ಕಥಾತ್ಮಕಗಳನ್ನು ಪ್ರಸ್ತಾವಿಸಲಾಗಿದೆ.

ರಾಮಾಯಣ ಚಂಪೂಕಾವ್ಯವರ್ಗದಲ್ಲಿ ನಾಗಚಂದ್ರನ ರಾಮಚಂದ್ರ ಚರಿತಪುರಾಣ, ದೇವಚಂದ್ರನ ರಾಮಕಥಾಸಾರ, ಬಂಧುವರ್ಮನ ಜೀವ ಸಂಬೋಧನೆ - ಇವನ್ನು ವಿವರಿಸಲಾಗಿದೆ. ಷಟ್ಪದೀಕಾವ್ಯ ವರ್ಗದಲ್ಲಿ ತೊರವೆ ರಾಮಾಯಣ, ರಾಮಧಾನ್ಯಚರಿತೆ, ಕೌಶಿಕ ರಾಮಾಯಣ, ಶೇಷರಾಮಾಯಣ, ಕುಮುದೇಂದು ರಾಮಾಯಣ, ಮುದ್ದಣನ ಶ್ರೀರಾಮ ಪಟ್ಟಾಭಿಷೇಕ, ಚಂದ್ರ ಸಾಗರ ವರ್ಣಿಯ ಜಿನರಾಮಾಯಣ - ಇವುಗಳ

ವಿವರವಿದೆ. ಸಾಂಗತ್ಯ ಕಾವ್ಯಗಳಾಗಿ ಶಿಶುಮಾಯಣನ ಅಂಜನಾಚರಿತ್ರೆ, ದೇವಪ್ಪನ ರಾಮವಿಜಯ, ಗಿರಿಯಮ್ಮನ ಲವಕುಶರ ಕಾಳಗ–ಸೀತಾಕಲ್ಯಾಣ–ಇವನ್ನೆಲ್ಲ ವಿವರಿಸಿದ ಮೇಲೆ ಕುವೆಂಪು ಅವರ ರಾಮಾಯಣ ದರ್ಶನಂ, ಮಾಸ್ತಿಯವರ ಶ್ರೀ ರಾಮ ಪಟ್ಟಾಭಿಷೇಕಂ, ಮುಳಿಯ ತಿಮ್ಮಪ್ಪಯ್ಯನವರ ನವನೀತ ರಾಮಾಯಣ, ವೀರಪ್ಪ ಮೊಯ್ಲಿಯವರ ರಾಮಾಯಣ ಮಹಾನ್ವೇಷಣಂ – ಇವೆಲ್ಲ ಇಲ್ಲಿ ವಿವರಗೊಂಡಿವೆ. ಪು.ತಿ.ನ. ಅವರ ಗೀತನಾಟಕಗಳು, ಡಿ.ವಿ.ಜಿ. ಯವರ ಶ್ರೀರಾಮಪರೀಕ್ಷಣಂ – ಇವೂ ಉಲ್ಲೇಖಿತಗೊಂಡಿವೆ. ಗದ್ಯಕಾವ್ಯಗಳಾಗಿ ಮುದ್ದಣನ ಶ್ರೀರಾಮಾಶ್ವಮೇಧ ಮತ್ತು ಅದ್ಭುತರಾಮಾಯಣ, ಚಾವುಂಡರಾಯ ಪುರಾಣ, ಪುಣ್ಯಾಸ್ರವ – ಇವೆನ್ನೆಲ್ಲ ನೋಡುತ್ತ ಹೋದಾಗ ಆಧುನಿಕರ ಅರಿವಿಗೆ ಬರತಕ್ಕ ಯಾವುದನ್ನು ಕೈ ಬಿಟ್ಟಂತೆ ತೋರುವುದಿಲ್ಲ.

ಹೀಗೆ ಗ್ರಂಥವಿದು ಕನ್ನಡ ರಾಮಾಯಣಗಳ ತೌಲನಿಕ ಅಧ್ಯಯನಮಯವಾಗಿದ್ದು ಕನ್ನಡಿಗರು ಅಭಿಮಾನಗೊಂಡು ಓದಬಹುದಾದ ಮೌಲಿಕ ಕೃತಿಯಾಗಿದೆ. ಇಂತಹದೊಂದು ಸಂಶೋಧನ ಗ್ರಂಥ ಬಂದಿರುವುದು ನಮ್ಮೆಲ್ಲರ ಭಾಗ್ಯವೆನ್ನ ಬಹುದಾಗಿದೆ.

## 5. ಸಂಕೇತಿ – ಶತಮಾನದ ಪತ್ರಗಳು

ಸಂಪಾದಕರು: ಡಾ॥ ಪ್ರಣತಾರ್ತಿಹರನ್, ಪ್ರಕಾಶಕರು: ಸಮುದಾಯ ಅಧ್ಯಯನ ಕೇಂದ್ರ, ಗೋಕುಲಂ ಪಾರ್ಕ್ ರಸ್ತೆ, ಗೋಕುಲಂ, ಮೈಸೂರು – 570 002, ಪುಟಗಳು: (ಕಿರೀಟ ಚತುರ್ದಶ) 434, ಬೆಲೆ: ರೂ.500.00, ಪ್ರಥಮ ಮುದ್ರಣ 2004.

ಸಂಕೇತಿ ಎಂಬುದು ಬ್ರಾಹ್ಮಣ ಜನಾಂಗದ ಒಂದು ಉಪಸಂಸ್ಕೃತಿಯ ಸಂಕೇತ. ಅಂತಹ ಸಂಕೇತಿ ಅಧ್ಯಯನದ ಎರಡನೆಯ ಸಂಪುಟವಾಗಿ ಸಮಸ್ತ ಸಂಕೇತಿ ಬಂಧುಗಳಿಗೆ ಅರ್ಪಣೆಯ ರೂಪದಲ್ಲಿ ಈ ಗ್ರಂಥ ಈಗ ಪ್ರಕಾಶಿತವಾಗಿದೆ. ಇದು ಮುಖ್ಯವಾಗಿ ಸಂಕೇತಿ ಸಮುದಾಯಕ್ಕೆ ಸಂಬಂಧಿಸುವ ಸಂಶೋಧನೆ, ದಾಖಲಾತಿ, ಕ್ರೋಢೀಕರಣಗಳನ್ನು ಒಳಗೊಂಡಿದೆ. ಸಂಕೇತಿ ಶಬ್ದವು ಜನವರ್ಗದ ಸೂಚಿಯಾದರೂ ಅದು ಮಾನವೀಯ ಅನುಸಂಧಾನವಾಗಿರುವುದರಿಂದ ಎಲ್ಲರಿಗೂ ಗ್ರಾಹ್ಯವೂ ಸಂಗ್ರಾಹ್ಯವೂ ಆಗಿದೆಯೆನ್ನಲು ಅಡಿಯಿಲ್ಲ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಡಾ॥ಕೆ. ಅನಂತರಾಮು – ಅವರ ಮುನ್ನುಡಿಯಿಂದ ಮೆರುಗು ಪಡೆದಿದೆ. ಇದು ಸಂಕೇತಿ ಸಮುದಾಯದ (1891–2003) ಶತಮಾನದ ಪತ್ರ ಸಾಹಿತ್ಯ ಸಂಕಲನವಾಗಿರುತ್ತದೆ.

ಪತ್ರದ ವಿಷಯಗಳು ಅನಂತವಾಗಿರುವುದು ಸಹಜ. ಇದರಲ್ಲಿರತಕ್ಕ ಪತ್ರಗಳು – ಸಾಮಾಜಿಕ, ರಾಜಕೀಯ, ಸಾಹಿತ್ಯಿಕ, ಸಮಸ್ಯಾತ್ಮಕ, ಸಂಶೋಧಾತ್ಮಕ, ಉಪದೇಶಾತ್ಮಕ – ಮುಂತಾದ ರೂಪದವಾಗಿರುತ್ತವೆ. ಬಾದರಾಯಣರ ಬ್ರಹ್ಮಸೂತ್ರಗಳು 555 ಆಗಿರುವಂತೆ, ಇಲ್ಲಿಯ ಪತ್ರಗಳು ಸಂಖ್ಯೆಯಲ್ಲಿ 555 ಆಗಿರುತ್ತದೆ. ನಾಲ್ಕು ಸಾವಿರಕ್ಕೆ

ಮಿಕ್ಕಿ ಸಂಗೃಹೀತವಾದ ಸಂಕೇತಿ ಪತ್ರಗಳಲ್ಲಿ ಆಯ್ದು ಸಂಪಾದಕರು ಇಪಿಪ್ಪನ್ನು ಎರಡು ಭಾಗಗಳಾಗಿ ಕಾಣಿಸಿದ್ದಾರೆ. ಕೊನೆಗೆ ಅನುಬಂಧವಿದೆ. ಮೊದಲನೆಯ ಭಾಗದಲ್ಲಿ ಕೌಟುಂಬಿಕ ಪತ್ರಗಳಿವೆ. ಅವು ಕೂಡ ಹದಿನೆಂಟು ಗುಚ್ಛಗಳಾಗಿವೆ. ಕ್ರಮವಾಗಿ ಗುಚ್ಛಗಳಿವು. ಜಾತಾದಿ (ಜಾತಕರ್ಮಾದಿಗೆ ಸಂಬಂಧಿಸಿದವು), ಅಧ್ಯಯನ, ವಿವಾಹ, ವ್ಯವಸಾಯ (ಉದ್ಯೋಗ), ಸಂಸ್ಕಾರ, ಜಿಜ್ಞಾಸೆ, ಆರೋಗ್ಯ, ಆಂತರಿಕ, ಜುಗುಪ್ಸೆ, ಆಸ್ತಿ ವಿಭಾಗ, ಗೃಹಕೃತ್ಯ, ಯೋಗಕ್ಷೇಮ, ತಂದೆ ಮಕ್ಕಳ ನಡುವೆ, ಒಂದೇ ಕುಟುಂಬದ ಪತ್ರಗಳು, ಪ್ರಶಾಂತ, ಸಾವು – ಸಾಂತ್ವನ, ದೇವನಾಗರಿ ಲಿಪಿಯವು, ಹೊಸ ಅಲೆಯವು. ಮುಂದೆ ಎರಡನೆಯ ಭಾಗದಲ್ಲಿ ಪ್ರೊ॥ ಶ್ರೀಕಂಠಸ್ವಾಮಿ ಅವರ 120 ಪತ್ರಗಳು ವಿವಿಧ ಬಗೆಗಳಾಗಿ ಕಾಣಿಸುತ್ತದೆ.

ಪತ್ರ ಸಾಹಿತ್ಯದ ಮುಖ್ಯಾಂಶವನ್ನು ಗ್ರಹಿಸಿಕೊಳ್ಳಲು ಅನುಕೂಲವಾಗುವಂತೆ ಅಲ್ಲಲ್ಲಿ ಅವುಗಳ ಹಿನ್ನೆಲೆಯ ವಿವರಣೆ ವಿಮರ್ಶೆಗಳು ಇರುತ್ತವೆ. ಒಳ್ಳೊಳ್ಳೆಯ ನುಡಿಗಟ್ಟುಗಳಿಂದ, ಭಾವಪೂರ್ಣತೆಯಿಂದ ಜೀವನ ಚಿತ್ರಗಳಿಂದ ಕಷ್ಟ ನಿಷ್ಠುರ ಪರಿಸ್ಥಿತಿ ನಿರೂಪಣೆಗಳಿಂದ ಕೂಡಿದ ವಿಭಿನ್ನ ಭಾಷಾಶೈಲಿ ಇವುಗಳಲ್ಲಿ ಕಂಗೊಳಿಸುತ್ತದೆ. ಕನ್ನಡದಲ್ಲಿ ಪತ್ರ ವ್ಯವಹಾರ ಎಷ್ಟೇ ಇದ್ದರೂ ಅವುಗಳ ಸಂಕಲನ ಪ್ರಕಾಶನಗಳು ಪ್ರಬುದ್ಧವಾಗಿ ಬೆಳೆದು ಬಂದಿಲ್ಲ. ಹಾಗೆ ಬಂದಿರುವುದು ಇದೇ ಎನ್ನಬಹುದು. ಇಂತಹ ಪರಿಶೀಲನೆಯನ್ನು ನಾವು ಮುನ್ನುಡಿಯಲ್ಲಿ ಕಾಣಬಹುದು. ಇಂತಹ ಸಂಗತಿಯನ್ನು ಈ ಗ್ರಂಥ ರಚನೆಯ ಹಿನ್ನೆಲೆಯಲ್ಲಿ ಸಂಪಾದಕರು ತಮ್ಮ ಅರಿಕೆಯಲ್ಲಿ ಹೇಳಿಕೊಂಡಿದ್ದಾರೆ. ಪ್ರಸ್ತುತ ಸಂಪುಟವನ್ನು ಕುರಿತು ಅನೇಕ ವಿದ್ವಾಂಸರ ಅನಿಸಿಕೆಗಳನ್ನು ಕೊಟ್ಟಿರುವುದು ಈ ಗ್ರಂಥ ಮಾಹಿತಿಯನ್ನು ಹೆಚ್ಚಿಸಿದೆ.

– **ಪ್ರೊ. ಟಿ.ಕೇಶವಭಟ್ಟ** (ಕ್ರ.ಸಂ. 2 ರಿಂದ 5)

## 6. ಸಂತ ತುಕಾರಾಮರ ಇಪ್ಪತ್ತೆಂಟು ಅಭಂಗಗಳು

(ಕನ್ನಡ ಲಿಪಿಯಲ್ಲಿ ಮೂಲ ಮರಾಠಿ ಅಭಂಗಗಳೊಂದಿಗೆ). ಲೇ: ಶ್ರೀಮತಿ ಸರಿತಾ ಜ್ಞಾನಾನಂದ. ಸಂಪಾದಕರು: ಸಂಸ್ಕೃತಿ ಸಾಹಿತ್ಯ ಪ್ರತಿಷ್ಠಾನ, ನಂ. 1122, 5ನೇ ಮೇನ್, ಗೋಖಲೆ ರಸ್ತೆ, ಜಿ.ಇ.ಎಂ.ಎಲ್. 3ನೇ ಸ್ಟೇಜ್, ರಾಜರಾಜೇಶ್ವರಿ ನಗರ, ಬೆಂಗಳೂರು – 560 098. ಮುದ್ರಕರು: ವಿನ್ಯಾಸ್ ಪ್ರಿಂಟ್, ನಂ.23, 3ನೇ ಅಡ್ಡರಸ್ತೆ, ಸಂಜಾಂಬ ಅಗ್ರಹಾರ, ಚಾಮರಾಜಪೇಟೆ, ಬೆಂಗಳೂರು – 560 018.

"ಸಂತ ತುಕಾರಾಮರ ಇಪ್ಪತ್ತೆಂಟು ಅಭಂಗಗಳು". ಎಂಬ ಪುಸ್ತಕವನ್ನು ಬರೆದಿರುವವರು ಶ್ರೀಮತಿ ಸರಿತಾ ಜ್ಞಾನಾನಂದರು. ಈ ಪುಸ್ತಕದಲ್ಲಿ ಮರಾಠಿಯ ಸಂತ ತುಕಾರಾಮರ ಇಪ್ಪತ್ತೆಂಟು ಅಭಂಗಗಳ ವಿವರಣೆಯನ್ನೂ ನೀಡಿರುವರು. ಅವರು ಮರಾಠಿಯಿಂದ ಕನ್ನಡಕ್ಕೆ ಅನುವಾದ, ಮೂಲ, ತಾತ್ಪರ್ಯ, ವಿಶೇಷ ವಿವರ, ಗ್ರಂಥದ ವಿವರಣೆಯನ್ನು ಬಹಳ ಅಂದವಾಗಿ ನೀಡಿರುವರು.

ಸಂತ ತುಕಾರಾಮರ ಅಭಂಗಗಳ ವಿವರಣೆಯನ್ನು, ಮೂಲ ಮರಾಠಿ ಅಭಂಗಗಳ ಅರ್ಥವನ್ನು ತಿಳಿಸುವ ಮುನ್ನ, ತುಕಾರಾಮರ ಭವ್ಯ ಜೀವನ, ವ್ಯಕ್ತಿತ್ವ, ಅವರುಪಟ್ಟ ಕಷ್ಟ ಬವಣೆಗಳನ್ನು ಮತ್ತು ಭಗವಂತನ ಮಹಿಮೆಯನ್ನು ವರ್ಣಿಸಿದ್ದಾರೆ. ಪಂಡರಾಪುರದ ಪಾಂಡುರಂಗ ವಿಠ್ಠಲನ ಭಕ್ತರಾಗಿ ಸಂತರಾದರು. ಸರಿತಾ ಜ್ಞಾನನಂದರ ಬರವಣಿಗೆಯಿಂದ ತುಕಾರಾಮರು ಕೇವಲ ಸಂತ ಕವಿಯಲ್ಲ, ಅವರು ಬಹುಶ್ರುತ ವಿದ್ವಾಂಸರು ಎಂದು ಅರಿವಾಗುತ್ತದೆ.

ಸಂತ ತುಕಾರಾಮರ ಅಭಂಗಗಳನ್ನು ಕೇಳಲು ಇಂಪಾಗಿರುತ್ತವೆ. ತುಕಾರಾಮರು ಬರೆದದ್ದು ಐದು ಕೋಟಿ ಹದಿನೇಳು ಲಕ್ಷ ಅಭಂಗಗಳು ಎಂದು ಹೇಳಿಕೆ ಆದರೆ ಈ ಇಪ್ಪತ್ತೆಂಟು ಅಭಂಗಗಳು ಪಂಚಾಲರ ಕಿರಿಯ ವಿಶ್ವಕೋಶವಾಗಿದೆ.

ಪಂಚಮುಖಿ ವಿಶ್ವಕರ್ಮನಿಂದ ಉದ್ಭವಿಸಿದ ಋಗಾದಿ ವೇದಗಳು ಪಂಚಬ್ರಹ್ಮರ ಮೂಲಕ ಲೋಕದಲ್ಲಿ ವ್ಯಾಪಿಸಿತೆಂಬುದು ಇಲ್ಲಿಯ ಪ್ರಧಾನ ವಿಷಯ. ಈ ಭಗವಂತನ ನಿರಂತರ ಧ್ಯಾನವೇ ಸೋಹಂ ಜಪ ಎಂಬುದನ್ನು ತುಕಾರಾಮರು ಪ್ರಸ್ತಾಪಿಸಿದ್ದಾರೆ. ಈ ಇಪ್ಪತ್ತೆಂಟು ಅಭಂಗಗಳಲ್ಲಿ ಇರುವುದು ಭಗವಂತನನ್ನು ಅನೇಕ ರೂಪಗಳಲ್ಲಿ ತೋರಿಸುವುದು ಮತ್ತು ಜಗತ್ತಿನ ಸೃಷ್ಟಿ, ಮನುಜನು ಎಂದೂ ದೇವರ ಭಕ್ತನಾಗಿ ಇರಬೇಕು.

ಶ್ರೀಮತಿ ಸರಿತಾ ಜ್ಞಾನಾನಂದ ಅವರ ಬರವಣಿಗೆ, ಅಭಂಗಗಳ ವಿಶ್ಲೇಷಣೆ, ವಿವರಣೆ, ಎಲ್ಲಾ ವಿಷಯಗಳೂ ಈ ಗ್ರಂಥದಲ್ಲಿ ಚೆನ್ನಾಗಿ ಮೂಡಿ ಬಂದಿದೆ.

**– ವೈ. ಪ್ರತಿಮಾ ಮೋಹನ್**

## 7. "ಇಲ್ಲಿಂದೆಲ್ಲಿಗೆ' – ಒಂದು ಅವಲೋಕನ

**"ಇಲ್ಲಿಂದೆಲ್ಲಿಗೆ"** ಲೇಖಕರು : ಎಸ್.ಟಿ. ರಾಧಾಕೃಷ್ಣ. ಪ್ರಕಾಶಕರು : ಎಸ್.ಟಿ. ರಾಧಾಕೃಷ್ಣ. ನಂ. 813, 1ನೇ 'ಸಿ' ಮುಖ್ಯರಸ್ತೆ, 8ನೇ ಅಡ್ಡರಸ್ತೆ, 2ನೇ ಹಂತ, ಗಿರಿನಗರ, ಬೆಂಗಳೂರು–560 085. ವರ್ಷ. 2005 ಬೆಲೆ: 60.00 ರೂ.

ಕೀರ್ತಿಶೇಷ ಶ್ರೀ ಎಂ.ಪಿ. ಸೀತಾರಾಮಯ್ಯ ಕನ್ನಡ ಸಾಹಿತ್ಯಾಕಾಶದ ಸ್ಥಿರ ನಕ್ಷತ್ರ. ಶ್ರೀ ಸೀ.ತಿ. ರಾಧಾಕೃಷ್ಣ ಅವರ ಮಗ, ವೃತ್ತಿಯಿಂದ ಇಂಜಿನಿಯರ್. ಇವರಲ್ಲಿನ ಸಾಹಿತ್ಯದತ್ತ ಇದ್ದ ಪ್ರವೃತ್ತಿ, ನಿವೃತ್ತಿಯ ನಂತರ ವ್ಯಕ್ತಗೊಂಡಿದೆ. ಅದರ ಚೊಚ್ಚಲ ಫಲವೇ "ಇಲ್ಲಿಂದೆಲ್ಲಿಗೆ" "2 1" ಕೃತಿ. ಇಲ್ಲಿ ಇಪ್ಪತ್ತೇಳು ಕವನ, ಜೊತೆಗೆ ಕಿರು ಪ್ರವಾಸ ಕಥನ ಇದೆ.

'ನನಗೆ ತಿಳಿದ ಹಾಗೆ' ಹಾಗೂ 'ನನ್ನಂತಹ ಸಾಮಾನ್ಯ ಜನಗಳಿಗೆ ತಿಳಿಯುವ ಹಾಗೆ ಹೇಳಬೇಕೆಂಬ ಹಂಬಲ' ಪ್ರವಾಸ ಕಥನದ ನಡು – ನಡುವೆ ಪ್ರಕಟ. ಕವನಗಳ ಆಶಯವಾದರೂ ಅದೇ ಎಂಬುದು ಸುಸ್ಪಷ್ಟ, ಸರಳಾತಿಸರಳ, ಸಹಜ – ಸುಂದರ ಭಾವಸಮ್ಮಿಳನವಿಲ್ಲಿದೆ. ಪ್ರತಿಮೆ, ಸಂಕೇತ – ತಂತ್ರಗಳ ಗೊಡವೆ, ಗೋಜು – ಗೊಂದಲ ಇಲ್ಲಿಲ್ಲ. ತಿಳಿಸಬೇಕೆನಿಸುದರ ತಿರುಳು ಇಲ್ಲಿ ತಿಳಿ – ತಿಳಿ, ಅತ್ಯಂತ – ಆತ್ಮೀಯ ಶೈಲಿ. ಯಾವುದಕ್ಕೂ ವ್ಯಾಖ್ಯೆ, ವ್ಯಾಖ್ಯಾನ – ವಿವರಣೆ ಬೇಕಿಲ್ಲ. ವಿವರ ವಿಮರ್ಶೆ, ವಿಶ್ಲೇಷಣೆ ಅನಗತ್ಯ.

ಹಲವು ಕವನಗಳಲ್ಲಿ ಬಾಲ್ಯದ ಬಡತನ. ಬಡತನ – ಬವಣೆಗಳ ಬಿಚ್ಚು ಮಾತಿನ ಬಣ್ಣನೆ, ನಾಸ್ತಿಕತೆಯ ಪ್ರತಿರೂಪದಂತೆಯೇ ಇದ್ದು ರಾಮನವಮಿಯ ಪುಣ್ಯದಿನದಂದೇ ಕಣ್ಣುಚ್ಚಿದ 'ರಾಮಣ್ಣನ ಸ್ಮರಣೆ' ಯೂ ಇದೆ. (ಕವಿ, ರಾಮಚಂದ್ರ ಶರ್ಮರ ನೆನಪಿಗೆ)

"ಅಪ್ಪನಿಂದ ಕಲಿತಿದ್ದನ್ನು ಮಕ್ಕಳಿಗೂ ಹೇಳುತ್ತಿದ್ದೇನೆ", "ನೀವು ತೋರಿಸಿಕೊಟ್ಟ ಹಾದಿಯಲಿ ನಡೆದು ಹಾಸುವೆವು" ಹಾದಿಯುದ್ದಕ್ಕೂ ಹೂವು" ಈ ಸಾಲುಗಳಲ್ಲಿ ಪರಂಪರೆಯ ಕುರಿತ ಗೌರವ ಪ್ರಕಟಣೆಗೊಂಡಿದೆ. 'ಹೊಸ ವರುಷ' 'ಕೋಪವೇಕೆ ಮನದನ್ನೆ'ಗಳಲ್ಲಿ ಪರ ಸಂಸ್ಕೃತಿ–ನೆಲಗಳ ವ್ಯಾಮೋಹ, ಅಂಧಾನುಕರಣೆಗಳ ಸ್ಪಷ್ಟ ನಿರಾಕರಣೆ 'ಛೆ, ಹೀಗಾಗ ಬಾರದಿತ್ತು', 'ಮುಸುಕಿನ ಗುದ್ದು', 'ಸಂಭ್ರಮ' 'ಕೈಲಾಸಯಾತ್ರೆ', 'ಸೀತಾರೇಖೆ'ಗಳಲ್ಲಿ ಸ್ವಾನುಭವಗಳ ಸ್ವಾರಸ್ಯ ನಿರೂಪಣೆ ಇದೆ. 'ಸವತಿ ಮತ್ಸರ' 'ರಮ್ಮಿ ಆಟ'ದಲ್ಲಿ ಪ್ರೀತಿಯ ಹವ್ಯಾಸಗಳ ವರ್ಣನೆ ಇದೆ.

ಕೈಲಾಸ–ಮಾನಸ ಸರೋವರ ಯಾತ್ರೆ ಸ್ವಂತ ಅನುಭವಗಳ ಸುಂದರ ಕಥನವಷ್ಟೇ ಅಲ್ಲದೆ ಅಲ್ಲಿ ಅಗತ್ಯ ಮಾಹಿತಿ – ಮಾರ್ಗಸೂಚಿಗಳ ಕೈಪಿಡಿಯಿದೆ. ಚಿಕ್ಕ – ಚೊಕ್ಕ ನಿರೂಪಣೆಯಲ್ಲಿ ರಾಧಾಕೃಷ್ಣರ ವೃತ್ತಿ ನೈಪುಣ್ಯ ಯೋಚನಾ – ಯೋಜನಾಕ್ರಮಗಳೇ ಕೆಲಸಮಾಡಿವೆ.

ಕೃತಿಯ ಭಾಷೆ, ಶೈಲಿ, ವಿಚಾರಸರಣಿಯ ಜೊತೆಗೆ ಕೃತಿಯ ಹೆಸರು ಕೂಡ ಸರಳವಾದರೂ ಚೇತೂಹಾರಿ, ಚಿಂತನೆಗೆ ದಾರಿ. ಪುಸ್ತಕ ಓದಿ ಕೆಳಗಿಡುವಾಗ ಥಟ್ಟನೇ ಹೊಳೆದ ಪ್ರಶ್ನೆ; 'ಇಲ್ಲಿದೆಂಲ್ಲಿಗೆ?' 'ಇಲ್ಲಿಂದ' ಆರಂಭವಾದ ರಾಧಾಕೃಷ್ಣರ ಸಾಹಿತ್ಯಯಾತ್ರೆ ನಮ್ಮನ್ನು ಮುಂದೆ ಕರೆದೊಯ್ಯುವುದಾದರೂ 'ಎಲ್ಲಿಗೆ'!?

– ಕೆ.ಎಸ್. ನರಸಿಂಹಮೂರ್ತಿ

## 8. ಸಾಮಾಜಿಕ ಕಳಕಳಿ – ತಲಸ್ಪರ್ಶಿ ವಿಶ್ಲೇಷಣೆಯ ಪ್ರೌಢ ಪ್ರಬಂಧ

**'ಸಂಸ್ಕೃತಾನುಕರಣ ಮತ್ತು ವಿಶ್ವಬ್ರಾಹ್ಮಣರು'** ಲೇಖಕರು : ಡಾ॥ ಜಿ. ಜ್ಞಾನಾನಂದ, ಪ್ರಕಾಶಕರು : ಸಂಸ್ಕೃತಿ ಸಾಹಿತ್ಯ ಪ್ರತಿಷ್ಠಾನ. ನಂ. 1122, 5ನೇ ಮೇನ್, ಬ್ರಿಗೇಡಿಯರ್ ಗೋಖಲೆ ರಸ್ತೆ, ಬಿಇಎಂಎಲ್ 3ನೇ ಹಂತ, ರಾಜರಾಜೇಶ್ವರಿ ನಗರ ಬೆಂಗಳೂರು – 560098. ಪ್ರಥಮ ಮುದ್ರಣ : 2005 ಪುಟಗಳು : 50+382 ಬೆಲೆ : ರೂ. 250.00.

ಹೊಸಗನ್ನಡದಲ್ಲಿ ಶಾಸ್ತ್ರೀಯ ಶಿಲ್ಪ ಸಾಹಿತ್ಯದ ಪ್ರಕಟಣೆ ಹಾಗೂ ಈ ಕ್ಷೇತ್ರದಲ್ಲಿ ಅಧಿಕಾರಯುತವಾಗಿ ಬರೆಯಬಲ್ಲವರು ಕಡಿಮೆ. ಹೀಗೆ ವಿರಳವಾಗಿಯಾದರೂ ಬರೆಯಬಲ್ಲವರಲ್ಲಿ ಡಾ.ಜಿ. ಜ್ಞಾನಾನಂದರವರು ಮೊದಲ ಸಾಲಿನಲ್ಲಿ ನಿಲ್ಲುತ್ತಾರೆ. ಶಿಲ್ಪಾದರ್ಶನ ಎರಡು ಸಂಪುಟಗಳು, ಕಾಶ್ಯಪ ಶಿಲ್ಪಶಾಸ್ತ್ರದ ಎರಡು ಸಂಪುಟಗಳು, ಮೂರು ಮುದ್ರಣಗಳನ್ನು ಕಂಡ ವಾಸ್ತು ಪುರುಷ : ನೆಲೆ – ಹಿನ್ನೆಲೆ ಮುಂತಾದ ಹದಿನೈದಕ್ಕೂ ಹೆಚ್ಚು ಮೌಲಿಕ ಕೃತಿಗಳು ಈ ಮಾತನ್ನು ಸಮರ್ಥಿಸುತ್ತವೆ. ಇವರ ಕೃತಿಗಳಲ್ಲಿರುವ ಅಚ್ಚುಕಟ್ಟಾದ ನಿರೂಪಣೆ, ಸಮಗ್ರತೆಯಿಂದ ಕೂಡಿದ ಉಪಯುಕ್ತ ವಿವರಣೆಗಳು ಸಾಮಾನ್ಯ ವಾಚರಿಗೂ ಶಾಸ್ತ್ರೀಯ ವಿಷಯಗಳು ಸುಲಭವಾಗಿ ಗ್ರಾಹ್ಯವಾಗುವಲ್ಲಿ ಸಹಕಾರಿಯಾಗಿವೆ. ಹೀಗೆ ಲೋಕೋಪಕಾರಕ ಶಿಲ್ಪಶಾಸ್ತ್ರ ಹಾಗೂ ಇದಕ್ಕೆ ಸಂಬಂಧಿಸಿದ ಇತರ ಗ್ರಂಥಗಳನ್ನು ಕನ್ನಡದಲ್ಲಿ ಬೆಳಕಿಗೆ ತಂದ ಈ ವಿದ್ವಾಂಸರು ಸಮಾಜ ಶಾಸ್ತ್ರಜ್ಞರೊಬ್ಬರ ಸಿದ್ಧಾಂತ ಹಾಗೂ ಅದರ ಸಂಬಂಧದಲ್ಲಿ ಉಲ್ಲೇಖಿತ ಉದಾಹರಣೆಗಳ ಅಸಮರ್ಪಕತೆಯನ್ನು ಈ ಸಂಪ್ರಬಂಧದಲ್ಲಿ ಎತ್ತಿ ತೋರಿಸಿದ್ದಾರೆ.

"ಸಂಸ್ಕೃತಾನುಕರಣ ಮತ್ತು ವಿಶ್ವಬ್ರಾಹ್ಮಣರು" ಎಂಬ ಈ ವಿದ್ವತ್ ಕೃತಿ ಹದಿನೈದು ಅಧ್ಯಾಯಗಳನ್ನೂ ಐದು ಅನುಬಂಧಗಳನ್ನೂ ಒಳಗೊಂಡಿದೆ. ಸಂಸ್ಕೃತಾನುಕರಣ ಎಂದರೇನು? ಎಂಬ ಮೊದಲ ಅಧ್ಯಾಯದಲ್ಲಿ – ಹಿಂದೂ ಸಮಾಜದ ಶ್ರೇಣೀಕೃತ ಜಾತಿಪದ್ಧತಿ, ವರ್ಣವ್ಯವಸ್ಥೆ, ಅದರಲ್ಲಿ ಕಾಣಬರುತ್ತಿರುವ ಬದಲಾವಣೆಗಳು ಇತ್ಯಾದಿಗಳ ಬಗ್ಗೆ ಬಹು ವಿಶೇಷವಾಗಿ ಅಧ್ಯಯನ ಮಾಡಿ ಜಗತ್ತಿನ ಸಮಾಜಶಾಸ್ತ್ರಜ್ಞರ ಗಮನ ಸೆಳೆದಿದ್ದ ಪ್ರೊ.ಎಂ.ಎನ್.ಶ್ರೀನಿವಾಸರ ಸಿದ್ಧಾಂತವನ್ನು ವಿವರಿಸಿ ಅದರಲ್ಲಿರುವ ವಿಶ್ಲೇಷಣಾಂಶಗಳನ್ನು ಗುರುತಿಸಿದ್ದಾರೆ.

ಮುಂದಿನ ಅಧ್ಯಾಯಗಳಲ್ಲಿ ಸ್ಮಿಥ್ ಅರ್ಥವ್ಯಾಪ್ತಿ, ವೃತ್ತಿ ಮತ್ತು ಜಾತಿವಾಚಕಗಳು, ವರ್ಣದ ಎರಡು ಶಾಖೆಗಳು, ಜನ್ಮ – ಕರ್ಮ ಬ್ರಾಹ್ಮಣ್ಯದ ಕಥೆ, ಐತಿಹ್ಯಗಳ ಮುಳ್ಳುಗಂಟುಗಳು, ಶಿಲ್ಪಿಗೆ ಬ್ರಾಹ್ಮಣ್ಯದ ಅವಶ್ಯಕತೆ, ಶಿಲ್ಪಿ ಬ್ರಾಹ್ಮಣರು ಎದುರಿಸಿದ ಸಾಮಾಜಿಕ ತೊಂದರೆಗಳು, ಪ್ರೊ. ಶ್ರೀನಿವಾಸ್ ಅವರು ಗುರುತಿಸಿರುವ ಕೊರತೆಗಳು, ಶಿಲ್ಪಿಗಳ ಸೋಲಿನ ಫಲಶೃತಿ – ಹೀಗೆ ಬಹು ವಿಸ್ತಾರವಾಗಿ ತಾವು ಪ್ರತಿಪಾದಿಸುವ

ವಿಚಾರಗಳನ್ನು ಕೂಲಂಕಷವಾಗಿ ಚರ್ಚಿಸಿದ್ದಾರೆ.

ಅಬ್ರಾಹ್ಮಣ ಶಿಲ್ಪಿಗಳು ಮೊದಲೇ ಬೇರೊಂದು ಜಾತಿಯಲ್ಲಿ ಸೇರಿರುವುದರಿಂದ, ಬ್ರಾಹ್ಮಣ್ಯವು ಅವರ ವೃತ್ತಿಗೆ ಬೇಕಿಲ್ಲದೇ ಇರುವುದರಿಂದ, ಅವರು ಬ್ರಾಹ್ಮಣ್ಯವನ್ನು ಕೇಳಲೇ ಇಲ್ಲ. ವೈದಿಕ ಶಿಲ್ಪವನ್ನು ಮಾಡುವ ಬ್ರಾಹ್ಮಣ ಮೂಲದ ಶಿಲ್ಪಿಗಳು ಬ್ರಾಹ್ಮಣರೇ ಆದುದರಿಂದ ಅವರಿಗೆ ಬ್ರಾಹ್ಮಣ್ಯವು ಬೇಕಾಗಿರುವುದು ಸಂಸ್ಕೃತಾನುಕರಣದ ಫಲವಾದ ತೋರಿಕೆಯ ಗೌರವಕ್ಕಾಗಿಯಲ್ಲ, - ಅವರ ಬದುಕಿನಾಧಾರವಾಗಿರುವ ವೃತ್ತಿ ನಿರ್ವಹಣೆಗಾಗಿ. ಆದ್ದರಿಂದ ಶಿಲ್ಪಿ ಬ್ರಾಹ್ಮಣರಿಗೆ (ಸ್ಮಿಥ್‌ಗಳಿಗೆ) ಸಂಸ್ಕೃತಾನುಕರಣ ಸಿದ್ಧಾಂತವೇ ಅನ್ವಯವಾಗುವುದಿಲ್ಲ. ಸಂಸ್ಕೃತಾನುಕರಣ ಸಿದ್ಧಾಂತದ ಅನ್ವಯ ಬ್ರಾಹ್ಮಣನ ನೆರವಿನಿಂದ ಯಾವ ಪೌರಾಣಿಕ ಆಚಾರವನ್ನು ಶಿಲ್ಪಿಗಳು ಅಭ್ಯಾಸ ಮಾಡಿಕೊಳ್ಳಲಿಲ್ಲ. ಬದಲಿಗೆ ಬ್ರಾಹ್ಮಣನ ಆಚಾರವನ್ನೇ ತಮ್ಮ ಮನೆಗಳಲ್ಲಿ ತಾವೇ ಸ್ವಯಂಮಾಚಾರ್ಯವಾಗಿ ನಿರ್ವಹಿಸುತ್ತಿದ್ದರು; ಈಗಲೂ ಅದೇ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಅವರು ತಾವೇ ಮೂಲ ಬ್ರಾಹ್ಮಣರು, ಸಪ್ತಾರ್ಷೇರು ನಂತರದವರು ಎನ್ನುತ್ತಾರೆ - ಆದ್ದರಿಂದ ಪ್ರೊಫೆಸರ್ ಅವರ ಉದಾಹರಣೆಯೇ ಸೂಕ್ತವಲ್ಲದ್ದು, ಶಿಲ್ಪಿ ಬ್ರಾಹ್ಮಣರಿಗೂ ಸಂಸ್ಕೃತಾನುಕರಣ ಸಿದ್ಧಾಂತಕ್ಕೂ ಯಾವ ಸಂಬಂಧವೂ ಇಲ್ಲ". ಎಂಬುದು ಈ ಸಂಪ್ರಬಂಧದ ಸಾರಾಂಶವಾಗಿದೆ.

ಸಮಾಜ ಶಾಸ್ತ್ರದ ಅಧ್ಯಯನದ ಸಂದರ್ಭದಲ್ಲಿ ಪ್ರಸ್ತುತ ಗ್ರಂಥವು ಬಹು ಮುಖ್ಯವಾದ ಸಂಶೋಧನೆಯೆಂಬ ವಿವಿಧ ಸಮಾಜ ಶಾಸ್ತ್ರಜ್ಞರ ಅಭಿಪ್ರಾಯಗಳನ್ನು ಮೊದಲೇ ನೀಡಿದ್ದು, ಇದನ್ನು ಓದುವ ಸಾಮಾನ್ಯ ಓದುಗರಿಗೆ ದಿಕ್‌ಸೂಚಿಯನ್ನು ನೀಡಿದಂತಾಗಿದೆ. ಈ ಕೃತಿಯನ್ನು ಇಂಗ್ಲಿಷಿಗೆ ಅನುವಾದಿಸಬೇಕಾಗಿದೆ, ಇಲ್ಲಿಯ ಅಭಿಪ್ರಾಯಗಳ ಸಮರ್ಥನೆಗೆ ಶಾಸ್ತ್ರಗ್ರಂಥಗಳ ಅಭಿಪ್ರಾಯಗಳು ಗ್ರಾಹ್ಯವಾಗಿವೆ.

ಇಲ್ಲಿ ಬಂದಿರುವ ವಿಚಾರಗಳು ಆಧಾರಯುಕ್ತವಾಗಿ, ಪ್ರಾಮಾಣಿಕವಾಗಿ, ಶಾಸ್ತ್ರ ಶುದ್ಧವಾಗಿ ಒಡಮೂಡಿ ಬಂದಿವೆ. ಅಪೂರ್ವ ಮಾಹಿತಿಗಳ ಭಂಡಾರವೇ ಇಲ್ಲಿದೆ. ಅಲ್ಲದೇ ಸಮಾಜಶಾಸ್ತ್ರಜ್ಞರಿಗೆ ಪ್ರಾಚೀನ ಗ್ರಂಥಗಳು ಹೇಗೆ ಉಪಯೋಗವಾಗಬಲ್ಲವು, ಸಮಾಜಶಾಸ್ತ್ರ ಅಧ್ಯಯನದಲ್ಲಿ ಕಂಡುಬರುವ ಕೆಲವು ಸೈದ್ಧಾಂತಿಕ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಅವು ಹೇಗೆ ಸಹಾಯಕವಾಗಬಲ್ಲವು ಎಂಬುದನ್ನು ತೋರಿಸಿಕೊಡುವಲ್ಲಿಯೂ ಸಹ ಈ ಗ್ರಂಥ ಯಶಸ್ವಿಯಾಗಿದೆ.

**- ವೈಶ್ವಾಮಿತ್ರ**

# 9. ಆಲಂದೆಯ ಏಕಾಂತ ರಾಮಯ್ಯ

**ಆಲಂದೆಯ ಏಕಾಂತ ರಾಮಯ್ಯ** –ಲೇಖಕರು : ಡಾ॥ ಸಿ.ನಾಗಭೂಷಣ, ಪ್ರಕಾಶಕರು : ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಸುಕ್ಷೇತ್ರ ಹಾರಕೂಡ–585437 ಬಸವಕಲ್ಯಾಣ. ಜಿಲ್ಲೆ : ಬೀದರ, ವರ್ಷ : 2004, ಬೆಲೆ: ರೂ. 40.00 ರೂಗಳು.

ಕಲ್ಯಾಣನಾಡಿನ ಹಾರಕೂಡದ ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠವು. ಪ್ರತಿವರ್ಷವೂ ವಿಜಯದಶಮಿಯಂದು ನಡೆಸಿಕೊಂಡು ಬರುತ್ತಿರುವ ಅನುಭಾವ ಉಪನ್ಯಾಸ ಮಾಲೆಯಲ್ಲಿ 22.10.2004 ರಂದು ಡಾ॥ ಸಿ. ನಾಗಭೂಷಣರು ನೀಡಿದ ಹದಿನೇಳನೆಯ ಉಪನ್ಯಾಸದ ವಿಸ್ತೃತ ರೂಪವೇ ಈ ಗ್ರಂಥವಾಗಿದೆ.

ಈ ಕೃತಿಯಲ್ಲಿ ವೀರಮಾಹೇಶ್ವರನೆನಿಸದ ಆಲಂದೆಯ ಏಕಾಂತ ರಾಮಯ್ಯನನ್ನು ಕುರಿತಂತೆ ಏಳು ಅಧ್ಯಾಯಗಳಲ್ಲಿ ಯುಗಧರ್ಮ, ಏಕಾಂತ ರಾಮಯ್ಯನ ಹೆಸರು, ಕಾಲದ ಬಗ್ಗೆ ಚರ್ಚೆ, ಏಕಾಂತ ರಾಮಯ್ಯನ ಜೀವನ ಇತಿಹಾಸ ಮತ್ತು ದಂತಕಥೆ, ಏಕಾಂತ ರಾಮಯ್ಯನ ವಚನಗಳ ಸಮೀಕ್ಷೆ, ಕನ್ನಡನಾಡಿನ ಧಾರ್ಮಿಕ (ವೀರಶೈವ) ಚರಿತ್ರೆಯಲ್ಲಿ ಏಕಾಂತ ರಾಮಯ್ಯನ ಸ್ಥಾನ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಏಕಾಂತ ರಾಮಯ್ಯನನ್ನು ಕುರಿತ ಕೃತಿಗಳ ಸ್ಥಾನ, ಏಕಾಂತ ರಾಮಯ್ಯನ ಜೀವಿತದ ಕೊನೆಯ ಘಟ್ಟ – ಇವುಗಳನ್ನು ಸವಿಸ್ತಾರವಾಗಿ ಶಾಸನ, ಐತಿಹ್ಯಗಳ ಆಧಾರಗಳ ಬೆಳಕಿನಲ್ಲಿ ಸಮೀಚೀನವಾಗಿ ಗ್ರಂಥಕರ್ತರು ವಿವೇಚಿಸಿದ್ದಾರೆ.

ಯುಗಧರ್ಮವೆಂಬ ಮೊದಲ ಆಧ್ಯಾಯದಲ್ಲಿ ರಾಜಕೀಯ ಹಿನ್ನೆಲೆಯ ಬಗ್ಗೆ ಚರ್ಚಿಸುತ್ತಾ ಕಲ್ಯಾಣಚಾಲುಕ್ಯರ ಕಾಲದಲ್ಲಿಯೇ ಅರಸೊತ್ತಿಗೆಯನ್ನು ತಾತ್ವಿಕಮಟ್ಟದಲ್ಲಾದರೂ ಎದುರಿಸಿ ನಿಂತ, ಸಾಮಾಜಿಕ ಆಂದೋಲನವೇ ಪ್ರಧಾನ ಲಕ್ಷಣವಾಗಿರುವ ಧರ್ಮವೊಂದರ ಉದಯದ ಸೂಚನೆ ಕಂಡು ಬಂದು ಕಲಚೂರಿ ಬಿಜ್ಜಳನು ಕಲ್ಯಾಣ ಚಾಲುಕ್ಯರ ರಾಜ್ಯಾಪಹರಿಸಿ ಚಕ್ರವರ್ತಿಯಾದುದರಲ್ಲಿ ಯಾವ ಧಾರ್ಮಿಕ ಉದ್ದೇಶ ಇರಲಿಲ್ಲವೆಂದೂ, ಬಿಜ್ಜಳ ಈ ರಾಜಪದವಿಯನ್ನು ಪಡೆಯುವುದರಲ್ಲಿ ಬಸವಣ್ಣ ಅಥವಾ ಇತರ ಧಾರ್ಮಿಕ ಮುಖಂಡರ ಪರೋಕ್ಷ ಅಥವಾ ಪ್ರತ್ಯಕ್ಷ ಬೆಂಬಲ ಪಡೆದ ಉಲ್ಲೇಖ ಎಲ್ಲಿಯೂ ದೊರೆಯುವುದಿಲ್ಲವೆಂದೂ, ಈ ಕಾರ್ಯದಲ್ಲಿ ಬಿಜ್ಜಳನ ತೋಳ್ಬಲ ಹಾಗೂ ಆಕ್ರಮಣ ನೀತಿಯೇ ಎದ್ದು ಕಾಣುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ಮುಂದಿಟ್ಟಿದ್ದಾರೆ. ಕಲಚೂರಿಗಳಿಗೂ ಮತ್ತು ವಚನಸಾಹಿತ್ಯದ ಉದ್ಭವಕ್ಕೂ ನಡುವಣ ಆಂತರಿಕಸಂಬಂಧವು ರಾಜಕೀಯಕ್ಕಿಂತ ಹೆಚ್ಚಾಗಿ ಧಾರ್ಮಿಕ, ಸಾಮಾಜಿಕ, ಮನೋವೈಜ್ಞಾನಿಕ ವಿಶ್ಲೇಷಣೆಗೆ ಹೆಚ್ಚು ಹತ್ತಿರವಾಗಿದೆ ಎಂದಿದ್ದಾರೆ. 11ನೇ ಶತಮಾನದ ಅಂತ್ಯಭಾಗ ಮತ್ತು 12ನೇ ಶತಮಾನದ ಆದಿಭಾಗದಲ್ಲಿ ಕರ್ನಾಟಕದಲ್ಲಿನ ರಾಜಕೀಯ

ಪರಿಸ್ಥಿತಿಯಲ್ಲಿ ಉಂಟಾದ ಏರಿಳಿತ ಮತ್ತು ಅಶಾಂತಿಗಳು ಧಾರ್ಮಿಕ ಪರಿಸ್ಥಿತಿಯನ್ನು ಬಹಳ ಮಟ್ಟಿಗೆ ಕದಡಿ ಬಗ್ಗಡವಾಗಿಸಿತು.

ಬೌದ್ಧಧರ್ಮದ ವಜ್ರಯಾನ ಪಂಥ ತನ್ಮೂಲಕ ಬುದ್ಧನಿಗಿಂತ ಆರ್ಯೆ ತಾರಾ ಭಗವತಿಯ ಆರಾಧನೆ ಹೆಚ್ಚು ಜನಪ್ರಿಯವಾಯಿತು. ಜೈನಧರ್ಮವೂ ಹಿಂದೂ ಧರ್ಮದೊಂದಿಗೆ ಹೊಂದಾಣಿಕೆ ಮಾಡಿಕೊಂಡು ಹಿಂದೂ ದೇವತೆಗಳಾದ ಪದ್ಮಾವತಿ, ಅಂಬಿಕೆ, ಸರಸ್ವತಿ, ಬ್ರಹ್ಮರ ಆರಾಧನೆಯನ್ನೂ ಯಕ್ಷಯಕ್ಷಿಯರ ಆರಾಧನೆಯನ್ನೂ ಅಳವಡಿಸಿಕೊಂಡಿತು ಅಲ್ಲದೆ ಜೈನರು ಇತರ ಮತೀಯರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದ್ದರಿಂದ ಕಾಲಾಂತರದಲ್ಲಿ ಜೈನರು ಅನ್ಯ ಮತಗಳ ಸ್ವೀಕಾರಕ್ಕೆ ನಾಂದಿಯಾಯಿತು. ವೇದಾಗಮಗಳು ಪಂಡಿತರ ಸೊತ್ತಾದವು. ವೈದಿಕಮತ ವೈಷ್ಣವಮತವಾಗಿ ಪರಿಷ್ಕಾರ ಪಡೆಯಿತು. ಕಾಪಾಲಿಕ, ಲಕುಲೀಶಪಾಶುಪತ, ಕಾಳ ಹಾಗೂ ಕಾಳಮುಖಶೈವ ಪಂಥಗಳೂ ಪರಸ್ಪರ ಸ್ಪರ್ಧೆ ನಡೆಸುತ್ತಿದ್ದವು. ಜೈನ, ವೈಷ್ಣವ, ಶೈವಮತಗಳ ನಡುವೆ ಶ್ರೇಷ್ಠತೆ ಹಾಗೂ ಪಾರಮ್ಯತೆಯ ಸಲುವಾಗಿ ವಾದ, ಪ್ರತಿವಾದ, ಪ್ರಕ್ರಿಯೆಗಳು ಪವಾಡ ಸದೃಶಗಳು ಮಹತ್ವವನ್ನು ಪಡೆದುಕೊಂಡವು. ಶಿವಭಕ್ತರು ತಮ್ಮ ಶಿರಗಳನ್ನು ಕಡಿದು ದೇವರಿಗರ್ಪಿಸಿ ಪುನಃ ತಮ್ಮ ಭಕ್ತಿನಿಷ್ಠೆಯಿಂದ ಶಿವನನ್ನು ಪ್ರಸನ್ನಗೊಳಿಸಿ ತಮ್ಮ ಶಿರವನ್ನು ಪಡೆಯುವಂತಹ ಪಣಗಳನ್ನು ನಡೆಸುವ ವೀರಾವೇಶದ ಭಕ್ತಿ ಪ್ರಕಟನೆಯನ್ನು ಮಾಡುವ ಕೃತ್ಯ ನಡೆಸಿದ್ದರು. ಕಾಳಾಮುಖ ಶೈವರ ಸರ್ವಜನ ಸಮಾನತೆ, ಸ್ಥಾವರಲಿಂಗಪೂಜೆ, ಮಠಪದ್ಧತಿ, ಶಿಕ್ಷಣ ಅಂಶಗಳನ್ನು ಮೈಗೂಡಿಸಿಕೊಂಡು ವೀರಶೈವಧರ್ಮ ವಿಸ್ತೃತತೆಯನ್ನು ಜನಪ್ರಿಯತೆ ಯನ್ನೂ ಈ ಕಾಲದಲ್ಲಿ ಪಡೆದುಕೊಂಡಿತು. ಕಾಳಾಮುಖರು ಬಳಸಿದ್ದ 'ಜಂಗಮ' ಮತ್ತು 'ಆರಾಧ್ಯ' ಪದಗಳನ್ನು ಕಾಪಾಲಿಕರು ರೂಪಿಸಿದ ಶಿವರೂಪ – ಕಪಾಲಭೈರವ, ಭೈರವಿ, ಚಾಮುಂಡಿ ಮುಂತಾದುವುಗಳನ್ನು ವೀರಶೈವರು ಉಳಿಸಿಕೊಂಡರು. ವರ್ಗ-ವರ್ಣ-ಸಾಮಾಜಿಕ ಪದ್ಧತಿ, ಗಂಡು – ಹೆಣ್ಣಿನ ನಡುವೆ ಮೇಲುಕೀಳೆಂಬ ಭಾವನೆ, ಶುಭದಿನ, ವಾರ, ತಿಥಿ, ಲಗ್ನ ಮುಹೂರ್ತ, ತಾರಾಬಲ, ಚಂದ್ರಬಲ, ನವಗ್ರಹಬಲ, ಶುಭಂ, ಶುಭಶಕುನ ಇತ್ಯಾದಿ. ಮೂಢನಂಬಿಕೆಗಳು, ತೀರ್ಥಯಾತ್ರೆ, ಪೂಜ್ಯತೆ, ಪಾಪ – ಪುಣ್ಯಗಳನ್ನು ಕುರಿತಂತೆ ತಿರಸ್ಕಾರ ಸೂಚನೆ ಬಸವಪೂರ್ವಯುಗದಲ್ಲಿಯೇ ಕಂಡು ಬರುತ್ತಿತ್ತೆಂದು ಗ್ರಂಥಕರ್ತರು ಗುರುತಿಸಿದ್ದಾರೆ. ಈ ಎಲ್ಲ ವಿವರಗಳ ಮೂಲಕ ಅಂದಿನ ಗ್ರಂಥಕರ್ತರು ಯಶಸ್ವಿಯಾಗಿದ್ದರೆಂದು ಹೇಳಬಹುದಾಗಿದೆ. ಶೈವಮತದ ಶ್ರೇಷ್ಠತೆಯನ್ನು ಕಾಪಾಡುವ ಹಾಗೂ ಪ್ರತಿಷ್ಠಾಪಿಸುವ ಸಲುವಾಗಿ ಅನ್ಯಮತೀಯರೊಡನೆ ಸ್ಪರ್ಧೆ, ಜೀವಪಣವಿಟ್ಟು ಹೋರಾಟ, ಆತ್ಮಾಹುತಿ ನಡೆಸಿದ್ದ ಉಗ್ರಶೈವರ ನಿದರ್ಶನಗಳನ್ನು ನೀಡುತ್ತಾ ತಮಿಳುನಾಡಿನ ತಿರುನಾವಲೂರಿನ ತಿರುನಾವಕರಿಶ, ತಿರುವಾಲೂರಿನ ಇರುತ್ತಾಂಡಿ, ನಿಡುಮಾರ, ಕೊಂಡಗುಳಿ ಕೇಶಿರಾಜ, ಕೆಂಬಾವಿ ಭೋಗಣ್ಣ, ದೇವರ ದಾಸಿಮಯ್ಯ ಮುಂತಾದ ಬಸವಪೂರ್ವಯುಗದ ಶರಣರ ಜೀವನದ ಪವಾಡ ಸದೃಶ

ವಿವರಗಳ (ನೂರಾರು ಬಸದಿಗಳನ್ನು ಒಡೆದು ಶಿವಲಿಂಗಗಳನ್ನು ಅಲ್ಲಿ ಸ್ಥಾಪಿಸಿದುದು, ಬಾವಿಯಲ್ಲಿನ ಲಿಂಗಗಳೆಲ್ಲವೂ ಭಕ್ತ ಭೋಗಣ್ಣನ ಜೊತೆ ಊರಬಿಟ್ಟು ಹೊರಟಿದ್ದು) ಶುದ್ಧ ಐತಿಹಾಸಿಕತೆಯನ್ನು ಪ್ರಶ್ನಿಸಿದರೂ, ಶೈವ ಮತವೂ ತನ್ನ ಅಸ್ತಿತ್ವ ಮತ್ತು ಶ್ರೇಷ್ಠತೆಗಾಗಿ ಘರ್ಷಣೆ ನಡೆಸಿತ್ತು ಎಂಬುದು ಸಮಕಾಲೀನ ಸತ್ಯವೆಂದು ಲೇಖಕರು ಪ್ರತಿಪಾದಿಸಿದ್ದಾರೆ.

ಶೈವಪುರುಷರ ಚರಿತೆ ಪವಾಡಮಯವಾಗಿ ರೂಪುಗೊಳ್ಳಲು ಇದ್ದ ಉದ್ದೇಶಗಳು.

1. ವೀರಶೈವ ಮತತತ್ವಗಳನ್ನು ಸಾಮಾನ್ಯ ಜನತೆಗೆ ಸರಳವಾಗಿ ತಿಳಿಸುವುದು.

2. ಮತ ಪ್ರಸಾರ ಮತ್ತು ವೀರಶೈವ ಮತದ ತತ್ತ್ವಗಳ ಆಚರಣೆ ಮತ್ತು ವಿಧಾನಗಳ ಪರಿಚಯ ಎಂದು ಗುರುತಿಸಿದ್ದಾರೆ.

ಇದೇ ಅಭಿಪ್ರಾಯವನ್ನು ಏಕಾಂತಮಯ್ಯನ ಜೀವಿತಕ್ಕೆ ಕುರಿತಂತೆ ವ್ಯಕ್ತಪಡಿಸುತ್ತಾ, ಏಕಾಂತ ರಾಮಯ್ಯನನ್ನು ಕುರಿತ ಶಾಸನ ಎಂದರೆ ಅಬ್ಬಲೂರು ಶಾಸನ ಮತ್ತು ಹರಿಹರನ ರಗಳೆಗಳಲ್ಲಿರುವ ಹೇಳಿಕೆಗಳು ಸೂಕ್ತವಾಗಿವೆ ಎಂಬುದನ್ನು ಅಬ್ಬಲೂರಿನಲ್ಲಿರುವ ವೀರ ಸೋಮೇಶ್ವರ ದೇವಾಲಯದಲ್ಲಿ ಕಟಾಂಜನದ ಮೇಲಿನ ವಿಗ್ರಹಪಟ್ಟಿಕೆಯಲ್ಲಿ ನಿರೂಪಿತ ಏಕಾಂತ ರಾಮಯ್ಯನಿಗೆ ಸಂಬಂಧಿಸಿದ ಘಟನೆಗಳ ಲಘು ಬರಹ ಮತ್ತು ಚಿತ್ರಗಳು ಪುಷ್ಟೀಕರಿಸುತ್ತಿವೆ. ಏಕಾಂತರಾಮಯ್ಯನು ಜೈನರೊಂದಿಗೆ ಸ್ವಶಿರವನ್ನು ಪಣಕಿಟ್ಟು ಹೋರಾಡಿ ಶಿವಪಾರಮ್ಯವನ್ನು ಯಶಸ್ವಿಯಾಗಿ ಪ್ರಕಟಗೊಳಿಸಿದ ಸಂದರ್ಭದಲ್ಲಿ ಅಬ್ಬಲೂರಿನಲ್ಲಿ ಸೋಮೇಶ್ವರ ದೇವಾಲಯವನ್ನು ಕಟ್ಟಿಸಿದನೆಂದು ಪ್ರತೀತಿಯಿದೆ. ಇವೆಲ್ಲವೂ ಏಕಾಂತ ರಾಮಯ್ಯನ ಜೀವನದ ಐತಿಹಾಸಿಕತೆಯ ಪ್ರತೀಕವಾಗಿದ್ದರೆ ಜೈನರ ವಿರುದ್ಧ ಹೋರಾಡಿ ತನ್ನ ತಲೆಯನ್ನು ಕತ್ತರಿಸಿಕೊಂಡು ಏಳುದಿನಗಳ ನಂತರ ಮರಳಿ ಪಡೆದ ಪವಾಡ ಸದೃಶ ಘಟನೆಗಳು ರಾಮಯ್ಯನು ಕೈಗೊಂಡ ವೀರಶೈವಮತ ಪ್ರಸಾರದ ಉದ್ದೇಶದ ಸಾಂಕೇತಿಕ ಕ್ರಿಯೆಗಳು ಎಂಬುದಾಗಿ ಪರಿಗಣಿಸಿದ್ದಾರೆ.

ಏಕಾಂತ ರಾಮಯ್ಯನ ಕಾಲದ ಸಾಹಿತ್ಯಿಕ ಪರಿಸ್ಥಿತಿಯ ಬಗ್ಗೆ ವಿವೇಚಿಸುತ್ತಾ ಲೇಖಕರು 12ನೇ ಶತಮಾನದ ಆದಿಭಾಗ ಚಂಪೂ ಪ್ರಕಾರ ಸತ್ವಹೀನವಾಗಿದ್ದ ಕಾಲ, ರಾಜಕೀಯವಾಗಿ ಶೌರ್ಯ ಸಾಹಸ ಮಹತ್ವಾಕಾಂಕ್ಷೆಗಳ ಕಾಲ ಮುಗಿದು ಆಲಸ್ಯ, ಕಪಟ ವಂಚನೆಗಳು ಕಾಣಿಸಿಕೊಂಡ ಕಾಲ. ಸಮಾಜದಲ್ಲಿದ್ದ ಸತ್ವಹೀನ ಸಾಮಾಜಿಕ ಧಾರ್ಮಿಕ ಕಂದಾಚಾರಗಳ ವಿರುದ್ಧ ಜನತೆಯನ್ನು ಜಾಗೃತಿಗೊಳಿಸುವ ಆವಶ್ಯಕತೆಯಿದ್ದಿತು. ಹೀಗಾಗಿ ಶಿವಶರಣರು ವೀರಶೈವಮತದ ಚೌಕಟ್ಟಿನಲ್ಲಿ ಮುಕ್ತ ಮನಸ್ಸಿನಿಂದ ತಮ್ಮ ವಿಚಾರ ಮತ್ತು ಅನುಭವಗಳನ್ನು ಬಿಚ್ಚುನುಡಿಗಳಲ್ಲಿ ತೆರೆದಿಟ್ಟರು. ಹೀಗೆ ವಚನಗಳು ಆವಿಷ್ಕಾರಗೊಂಡವು. ಇವು ಸಾಹಿತ್ಯ ಸೃಷ್ಟಿಗೆಂದು ರಚನೆಯಾಗಲಿಲ್ಲ. ಆದರೆ ವಚನಗಳು

ಸಾಹಿತ್ಯದ ಚೌಕಟ್ಟಿಗೆ ಬದ್ಧವಾದವು ಎಂದಿದ್ದಾರೆ. ಏಕಾಂತ ರಾಮಯ್ಯನ ಹನ್ನೊಂದು ವಚನಗಳನ್ನು ನೀಡಿ ಅವುಗಳಲ್ಲಿರುವ ಗುಣದೋಷಗಳನ್ನು ಕುರಿತು ಚರ್ಚಿಸಿದ್ದಾರೆ.

ಲೇಖಕರು ಉಪಲಬ್ಧವಿರುವ ಏಕಾಂತ ರಾಮಯ್ಯನ ವಚನಗಳಲ್ಲಿ ಸ್ವಕೀಯ ವಿವರಗಳಾಗಲೀ ಪೂರ್ವವಚನಕಾರರ ಸ್ತುತಿಯಾಗಲೀ ಕಂಡುಬರುವುದಿಲ್ಲ. ಈತನ ವಚನಗಳಲ್ಲಿ ಅಂತಹ ಅತ್ಯುನ್ನತ ಭಾವನೆಯನ್ನಾಗಲೀ, ಅನುಭಾವವನ್ನಾಗಲೀ ಕಾಣೆವು. ಅಷ್ಟಾವರಣಗಳಲ್ಲಿ ಗುರು, ಲಿಂಗ, ಜಂಗಮರ, ಬಗ್ಗೆ ಪ್ರಸ್ತಾಪವಿದೆ. ಆತ್ಮ ಪರಮಾತ್ಮರ ಸಂಬಂಧವನ್ನು ದೃಷ್ಟಾಂತಗಳ ಮೂಲಕ ವ್ಯಕ್ತಪಡಿಸಲಾಗಿದೆ, ಪರಿಶುದ್ಧವಾದ ಮನಸ್ಸುಳ್ಳ ವ್ಯಕ್ತಿಗೆ ಲಿಂಗದರ್ಶನ ಸಾಧ್ಯವೆಂಬುದನ್ನು ರೂಪಕದಲ್ಲಿ ತಿಳಿಸಿದ್ದಾನೆ. ನಿಜವಾದ ಗುರುವಿನ ಲಕ್ಷಣವನ್ನು ಹೇಳುವ ಏಕಾಂತ ರಾಮಯ್ಯನ ವಚನವನ್ನು ಲೇಖಕರು ಶ್ರೇಷ್ಠವಾದದ್ದು ಎಂದಿದ್ದಾರೆ. ನೀರಿನ ಮೇಲಿರುವ ಎಣ್ಣೆಯಂತೆ ಲೌಕಿಕದಲ್ಲಿದ್ದು ಅಲೌಕಿಕನಾಗಿರುವವನು ವಿಭಿನ್ನ ಮಣಿಗಳು ಸೇರಿ ಹಾರವಾಗುವಂತೆ ಭಿನ್ನ ಸ್ವಭಾವದ ಜನರನ್ನು ಒಟ್ಟುಗೂಡಿಸುವ ಏಕಸೂತ್ರದಂತೆ ಹಾಗೂ ಪೊರೆ ಕಳಚಿದ ಹಾವಿನಂತೆ ನಿತ್ಯನೂತನ ಶಕ್ತಿ ಉತ್ಸಾಹಗಳಿಂದ ಕಾರ್ಯನಿರತನಾಗಿರುವವನೇ ಶ್ರೇಷ್ಠ ಗುರುವೆಂದು ಪರಿಗಣಿಸಲ್ಪಟ್ಟಿದ್ದಾನೆ. ಇವನ ವಚನಗಳಲ್ಲಿ ಗೇಯ ಗುಣಕ್ಕಿಂತ ಗದ್ಯಲಯವೇ ಪ್ರಧಾನವಾಗಿದೆ. ಈತನ ವಚನಗಳಲ್ಲಿ ಸಾಧಕನ ಅಂತರಂಗದ ತೊಳಲಾಟವನ್ನಾಗಲೀ ಸಿದ್ಧನ ಪ್ರಬುದ್ಧ ಅವಸ್ಥೆಯನ್ನಾಗಲೀ ಸಾಧ್ಯವಿಲ್ಲವೆಂದು ಲೇಖಕರು ತಿಳಿಸುತ್ತಾರೆ. ಆದರೆ ನಂತರದ ಕಾಲದಲ್ಲಿ ಏಕಾಂತ ರಾಮಯ್ಯನ ವಚನಗಳು ಜೀವಿತದ ಪವಾಡಗಳೂ ಕನ್ನಡ ಸಂಸ್ಕೃತಿಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡವು. ಅದರ ಕುರುಹಾಗಿ ಮುಳುಬಾಗಿಲು ತಾಲೂಕಿನ ಅವನಿಯ ಬೆಟ್ಟದಲ್ಲಿ ಏಕಾಂತ ರಾಮಯ್ಯನ ದೇವಾಲಯವಿದ್ದು, ಅಳಂದೆಯ ಸೋಮನಾಥ ದೇವಾಲಯದಲ್ಲಿ ರಾಮಯ್ಯನ ವಿಗ್ರಹವನ್ನು ಇತ್ತೀಚೆಗೆ ಸ್ಥಾಪಿಸಲಾಗಿದ್ದು ರಾಮಯ್ಯನು ಪೂಜನೀಯ ವ್ಯಕ್ತಿಯಾಗಿದ್ದಾನೆ ಎಂಬುದನ್ನು ಲೇಖಕರು ಈ ಸ್ಥಳಗಳ ಕ್ಷೇತ್ರ ಕಾರ್ಯದಿಂದ ಸ್ಪಷ್ಟವಾಗಿ ನಿರೂಪಿಸಿದ್ದಾರೆ.

ಡಾ॥ ಸಿ. ನಾಗಭೂಷಣರ ಅಲಂದೆಯ ಏಕಾಂತ ರಾಮಯ್ಯ ಕೃತಿಯ ಅಧ್ಯಯನದಿಂದ ಒಡಮೂಡಿದ ವಿಮರ್ಶಾತ್ಮಕ ವಿಚಾರಗಳೆಂದರೆ ಯುಗಧರ್ಮವೆಂಬ ಮೊದಲ ಅಧ್ಯಾಯದಲ್ಲಿ ಧಾರ್ಮಿಕ ಪರಿಸ್ಥಿತಿಯ ಹಿನ್ನೆಲೆಯನ್ನು ವಿವರಿಸುತ್ತಾ ಶೈವ ಧರ್ಮದ ಪ್ರಭೇದಗಳಲ್ಲಿ ಉಲ್ಲೇಖಿಸಿರುವ ಕಾಳ ಮತ್ತು ಲಕುಲೀಶ ಪಂಥಗಳ ಬಗ್ಗೆ ವಿವರಗಳನ್ನು ಈ ಪಂಥಗಳು ವೀರಶೈವಧರ್ಮದ ಮೇಲೆ ಬೀರಿರುವ ಪ್ರಭಾವವನ್ನು ಕುರಿತಂತೆ ಗ್ರಂಥಕರ್ತರು ಪ್ರಸ್ತಾಪಿಸಿದಂತೆ ಕಂಡುಬರುವುದಿಲ್ಲ. ಈ ಅಂಶಗಳ ಬಗೆಗೂ ಗಮನ ಹರಿಸಿದ್ದಲ್ಲಿ ಧಾರ್ಮಿಕ ಪರಿಸ್ಥಿತಿಯ ಚಿತ್ರಣ ಸಮಗ್ರವೂ ಸಮರ್ಪಕವೂ ಆಗುತ್ತಿತ್ತೆಂದು ಹೇಳಬಹುದಾಗಿದೆ. ಹಾಗೂ ಈ ಅಧ್ಯಾಯದಲ್ಲಿಯೇ ಕನ್ನಡ ನಾಡಿನ

ವೀರಶೈವಧರ್ಮ ಚರಿತ್ರೆಯಲ್ಲಿ ಏಕಾಂತ ರಾಮಯ್ಯನ ಸ್ಥಾನವನ್ನು ವಿವೇಚಿಸಬಹುದಾಗಿದೆ.

ಸಾಹಿತ್ಯಿಕ ಪರಿಸ್ಥಿತಿಯ ವಿಚಾರದ ಸಂದರ್ಭದಲ್ಲಿ ವಚನ ಸಾಹಿತ್ಯವೂ ಹನ್ನೆರಡನೇ ಶತಮಾನದಲ್ಲಿ ರೂಪುಗೊಂಡಿದ್ದಕ್ಕೆ ಕಾರಣಗಳನ್ನು, ಹಿನ್ನೆಲೆಯನ್ನು ಹೇಳಿದ್ದಾರಾದರೂ, ವಚನಗಳು ಸಾಹಿತ್ಯ ಸೃಷ್ಟಿಗೆಂದು ರಚನೆಯಾಗಲಿಲ್ಲ. ಆದರೆ ವಚನಗಳು ಸಾಹಿತ್ಯದ ಚೌಕಟ್ಟಿಗೆ ಬದ್ಧವಾದವು ಎಂಬ ಅಭಿಪ್ರಾಯವನ್ನು ತಳೆದಿದ್ದು ವಚನಗಳು ಸಾಹಿತ್ಯದ ಚೌಕಟ್ಟಿಗೆ ಬದ್ಧವಾದದ್ದು ಏಕೆ? ಯಾವಾಗ? ಹೇಗೆ? ಎಂಬುದರ ಬಗ್ಗೆಯೂ ತಮ್ಮ ವಿಚಾರವನ್ನು ಮಂಡಿಸಿದ್ದರೆ ಚೆನ್ನಾಗಿರುತ್ತಿತ್ತು.

ಗ್ರಂಥದ ಎರಡನೇ, ಮೂರನೇ ಹಾಗೂ ಏಳನೇ ಅಧ್ಯಾಯಗಳು ಏಕಾಂತ ರಾಮಯ್ಯನ ಜೀವನದ ಬಗೆಗೆ ತಿಳಿಸುವುದರಿಂದ ಈ ಎಲ್ಲಾ ಅಧ್ಯಾಯಗಳನ್ನು ಒಂದೇ ವಿಸ್ತಾರವಾದ ಮುಖ್ಯ ಅಧ್ಯಾಯವಾಗಿ ಬರೆದಿದ್ದರೆ ವ್ಯಕ್ತಿ ಜೀವನದ ಸಮಗ್ರತೆಯನ್ನು ಒಂದೆಡೆಯೇ ಕಾಣಲವಕಾಶವನ್ನು ಓದುಗರಿಗೆ ಲೇಖಕರು ದೊರಕಿಸಿ ಕೊಡಬಹುದಾಗಿದ್ದಿತು.

– ಡಾ। ಶ್ಯಾಮಲಾ ರತ್ನಕುಮಾರಿ

## 10. 'ಪ್ರಕಟಿಸುವ ಸ್ಥೈರ್ಯ'

'ಪ್ರಕಟಿಸುವ ಸ್ಥೈರ್ಯ' : ಮೂಲ ಲೇಖಕರು : ದೀನಾ ಎನ್. ಮಲ್ಹೋತ್ರ, ಅನುವಾದಕರು (ಇಂಗ್ಲೀಷಿನಿಂದ ಕನ್ನಡಕ್ಕೆ) ಪ್ರೊ। ಜಿ.ಎಸ್. ಸಿದ್ಧಲಿಂಗಯ್ಯ, ಪ್ರಕಾಶಕರು, 'ಚಿಂತನ ಪ್ರಕಾಶನ', ನಂ.681, 12ನೇ ಅಡ್ಡರಸ್ತೆ, ಮಾಗಡಿ ಕಾರ್ಡ್ ರಸ್ತೆ ಬಡಾವಣೆ, ಬೆಂಗಳೂರು–560040, ಪುಟಗಳು : (ಘಿಘಿಖ+264, ಬೆಲೆ ರೂ.100/– ಮುದ್ರಣ : ಡಿಸೆಂಬರ್ 2005.

'ಪುಸ್ತಕ ಪ್ರಕಾಶನ ಎಂಬುದು ಜೀವನೋಪಯೋಗಕ್ಕಾಗಿ ಹಾಗೂ ಹಣ ಸಂಪಾದನೆಗಾಗಿ ಮಾಡುವ ಒಂದು ವ್ಯವಹಾರವಲ್ಲ. ಅದೊಂದು ಮಹಾಸಾಹಸ ಕಾರ್ಯ' ಎನ್ನುವ ಶ್ರೀ ದೀನಾ ಎನ್. ಮಲ್ಹೋತ್ರ ತಮ್ಮ ಈ ಹೇಳಿಕೆಗೆ ಮೂರ್ತರೂಪ ನೀಡಿದ ಒಬ್ಬ ಮಹಾಸಾಹಸಗಾರ. ಉದಾತ್ತ ಹಿನ್ನೆಲೆಯ ಪ್ರಕಾಶಕರ ವಂಶದಲ್ಲಿ ಜನಿಸಿದ ಈ ಪ್ರತಿಭಾವಂತ ತನ್ನ ಸ್ವಸಾಮರ್ಥ್ಯ ಹಾಗೂ ಕುಶಲ ಯೋಜನಾ ನಿರ್ಮಾತರಾಗಿ ಭಾರತದ ಪುಸ್ತಕೋದ್ಯಮಕ್ಕೆ ಅಂತಾರಾಷ್ಟ್ರೀಯ ಗೌರವವನ್ನು ಗಳಿಸಿಕೊಟ್ಟಿರುವುದಲ್ಲದೆ ಭಾರತದಲ್ಲಿ, ಅದರಲ್ಲೂ ಉತ್ತರ ಭಾರತದಲ್ಲಿ ಭದ್ರ ನೆಲೆಗೊಳ್ಳಲು ಸೂಕ್ತ ಅಡಿಪಾಯ ಹಾಕುವಲ್ಲಿ ಯಶಸ್ವಿಯಾಗಿದ್ದಾರೆ. ಈ ಅಸಾಧಾರಣ ವ್ಯಕ್ತಿಯ ಸಾಧನೆಗಳು ಈ ಕೃತಿಯಲ್ಲಿ ಬಹುವರ್ಣನಾತ್ಮಕವಾಗಿ ಅನಾವರಣಗೊಂಡಿವೆ. ಜೀವನದಲ್ಲಿನ ಏಳು–ಬೀಳುಗಳು

ರಸಾತ್ಮಕವಾಗಿ ವರ್ಣಿತವಾಗಿವೆ. ಈ ಗ್ರಂಥ ಲೇಖಕನ ಆತ್ಮವೃತ್ತವಾಗಿರದೆ ಸಾಹಸಿ ಪ್ರಕಾಶಕನೊಬ್ಬನ ವೀರಗಾಥೆಯಾಗಿದೆ. ಇದರಲ್ಲಿ ಕಾದಂಬರಿಯ ಸತ್ವಪೂರ್ಣ ನಿರೂಪಣೆ ಇರುವುದಲ್ಲದೆ, ಪ್ರವಾಸಿ ಗ್ರಂಥದಲ್ಲಿನ ವರ್ಣಮಯ ಚಿತ್ರಣವಿದೆ. ಕುತೂಹಲ ಕೆರಳಿಸಿ ಓದುಗರನ್ನು ಸೆರೆ ಹಿಡಿದಿರಿಸುವ ಕಥೆಗಾರನ ಕುಶಲತೆ ಇದೆ. ವ್ಯಾಪಾರಿಗಳ ಗಮನ ಸೆಳೆಯುವ ವಾಣಿಜ್ಯ ರೀತಿ-ನೀತಿ ಸಂಹಿತೆ ಇದೆ. ಇಲ್ಲಕ್ಕೂ ಮಿಗಿಲಾಗಿ ಅಪೇಕ್ಷಣೀಯ ಮಹತ್ವದ ಮಾಹಿತಿ ಇದೆ. ಇದೆಲ್ಲದರಿಂದಾಗಿ ಈ ಕೃತಿ ಸರ್ವಜನ ಮೆಚ್ಚುಗೆ ಗಳಿಸುವುದರಲ್ಲಿ ಸಂದೇಹವಿಲ್ಲ.

ಈ ಮೌಲಿಕ ಕೃತಿಯನ್ನು ಕನ್ನಡ ನಾಡಿನ ಖ್ಯಾತ ಕವಿಗಳು ಶೈಕ್ಷಣಿಕ ತಜ್ಞರೂ, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ ಆಗಿರುವ ಪ್ರೊ। ಜಿ.ಎಸ್. ಸಿದ್ಧಲಿಂಗಯ್ಯನವರು ಬಹಳ ಚೆನ್ನಾಗಿ ಅನುವಾದಿಸಿದ್ದಾರೆ. ಇದನ್ನು ಓದಿದಾಗ 'ಅನುವಾದ' ಅನ್ನಿಸದೆ ಇರುವುದೇ ಈ ಕೃತಿಯ ಸಾರ್ಥಕತೆ. ಕವಿಯ ಶಬ್ದಸಾಮರ್ಥ್ಯ ಅನುವಾದಕ್ರಿಯೆಗೆ ಪೂರ್ಣ ಯಶಸ್ಸು ತಂದಿದೆ. ಸುಂದರ ರೂಪ ನೀಡಿದೆ. ಕೃತಿಯ ಮೂಲ ಮೌಲ್ಯವನ್ನು ಯಥಾವತ್ತಾಗಿ ಪ್ರತಿಬಿಂಬಿಸಿದೆ.

ಭಾರತದ ಪ್ರಕಾಶನೋದ್ಯಮದ ಬೆಳವಣಿಗೆಗೆ ಅಮೂಲ್ಯ ಕೊಡುಗೆಗಳನ್ನಿತ್ತು, ಅದನ್ನು ಅಂತಾರಾಷ್ಟ್ರೀಯ ಖ್ಯಾತಿ ಶಿಖರಕ್ಕೊಯ್ದು ಹೆಗ್ಗಳಿಕೆಗೆ ಪಾತ್ರರಾಗಿರುವವರು ಪದ್ಮಶ್ರೀ ದೀನಾ ಎನ್.ಮಲ್ಹೋತ್ರ ಅವರ ವಿಶಿಷ್ಟ ಕೊಡುಗೆಗಳ ಸಚಿತ್ರ ವರ್ಣನೆಯನ್ನೀಯುವ ಕೃತಿಯೇ ಈ 'ಪ್ರಕಟಿಸುವ ಸ್ಥೈರ್ಯ'.

ಇದನ್ನು ಪ್ರೊ। ಜಿ.ಎಸ್. ಸಿದ್ಧಲಿಂಗಯ್ಯನವರು ಬಹುಸಮರ್ಥ ರೀತಿಯಲ್ಲಿ ಅನುವಾದಿಸಿ ಕನ್ನಡಿಗರ ಆದರಾಭಿಮಾನಕ್ಕೆ ಪಾತ್ರರಾಗಿದ್ದಾರೆ.

ಇದೊಂದು ಸಂಗ್ರಹಯೋಗ್ಯ ಕೃತಿ ಎಂದು ನಿಸ್ಸಂದೇಹವಾಗಿ ಹೇಳಬಹುದು.

– ಎಸ್.ವಿ. ಶ್ರೀನಿವಾಸರಾವ್

## 11. ಶ್ರೀ ಗುರು ತುಳಸಿರಾಮದಾಸರು

ಸಂ. ನಾ.ಗೀತಾಚಾರ್ಯ, ಪ್ರ :ನಾರಾಯಣಶರ್ಮ ಸಂಸ್ಕೃತಿ ಕೇಂದ್ರ, ಶ್ರೀ ಗುರು ತುಳಸಿರಾಮದಾಸರ ಶತಮಾನೋತ್ಸವ ಸಮಿತಿಗಾಗಿ, ಬೆಂಗಳೂರು, ಪುಟ-150 ಡೆಮ್ಮಿ 1/8 ಬೆಲೆ 50.00, 2005.

ಹರಿದಾಸ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತತತ್ವದ ನೂತನ ಮಾರ್ಗವನ್ನು ಕನ್ನಡಕ್ಕೆ ಪರಿಚಯಿಸುವ ಮೂಲಕ ಈಗಾಗಲೆ ಗಮನ ಸೆಳೆದಿರುವ ಮತ್ತು ಈ ಕ್ಷೇತ್ರದಲ್ಲಿ ಹಲವು ಗ್ರಂಥಗಳನ್ನು ರಚಿಸಿ, ಅನೇಕ ಹರಿದಾಸರ ಕೀರ್ತನೆಗಳನ್ನು ಸಂಪಾದಿಸಿ

ಹೆಸರು ಮಾಡಿರುವ ವಿದ್ವಾಂಸರೂ ಶೇಷಾದ್ರಿಪುರಂ ಕಾಲೇಜಿನ ಸ್ನಾತಕೋತ್ತರ ವಿಭಾಗದ ಕನ್ನಡ ಪ್ರಾಧ್ಯಾಪಕರೂ, ಬಿ.ಎಂ.ಶ್ರೀ ಪ್ರತಿಷ್ಠಾನದ ಸ್ನಾತಕೋತ್ತರ ಕೇಂದ್ರದ ನಿರ್ದೇಶಕರೂ ಆದ ಪ್ರೊ॥ ನಾ.ಗೀತಾಚಾರ್ಯ ಅವರ ಇನ್ನೊಂದು ವಿಶಿಷ್ಟ ಕೃತಿ ಶ್ರೀ ಗುರು ತುಳಸಿರಾಮದಾಸರು.

ತುಳಸಿರಾಮದಾಸರು ಮೂಲತಹ ಆಂಧ್ರಪ್ರದೇಶದ ಕಡಪಜಿಲ್ಲೆಯಲ್ಲಿ ಕ್ರಿ.ಶ. 1847 ರಲ್ಲಿ ಜನಿಸಿದರು. ನಂತರ ಇವರು ಬೆಂಗಳೂರಿಗೆ ಆಗಮಿಸಿದ್ದು 1873 ರಲ್ಲಿ ಆ ಸಂದರ್ಭದಲ್ಲಿ ಕನ್ನಡ ಪ್ರದೇಶಗಳು ವಸಾಹತುಶಾಹಿಗೆ ಒಳಪಟ್ಟಿದ್ದು ಗಮನಿಸಬೇಕು. ಆಂಗ್ಲರು ಭಾರತೀಯರ ಮೇಲೆ ಕೇವಲ ರಾಜಕೀಯ–ಸಾಮಾಜಿಕವಾಗಿ ಮಾತ್ರ ಪ್ರಭಾವ ಬೀರದೆ ಸಾಂಸ್ಕೃತಿಕವಾಗಿಯೂ ಗಾಢವಾಗಿ ಪ್ರಭಾವ ಬೀರಿದ್ದರು. ಭಾರತೀಯ ಸಂಸ್ಕೃತಿಗೆ ಮತ್ತೊಮ್ಮೆ ಜೀವ ತುಂಬುವ ಪ್ರಭಾವಿ ವ್ಯಕ್ತಿಗಳ ಅಗತ್ಯವಿತ್ತು. 1873–1903 ರ ನಡುವಿನ ಸಂದರ್ಭದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಅಷ್ಟೊಂದು ಪ್ರಧಾನವಾಗಿ ಆಧುನಿಕ ಕನ್ನಡ ಸಾಹಿತ್ಯ ಹೊರಹೊಮ್ಮಿರಲಿಲ್ಲ ಎಂದರೆ ತಪ್ಪಾಗಲಾರದು. ಈ ನಡುವೆ ಹರಿದಾಸ ಪರಂಪರೆಯನ್ನು ಮುಂದುವರೆಸಿದ ತುಳಸಿರಾಮದಾಸರು ಹೊಸ ಆಯಾಮವನ್ನೇ ನೀಡಿದರು. ಸಾಹಿತ್ಯಿಕವಾಗಿ ಇವರು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದ್ದು ಕೇವಲ 25 ಮಾತ್ರ (ಪುಸ್ತಕದಲ್ಲಿ 26 ಇವೆ) ಶ್ರೀ ಹರಿಸ್ತುತಿಗಳು, ಲಕ್ಷ್ಮಿಸ್ತುತಿಗಳು, ಆಳ್ವಾರ್–ಆಚಾರ್ಯ ಸ್ತುತಿಗಳು, ಲೋಕನೀತಿ, ಕ್ಷೇತ್ರಸ್ತುತಿಗಳು ದಾಸರನ್ನು ಕುರಿತು ಕೀರ್ತನೆಗಳು–ಹೀಗೆ ವಿಭಜಿತಗೊಂಡಿವೆ. ವಾಸ್ತವಿಕವಾಗಿ ತುಳಸಿರಾಮದಾಸರು ಸಮಗ್ರ ಪರಿಶೀಲನೆಗೆ ದಕ್ಕುವುದು ಮಾತ್ರ, ಅವರು ತೆಲುಗು ಭಾಷೆಯಲ್ಲಿ ರಚಿಸಿದ 300ಕ್ಕೂ ಹೆಚ್ಚು ಕೀರ್ತನೆಗಳನ್ನು ಅಧ್ಯಯನ ಮಾಡುವುದರಿಂದ, ಈ ಪುಸ್ತಕದ ಸಂಪಾದಕರಾದ ಪ್ರೊ॥ ನಾ.ಗೀತಾಚಾರ್ಯ ಅವರು ಅಮೂಲ್ಯವಾದ ಪ್ರಸ್ತಾವನೆ ಬರೆದಿದ್ದಾರೆ. ಈ ಪ್ರಸ್ತಾವನೆಯಲ್ಲಿ ವಿಶಿಷ್ಟಾದ್ವೈತ ಸಂಪ್ರದಾಯ ನಡೆದು ಬಂದ ರೀತಿಯನ್ನು ಅದರಲ್ಲಿ ವೈಕುಂಠದಾಸರು ಮತ್ತು ಕನಕ, ಲಕ್ಷ್ಮೀಶರು ಹೇಗೆ ಒಳಗಾಗುತ್ತಾರೆ ಎಂಬುದನ್ನು ಸಾಕ್ಷ್ಯ ಆಧಾರಗಳ ಮೂಲಕ ತೋರಿಸಿ ಕೊಟ್ಟಿದ್ದಾರೆ. ಕನಕದಾಸರ ವಿಷಯದಲ್ಲಿ ಇನ್ನಷ್ಟು ಚರ್ಚೆಯಾಗಬೇಕಿದೆ.

ಪ್ರಧಾನವಾಗಿ ತುಳಸಿರಾಮದಾಸರು ಗಮನಸೆಳೆಯುವುದು ಇಡೀ ಹರಿದಾಸ ಪರಂಪರೆಯಲ್ಲಿ ಯಾರೂ ಮಾಡದ ಒಂದು ಸಾಮಾಜಿಕ ಕ್ರಾಂತಿಯನ್ನುಂಟು ಮಾಡಿರುವ ಚಳವಳಿಕಾರರಾಗಿ ಒಬ್ಬ ಗುರುವಾಗಿ ನಾಯಕರಾಗಿ ಅನೇಕ ಹರಿದಾಸರನ್ನು ಬೆಳೆಸಿರುವ ಅವರ ಶಿಷ್ಯ ವೃಂದ 'ಜಾತ್ಯಾತೀತ'ವಾಗಿತ್ತು ಎಂಬುದು ವಿಶೇಷವಾದ ಸಂಗತಿಯಾಗಿದೆ. ಹಿಂದೆ ನಡೆದಿದ್ದ ಕನ್ನಡ ಸಾಹಿತ್ಯದ ಎರಡು ಬಹಳ ಮುಖ್ಯವಾದ ಭಕ್ತಿಚಳುವಳಿಗಳಲ್ಲಿ 12ನೇ ಶತಮಾನದ 'ವಚನ ಚಳುವಳಿ ಮಾತ್ರ' ಸಮಾಜದ ಎಲ್ಲಾ ವರ್ಗದವರನ್ನು ಸೇರಿಕೊಂಡಿತ್ತು. 16ನೇ ಶತಮಾನದ ಹರಿದಾಸ ಆಂದೋಲನಕ್ಕೆ ಇದು ಸಾಧ್ಯವಾಗಿರಲಿಲ್ಲ.

ಅಲ್ಲಿ ಮಡಿವಂತ ಪುರೋಹಿತಶಾಹಿಯ ವಿರೋಧವಿತ್ತು. ಈ ಮುಳ್ಳಿನ ಹಾದಿಯಲ್ಲೇ ಬೆಳ್ಳಿ ರೇಖೆಯಾಗಿ ಕಾಣಿಸಿಕೊಂಡಿದ್ದು ಶೂದ್ರಜನಾಂಗದ ಕನಕದಾಸರು ಮಾತ್ರ. ಆದರೆ ತುಳಸಿರಾಮದಾಸರು ದಾಸಪರಂಪರೆಯಲ್ಲಿ ಎಲ್ಲಾ ಕೆಳವರ್ಗದ ದಾಸರನ್ನು ಸೇರಿಸಿಕೊಂಡು ನಿಜವಾಗಿಯೂ ಅವರು ಸ್ವಲ್ಪಮಟ್ಟಿಗೆ ಹರಿದಾಸಕ್ಕೆ ಸಾಹಿತ್ಯಕ್ಕೆ ಅಂಟಿದ್ದ ವೈದಿಕ ಸ್ಪರ್ಶತೆಯನ್ನು ಅಳಿಸಿದ್ದಾರೆ ಎಂದರೆ ತಪ್ಪಾಗಲಾರದು. ತುಳಸಿರಾಮದಾಸರು ಸಾಹಿತ್ಯಿಕವಾಗಿ ಸಮಾಜ ಪರವಾದ ಕೀರ್ತನೆಗಳನ್ನು ರಚಿಸಿದ್ದರೆ ಬಹುಶಃ ಬೇರೊಂದು ಸ್ಥಾನ ಅವರಿಗೆ ಲಭ್ಯವಾಗುತ್ತಿತ್ತು. ಆಶಕ್ತಿ ಅವರಲ್ಲಿತ್ತು. ಪ್ರಾಯಶಃ ತೆಲುಗು ಕೀರ್ತನೆಗಳಲ್ಲಿ ಈ ಅಂಶ ಇದ್ದಿರಬಹುದು. ಆದರೆ ಕರ್ನಾಟಕದಲ್ಲಿ ಸಾಕಷ್ಟು ಸಮಯವನ್ನು 'ಸಾಂಸ್ಕೃತಿಕ ಜಾಗೃತಿಗೆ' ಮೀಸಲಿಟ್ಟಿದ್ದಾರೆ. "ಕೋಲಾರ, ಚನ್ನಪಟ್ಟಣ, ಮೈಸೂರು, ಮುಳಬಾಗಿಲು ಮುಂತಾದ ಕಡೆ ತಿರುಗಾಡಿ ರಾಮೋತ್ಸವ, ಕೃಷ್ಣೋತ್ಸವ, ಹರಿಕತೆಗಳ್ನನು ಆಚರಣೆಗೆ ತಂದರು. ಬೆಂಗಳೂರಿನಲ್ಲಿ ಪ್ರಥಮ ಬಾರಿಗೆ ರಾಮೋತ್ಸವವ್ನನು ಆರಂಭಿಸಿದ ಕೀರ್ತಿ ಇವರಿಗೆ ಸಲ್ಲಬೇಕು. ಈ ಮುಖಾಂತರ ಅಂದಿನ ಸಂದರ್ಭದ ಜನರ ಮನಸ್ಸಿನಲ್ಲಿ ಭಾರತೀಯ ಸಂಸ್ಕೃತಿಯ ಪ್ರಾದೇಶಿಕ ಆಚರಣೆಗಳನ್ನು ಮತ್ತೆ ಆ ಜನರ ಬಳಿಗೇ ಕೊಂಡ್ಯಯ್ದರು. ಜನರಲ್ಲಿ ಭಕ್ತಿ, ಪ್ರೇಮ ನಂಬಿಕೆಗಳನ್ನು ಉಂಟುಮಾಡಿದರು. ಈ ಮೂಲಕ ದಕ್ಷಿಣ ಕರ್ನಾಟಕದ್ಲಲಿ ಸಾಂಸ್ಕೃತಿಕ ಚಳುವಳಿಯನ್ನೇ ಆರಂಭಿಸಿದರು". ಸಮಾಜದಲ್ಲಿ ಜಾತ್ಯಾತೀವಾದ ಧಾರ್ಮಿಕ ಶ್ರದ್ಧೆಯನ್ನು ಸೃಷ್ಟಿಸಿದ ಕೀರ್ತಿ ತುಳಸಿರಾಮದಾಸರದು". ಎಂದು ಸಂಪಾದಕರು ಸಾಧಾರವಾಗಿ ನಿರೂಪಿಸಿದ್ದಾರೆ. ಇದು ಹರಿದಾಸ ಸಾಹಿತ್ಯಕ್ಕೇ ಹೊಸ ತಿರುವನ್ನು ನೀಡಿರುವ ಸಂಗತಿಯಾಗಿದೆ.

ತುಳಸಿರಾಮದಾಸರು ತಮ್ಮ ಶಿಷ್ಯರ ಮೇಲೆ ಗಾಢವಾಗಿ ಪ್ರಭಾವಬೀರಿದ್ದಾರೆ.

"ಗುರುವರ ತುಲಸೀ ರಾಮಯ್ಯ ಪೂರ್ವದ್ವಾರ ನಿಲಯ
ಗುರುಸ್ತುತಿ ಮಾಂ ಪಾಲಯಾ ನಿಜತೇಂದ್ರಿಯಾ" (ಮಳಿಗೆ ರಂಗಸ್ವಾಮಿದಾಸರು)

ಭಯವೇನಿಹುದೊ ನಿನ್ನ ಭಜಕನಾದಮ್ಯಾಲೆ
ದಯ ಸಾಕ್ಷಿಯೊಳು ಜಗತ್ರಯ ಪೂಜ್ಯವಂತ (ಚನ್ನಪಟ್ಟಣ ಅಹೋಬಲದಾಸರು)

ಬಹುಶಃ ದಾಸ ಸಾಹಿತ್ಯದ್ಲಲಿ ಗುರುವಿನ ಬಗ್ಗೆ ಶಿಷ್ಯರು ಇಷ್ಟೊಂದು ಭಕ್ತಿ ಶ್ರದ್ಧೆಯ್ನನು ಮುಂದಿನ ಪೀಳಿಗೆಯಲ್ಲಿ ಕೊಟ್ಟಿರುವುದು ಅಪರೂಪ. ತುಳಸಿರಾಮದಾಸರು ಎಂದೂ ಒಂದು ಕಡೆ ನೆಲೆನಿಂತವರಲ್ಲ ಎಂಬುದಕ್ಕೆ ಅಹೋಬಲದಾಸರು ಅದ್ಭುತವಾಗಿ ಒಂದು ಕೀರ್ತನೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

"ಬೆಂಗಳೂರಿಗೆ ಹೋಗಿಬಂದ ಜಂಗಮನು ತಾನಾಗಿನಿಂದಾ
ಕಂಗಳೆರಡರ ಮಧ್ಯೆ ತಾ ನಿಜಲಿಂಗನಾಗಿ ಕಾಣಬಂದಾ".

ಈ ಇಬ್ಬರು ಶಿಷ್ಯದಾಸರ ಕೀರ್ತನೆಗಳೆಲ್ಲ ಲಭ್ಯವಿದ್ದು ಇವರು ಕ್ರಮವಾಗಿ ಗಾಣಿಗ ಮತ್ತು ಬಣಜಿಗ ವರ್ಗಕ್ಕೆ ಸೇರಿದವರಾಗಿದ್ದಾರೆಂದು ಸಂಪಾದಕರು ಹೇಳಿದ್ದಾರೆ. ಇವರ ಕೀರ್ತನೆಗಳನ್ನು ಸಾಹಿತ್ಯವಲಯ ಗಮನಿಸಬೇಕಾಗಿದೆ.

ಇವಲ್ಲದೆ ತುಳಸಿರಾಮದಾಸರ ಸ್ವಂತ ರಚನೆಗಳಲ್ಲಿ ಕನ್ನಡ ಸಾಹಿತ್ಯಕ್ಕೆ ಹೊಸ ಸೇರ್ಪಡೆಯೆಂದೇ ಕರೆಯಲಾಗುವ ಆಳ್ವಾರ್-ಆಚಾರ್ಯ ಸ್ತುತಿಗಳು ವಿಶಿಷ್ಟವಾಗಿವೆ. ಇವುಗಳ ಬಗ್ಗೆ ಸಂಪಾದಕರಾದ ಪ್ರೊ॥ ನಾ.ಗೀತಾಚಾರ್ಯ ಅವರು ವಿವರವಾಗಿ ಪರಿಶೀಲಿಸಿದ್ದಾರೆ. ತುಳಸಿರಾಮದಾಸರು ವಿಶಿಷ್ಟಾದ್ವೈಂತ ಸಿದ್ಧಾಂತದಂತೆ ಕೇವಲ ಶ್ರೀ ಹರಿಲಕ್ಷ್ಮಿಸ್ತುತಿಗಳನ್ನಷ್ಟೇ ಬರೆಯದೆ ಆಂಜನೇಯ ಸ್ತುತಿಗಳನ್ನೂ ಬಹಳ ಸಮರ್ಥವಾಗಿ ತರುತ್ತಾರೆ. (ಶ್ರೀವೈಷ್ಣವ ಸಂಪ್ರದಾಯದಲ್ಲಿ ಗರುಡ ಆಂಜನೇಯರನ್ನು "ಪೆರಿಯ ತಿರುವಡಿ ಕಿರಿಯ ತಿರುವಡಿ" ಎಂದು ಕರೆದು ಆಳ್ವಾರ್ ಸ್ಥಾನದಲ್ಲೇ ಸ್ತುತಿಸುವುದರಿಂದ ಆ ವರ್ಗದಲ್ಲೇ ಸೇರಿಸಿದೆ. ಎಂದು ಪ್ರೊ॥ ನಾ ಗೀತಾಚಾರ್ಯ ಅವರು ಟಿಪ್ಪಣಿ ಬರೆದಿದ್ದಾರೆ. ಇವೆಲ್ಲ ಕನ್ನಡ ಸಾಹಿತ್ಯದ ಓದುಗನಿಗೆ ಹೊಸ ಪ್ರವೇಶವಾಗಿದ್ದು ಕುತೂಹಲಕರವಾಗಿದೆ.

ಭೂಮಿ ಶೋಕವಿನಾಶಕ ಕಪಿಕುಲ
ಸೋಮ ಸದ್ಗುಣ ಸ್ತೋಮ ದಯಾಳೂ

ಎಂದಿರುವ ಆಂಜನೇಯ ಸ್ತುತಿಗಳು ಕನಕದಾಸರ ಕೀರ್ತನೆಗಳನ್ನು ನೆನಪಿಗೆ ತರುತ್ತವೆ. ಲೋಕನೀತಿಯ ಕುರಿತು ಒಂದೇ ಕೀರ್ತನೆ ಯಾದರೂ ಮನ ಮುಟ್ಟುವಂತಿದೆ. ಪುರಂದರದಾಸರು ಬದುಕನ್ನು ಕುರಿತು "ಮಾನವ ಜನ್ಮ ದೊಡ್ಡದು. ಇದನ್ನು ಹಾನಿಮಾಡಬೇಡಿ ಹುಚ್ಚಪ್ಪಗಳಿರಾ" ಎಂದು ಹೇಳಿದ್ದರೆ ತುಳಸಿರಾಮದಾಸರು ಇನ್ನಷ್ಟು ತಾತ್ವಿಕವಾಗಿ ಹೇಳುತ್ತಾ "ವೃಥಾ ಮಾಡಬೇಡ ಈ ಜನ್ಮವು ಸದಾ ಬರದು ಮೂಢಾ

ಅಧೋಕ್ಷಜನ ಮೃದು ಪಾದಾರವಿಂದಗಳ
ಯಥಾರ್ಥದಿಂದ ಭಜಿಸಿ ಕೃತಾರ್ಥನಾಗದೆ

ಎಂದು ಹೇಳುತ್ತಾರೆ. ಈ ಎಲ್ಲಾ ಕೀರ್ತನೆಗಳ ಬಗ್ಗೆ ಪುಸ್ತಕದಲ್ಲಿ ಸಮರ್ಥ ಸಂಪಾದಕರಾದ ಗೀತಾಚಾರ್ಯ ಅವರು ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ. ಒಟ್ಟಾರೆ ತುಳಸಿರಾಮ ದಾಸರನ್ನು ನಿಸ್ಸಂದೇಹವಾಗಿ ಇನ್ನೊಂದು ಹರಿದಾಸ ಚಳವಳಿಯ ನೇತಾರರು ಎಂದು ಕರೆಯಬಹುದು. ಈ ಕೃತಿ ಹರಿದಾಸ ಪರಂಪರೆಯನ್ನು ಕುರಿತು ನೂತನ ವಿಶ್ಲೇಷಣೆಯನ್ನು ಪ್ರೇರೇಪಿಸುತ್ತದೆ.

ಹರಿದಾಸ ಸಾಹಿತ್ಯ ಸಂಶೋಧನೆಗೆ ಮತ್ತು ಗ್ರಂಥ ಸಂಪಾದನ ಕ್ಷೇತ್ರಕ್ಕೆ ಇದೊಂದು ಉತ್ತಮ ಕೊಡುಗೆಯಾಗಿದೆ. ತುಳಸಿರಾಮದಾಸರ 26 ಮತ್ತು ದಾಸರನ್ನು ಕುರಿತ 31

ಕೀರ್ತನೆಗಳು ಇಲ್ಲಿವೆ. ದೀರ್ಘವಾದ ವಿವರವಾದ ಸಂಶೋಧನಾತ್ಮಕ ಪ್ರಸ್ತಾವನೆ ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ. ಅನುಬಂಧದಲ್ಲಿ ಟಿಪ್ಪಣಿಗಳು, ಕೀರ್ತನಕಾರರ ಪರಿಚಯ, ಅಕಾರಾದಿಗಳನ್ನು ಕೊಟ್ಟಿರುವುದು ಸೂಕ್ತವಾಗಿದೆ. 2003ರಲ್ಲಿ ತುಳಸಿರಾಮದಾಸರ ದೇವಾಲಯದಲ್ಲಿ ಮುಳಬಾಗಿಲಿನಲ್ಲಿ ನಡೆಸಿದ ಶತಮಾನೋತ್ಸವ ವಿಚಾರ ಗೋಷ್ಠಿಯ ಮುಖ್ಯಾಂಶಗಳನ್ನೂ ಅನುಬಂಧದಲ್ಲಿ ದಾಖಲಿಸಿರುವುದು, ಈಗಲೂ ಇರುವ ಶಿಷ್ಯರ ಮಾಹಿತಿ ನೀಡಿರುವುದು ಉಪಯುಕ್ತವಾಗಿದೆ.

– **ಎನ್. ಸುರೇಶ್ ನಾಗಲಮಡಿಕೆ** ಪಿಎಚ್.ಡಿ. ವಿದ್ಯಾರ್ಥಿ, ಬಿ.ಎಂ.ಶ್ರೀ ಪ್ರತಿಷ್ಠಾನ

******

## ಸಾದರ ಸ್ವೀಕಾರ

1) **ಬಸವರಾಜಶಾಸ್ತ್ರೀ**: ಶಶಿಕಲಾ ವೀರಯ್ಯಸ್ವಾಮಿ. ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಡಂಬಳ - ಗದಗ ಮೊದಲ ಮುದ್ರಣ, 2005, ಬೆಲೆ: 5-00 ರೂ.

2) **ಕನ್ನಡ ಸಪ್ತಶೃಂಗಗಳು**: ಸಂಪಾದಕರು. ಮುಂಬೆಳಕು ಕನ್ನಡ ಬಳಗ: ಮುಂಬೆಳಕು ಕನ್ನಡ ಬಳಗ, ನಂ. 203, ಡಿ-6, ಹಿಮಗಿರಿ ಹೌಸಿಂಗ್ ಸೊಸೈಟಿ. ಲೋಕಧಾರಾ, ಕಲ್ಯಾಣ(ಪೂ) ಥಾಣಾ ಜಿಲ್ಲೆ - 421306. ಮೊದಲ ಮುದ್ರಣ 2005, ಬೆಲೆ.75.00

3) **ಹೊಸಗಣ್ಣಿನ ಒಳ ನೋಟದೊಳಗಿಂದ** (ಭಾಗ - 1) ಹರಿಕಥಾಮೃತಸಾರ (ಆಯ್ದ ಪದ್ಯಗಳು: ವಿದ್ಯಾಧರ ಮುತಾಲಿಕ ದೇಸಾಯಿ. ಮುಂಬೆಳಕು ಕನ್ನಡ ಬಳಗ ಮುಂಬಯಿ: ಮೊದಲ ಮುದ್ರಣ, 2004, ಬೆಲೆ. 20ರೂಪಾಯಿಗಳು.

4) **ಡಾ॥ ಎಚ್.ಆರ್. ರಘುನಾಥಭಟ್ಟ ಸ್ಮರಣೆ**: ಪ್ರೊ॥ ಲಕ್ಷ್ಮಣ್ ತೆಲಗಾವಿ ಚಿತ್ರಕಲ್ಲು ಪ್ರಕಾಶನ ಚಿತ್ರದುರ್ಗ - 577501 'ರೇಣು' 1ನೇ ಕ್ರಾಸ್ ನೆಹರುನಗರ ಚಿತ್ರದುರ್ಗ - 577501 ವರ್ಷ - 2004, ಬೆಲೆ. 20-ರೂಪಾಯಿ.

5) **ನಮ್ಮ ಹಕ್ಕಿಗಳು** (ವೈಜ್ಞಾನಿಕ ಕವನಗಳು) ಹ. ನಾಗರಾಜು. ಹನುಮಂತಯ್ಯ ಪ್ರಕಾಶನ, ಮಹಾಗಣಪತಿನಗರ, ರಾಜಾಜಿನಗರ, ಬೆಂಗಳೂರು - 560010, ಮೊದಲ ಮುದ್ರಣ, ವರ್ಷ - 2005, ಬೆಲೆ - 100 ರೂಪಾಯಿಗಳು.

6) **ಕುಮುದೇಂದು ರಾಮಾಯಣ**: ಡಾ॥ ಪಿ.ವಿ. ನಾರಾಯಣ. ಕನ್ನಡ ಸಾಹಿತ್ಯ ಪರಿಷತ್ತು. ಪಂಪಮಹಾಕವಿರಸ್ತೆ, ಚಾಮರಾಜಪೇಟೆ, ಬೆಂಗಳೂರು - 560018, ವರ್ಷ: 2005, ಬೆಲೆ - 150.00ರೂಪಾಯಿಗಳು.

7) **ಜೈನಕಾಯಿದೆ**: ಅನುವಾದ: ಡಾ॥ ಹೋ.ಶ್ರೀ. ಮದನಕೇಸರಿ, ಜಿನಜ್ಯೋತಿ ಪ್ರಕಾಶನ: ನಂ.23 'ರತ್ನತಯ' ಮಾಡಲ್‌ಹೌಸ್ 4ನೆಯ ಬೀದಿ ಬಸವನಗುಡಿ, ಬೆಂಗಳೂರು-560004. ವರ್ಷ:2005, ಬೆಲೆ, 60-00ರೂ.

8) **ಡಾ॥ ರಂ.ಶ್ರೀ. ಮುಗಳಿಯವರ ಜನ್ಮ ಶತಮಾನೋತ್ಸವದ ನೆನಪಿನ ಕಾಣಿಕೆ: ಬಾಳದಾರಿಯಲಿ**: ಸೇತುರಾಮ ಮಳಗಿ: ಅಮಿತ - ಹರ್ಷ ಪ್ರಕಾಶನ, 1011, 19ನೆಯ ಮುಖ್ಯರಸ್ತೆ, 1ನೆಯ ಬ್ಲಾಕ್, ರಾಜಾಜಿನಗರ, ಬೆಂಗಳೂರು-560010.

9) **ಹೂವು** : (ಭೂದೇವಿಯ ಕವನ) ಲೇ: ಟಿ.ವಿ. ವೆಂಕಟರಮಣಯ್ಯ. ಟಿ.ವಿ.ವೆಂಕಟರಮಣಯ್ಯ, ಕೆ.ಎಚ್.ಬಿ. ಕಾಲೋನಿ, 2ನೇ ಹಂತ, 5ನೇ ಅಡ್ಡರಸ್ತೆ,

ಬಸವೇಶ್ವರನಗರ, ಬೆಂಗಳೂರು-560079. ವರ್ಷ 2002, ಬೆಲೆ: 20-00 ರೂಪಾಯಿಗಳು.

10) **ಶುಕದೇವಾಮೃತ ಶ್ರೀಮದ್ಭಾಗವತ** : ಲೇ: ಆದ್ಯ ರಾಮಾಚಾರ್ಯ. ವರದರಾಜ ಪ್ರಕಾಶನ, ನಂ.114 ವೈ. "ಭೀಮರಥ", 4ನೇ ಮುಖ್ಯರಸ್ತೆ, 4ನೇ ಫೇಸ್, 7ನೇ ಬ್ಲಾಕ್, ಬನಶಂಕರಿ, 3ನೇ ಹಂತ, ಬೆಂಗಳೂರು-560085. ವರ್ಷ -2003.

11) **ಪ್ರಬೋಧ ಚಿಂತಾಮಣಿ** : ಲೇ: ವೇದಾಂತ ಚಕ್ರವರ್ತಿ , ಶ್ರೀ ಕೆ.ಜಿ. ಸುಬ್ರಾಯ ಶರ್ಮಾ, ಪ್ರ: ಶ್ರೀ ನಿತ್ಯಾನಂದ ಪ್ರಿಂಟರ್ಸ್, ಅಶೋಕನಗರ, ಬೆಂಗಳೂರು-560050, ವರ್ಷ-2005, ಬೆಲೆ-25-00 ರೂಪಾಯಿಗಳು.

12) **ಚಿಂತನ** : ಲೇ: ನಿಟ್ಟೂರು ಚಂದ್ರಶೇಖರ್, ನಿಟ್ಟೂರು ಚಂದ್ರಶೇಖರ, ನಂ.49/1, ಸೌತ್ ಕ್ರಾಸ್ ರೋಡ್, ಬಸವನಗುಡಿ, ಬೆಂಗಳೂರು-560004, ವರ್ಷ-2002, ಬೆಲೆ-100-00 ರೂ.

13) **ದೇಗುಲ ಸಂಪದ** : (ರಜತಮಹೋತ್ಸವ ಸಂಚಿಕೆ): ಸಂಪಾದಕರು: ಎಂ.ಜಿ. ನಾಗರಾಜ್ ಪ್ರ: ಎಚ್.ಎಸ್. ಸಿದ್ಧಗಂಗಪ್ಪ, ಪಟ್ಟಾಧಿಕಾರ ರಜತಮಹೋತ್ಸವ ಸಮಿತಿ, ಶ್ರೀದೇಗುಲಮಠ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ವರ್ಷ-2005 ಬೆಲೆ-100 ರೂಪಾಯಿಗಳು.

14) **ಸಾಂಸ್ಕೃತಿಕ ವೀರಶೈವ** : ಲೇ: ಎಂಜಿ. ನಾಗರಾಜ್, ಶ್ರೀ ದೇಗುಲಮಠ, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ವರ್ಷ-2005, ಬೆಲೆ-50-00 ರೂಪಾಯಿಗಳು.

15) **ನಿರ್ಮಾಣಶ್ರೀ** : ಸಂಪಾದಕರು: ಟಿ.ಆರ್. ಮಹದೇವಯ್ಯ ಪ್ರ: ಶ್ರೀ ಮಠಾಧ್ಯಕ್ಷರಾದ ಶ್ರೀ ಮ.ಪ್ರ.ಸ್ವಮುಮ್ಮಡಿ ನಿರ್ಮಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರ ರಜತ ಮಹೋತ್ಸವ ಸಮಿತಿ, ಕನಕಪುರ-562117, ಬೆಂಗಳೂರು ಗ್ರಾಮಾಂತರ ಜಿಲ್ಲೆ, ವರ್ಷ-2005, ಬೆಲೆ-200 ರೂಪಾಯಿಗಳು.

16) **ಪರಮಹಂಸರ ಸಮೀಪ ದರ್ಶನ:** ಅನುವಾದ ಜಿ.ಕುಮಾರಪ್ಪ ಪ್ರಕಾಶಕರು: ಪುಸ್ತಕಶಕ್ತಿ ಪ್ರಕಾಶನ ನಂ.103, 3ನೇ ಮುಖ್ಯರಸ್ತೆ, 2ನೇ ಪಾಪ್‌ಲೈನ್ ಟಾಟಾಸಿಲ್ಕ್‌ಫಾರಂ, ಬಸವನಗುಡಿ, ಬೆಂಗಳೂರು-560 004, ವರ್ಷ-2005, ಬೆಲೆ-160-00 ರೂ

17) **ಹೊಚ್ಚ ಹೊಸತು ಹವೆ** : ಲೇಖಕರು : ಎಂ.ಎಸ್. ವೆಂಕಟರಾಮಯ್ಯ ಪ್ರಕಾಶಕರು: ಬಿಜ್ ಬಜ್, ನಂ.2, 1ನೇ ಅಡ್ಡರಸ್ತೆ, ಕಾಳಿದಾಸ ಲೇಔಟ್, ಶ್ರೀನಗರ, ಬೆಂಗಳೂರು-560 050. ವರ್ಷ-2005, ಬೆಲೆ-40.00 ರೂಪಾಯಿಗಳು.

18) **ಉಪಾಸನಾ ಮನೆಯಂಗಳದಲ್ಲಿ ಕವಿತಾ ಗಾಯನ 50:** ನೆನಪಿನ ಸಂಚಿಕೆ ಸುವರ್ಣ ಸಂಭ್ರಮ : ಉಪಾಸನಾ ನಂ.146, ಡಾ॥ ಡಿ.ವಿ.ಜಿ. ರಸ್ತೆ, ಬಸವನಗುಡಿ, ಬೆಂಗಳೂರು-560 004.

19) **ಧರ್ಮಸಿಂಚನ : ಲೇಖಕರು :** ಕೋಟೀಶ್ವರ ಸೂರ್ಯನಾರಾಯಣರಾವ್. ಪ್ರಕಾಶಕರು : ಕೋಟೀಶ್ವರ ಸೂರ್ಯನಾರಾಯಣ ರತ್ನ ಟ್ರಸ್ಟ್ (ರಿ) 'ಮಹಾಲಕ್ಷ್ಮೀಪುರ' ನಂ.25/1, ಡಿ.ವಿ.ಜಿ.ರಸ್ತೆ, ಬೆಂಗಳೂರು-560 004. ವರ್ಷ-2005, ಬೆಲೆ: ಅರ್ಹರಿಗೆ ಉಚಿತ.

20) **ಆಧುನಿಕ ಕನ್ನಡ ಜೈನ ಲೇಖಕರು : ಲೇಖಕರು :** ಡಾ॥ ಎಸ್.ಪಿ.ಪಾಟೀಲ, ಎಸ್.ಡಿ.ಜೆ.ಐ.ಎಂ. ಮ್ಯಾನೇಜಿಂಗ್ ಕಮೀಟಿ, ಶ್ರವಣಬೆಳಗೊಳ-573135, ವರ್ಷ-2005, ಬೆಲೆ-100 ರೂಪಾಯಿಗಳು.

21) **ಸಮಾಜಕಾರ್ಯ ಬೆಳವಣಿಗೆಯ ಹಂತಗಳು : ಲೇಖಕರು:** ಡಾ॥ ಎಚ್.ಎಂ. ಮರುಳಸಿದ್ಧಯ್ಯ, ಪ್ರಕಾಶಕರು: ಶಿವಪ್ರಶಾಂತ ಪ್ರಕಾಶನ, ನಂ. 425, ತಿಲಕನಗರ, ಕುಸನೂರ ರಸ್ತೆ, ಗುಲ್ಬರ್ಗಾ-585105, ವರ್ಷ-2005, ಬೆಲೆ-30-00 ರೂಪಾಯಿಗಳು.

22) **ಶುಭ ನಾಮಾಂಕಿತ ಬೆಂಗಳೂರು: ಲೇಖಕರು :** ಎಂ.ಕೆ.ತಿಮ್ಮೇಶ ಪ್ರಭು, ನಂ. 33, 3ನೇ 'ಎ'ಕ್ರಾಸ್, ಕೆಂಪೇಗೌಡನಗರ, ಬೆಂಗಳೂರು-560 019, ವರ್ಷ:2006, ಬೆಲೆ-15-00 ರೂಪಾಯಿಗಳು.

23) **ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ :** ಶ್ರೀ ಬಿ.ವಿ. ಶ್ರೀನಾಥಶಾಸ್ತ್ರೀ ಪ್ರಕಾಶಕರು, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ ಲಿ. ಎಂಬೆಸಿ ಸೆಂಟರ್, ಕ್ರೆಸೆಂಟ ರಸ್ತೆ, ಬೆಂಗಳೂರು-560 001. ವರ್ಷ-2006, ಬೆಲೆ. 25-00 ರೂಗಳು.

24) **ತೇರನೇರಿ ಅಂಬರದಾಗೆ : ಲೇಖಕರು :** ಎನ್.ಎಸ್. ಶ್ರೀಧರಮೂರ್ತಿ ಪ್ರಕಾಶಕರು: ಪ್ರಸ್ತುತ ಪ್ರಕಾಶನ: ನಂ.48, ಈಸ್ಟ್ ಸರ್ಕಲ್ ರೋಡ್, ಸಜ್ಜನರಾವ್ ವೃತ್ತ, ವಿಶ್ವೇಶ್ವರಪುರಂ, ಬೆಂಗಳೂರು-560 004. ವರ್ಷ-2006, ಬೆಲೆ-100 ರೂಪಾಯಿಗಳು.

25) **ದೇಸೀಗೀತೆ : ಲೇಖಕರು :** ಡಾ॥ ದೊಡ್ಡರಂಗೇಗೌಡ, ಪ್ರಕಾಶಕರು: ಪ್ರಸ್ತುತ ಪ್ರಕಾಶನ ನಂ.49, ಪೂರ್ವ ವೃತ್ತ ರಸ್ತೆ, ಸಜ್ಜನರಾವ್ ವೃತ್ತ, ವಿಶ್ವೇಶ್ವರಪುರ, ಬೆಂಗಳೂರು-560 004. ವರ್ಷ-2006. ಬೆಲೆ-70-00 ರೂಪಾಯಿಗಳು

26) **ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು:** (ಸಂಶೋಧನೆ) ಡಾ॥ ಕೆ.ವಸಂತಲಕ್ಷ್ಮೀ, ಸುಮುಖ ಪ್ರಕಾಶನ, ನಂ. 174 ಇ/28, 1ನೇ ಮಹಡಿ, 1ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು-560 023, ರೂ.125/-, 2006.

27) **ಪ್ರಸಂಗ ತರಂಗ** : (ಹಾಸ್ಯ ಲೇಖನಗಳು) ಬಿ.ಎಸ್. ಕೇಶವರಾವ್, ಆದಿತ್ಯ ಪ್ರಕಾಶನ, ನಂ. 1261, 'ಬೃಂದಾವನ' 46 ನೇ ಅಡ್ಡರಸ್ತೆ, 2ನೇ ಹಂತ, ಕುಮಾರಸ್ವಾಮಿ ಬಡಾವಣೆ, ಬೆಂಗಳೂರು-560 078, ರೂ.120/-, 2005.

28) **ನನ್ನದು ಈ ಕನ್ನಡ ನಾಡು** : (ಕವನ ಸಂಕಲನ) ಸಂ: ಚಿ.ಶ್ರೀನಿವಾಸರಾಜು ಮತ್ತು ಅಂದನೂರು ಶೋಭ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನಸೌಧ, ಬೆಂಗಳೂರು-560 001. ರೂ.20/-, 2005.

29) **ಗಲಗಲಿ ಅವ್ವನವರು** : (ದಾಸಸಾಹಿತ್ಯ) ಹಣಮಂತ ತಾಸಗಾಂವಕರ, ಕನ್ನಡಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560 018. ರೂ.15/-, 2006.

30) **ಶುಭ ಹಾರೈಕೆ** : (ಆದ್ಯಕ್ಷರ ಕಾವ್ಯಾಂಕುರ ಸಂಕಲನ) ಕೊಪ್ಪರಂ ಅನ್ನಪೂರ್ಣ, ಸುಬ್ರಹ್ಮಣ್ಯಂ ಪ್ರಕಾಶನ, ಮಲ್ಲೇಶ್ವರಂ, ಬೆಂಗಳೂರು-560 003, ರೂ.75/-, 2005.

31) **ಒಕ್ಕಲುತನ ಮತ್ತು ಕೆಲವು ಆಚರಣೆಗಳು (ಸಂಶೋಧನೆ)** : ಕ.ವೆಂ. ರಾಜಗೋಪಾಲ, ಪ್ರೊ॥ ಕ.ವೆಂ. ಅಭಿಮಾನಿಗಳ ಬಳಗ, 80 ಅಡಿರಸ್ತೆ, ಎಂ.ಐ.ಜಿ. 41, 2ನೇ ಹಂತ, ಕೆಂಗೇರಿ ಉಪನಗರ, ಬೆಂಗಳೂರು-560 060, 2005 ಉಚಿತ ವಿತರಣೆ.

32) **ನಮ್ಮ ಹಕ್ಕಿಗಳು** : (ವೈಜ್ಞಾನಿಕ ಕವನಗಳು) ಹ.ನಾಗರಾಜು. ಹನುಮಂತಯ್ಯ ಪ್ರಕಾಶನ. ನಂ.89, 4ನೇ ಮುಖ್ಯರಸ್ತೆ, 5ನೇ ಅಡ್ಡರಸ್ತೆ, 1ನೇ ಹಂತ, ಪಶ್ಚಿಮ ಕಾರ್ಡ್ ರಸ್ತೆ, ಮಹಾಗಣಪತಿನಗರ, ರಾಜಾಜಿನಗರ, ಬೆಂಗಳೂರು-560 044. ರೂ.100/-, 2005.

33) **ತಾರಾ ಪುಂಜ** : (ಕವನ ಸಂಕಲನ) ಎಸ್.ಟಿ.ಭಾಗ್ಯಲಕ್ಷ್ಮಿ, ಹಿರಿಯ ಉಪನ್ಯಾಸಕರು. ಡಾ॥ ಅಂಬೇಡ್ಕರ್ ಇನಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಮಲ್ಲತ್ತಹಳ್ಳಿ ಬೆಂಗಳೂರು-560 040, ರೂ. 104/-, 2005.

34) **ಸಂ-ಗ್ರಾಮ** : ರು.ಸೂ. ಭಾಸ್ಕರ ಅವಧಾನಿ, ರುದ್ರಪಟ್ಟಣ ಸಂಗೀತೋತ್ಸವ ಸಮಿತಿ ಟ್ರಸ್ಟ್ (ರಿ) ನಂ.16, 1ನೇ 'ಎ'ಕ್ರಾಸ್, 2ನೇ ಫೇಸ್, ಜೆ.ಪಿ.ನಗರ, ಬೆಂಗಳೂರು-560 078, ರೂ. 90/-, 2006.

35) **ಕಾವೇರಿ ಕಣಿವೆಯ ಸ್ವರ್ಗ** : ಆದ್ಯ ರಾಮಾಚಾರ್ಯ, ವರದರಾಜ ಪ್ರಕಾಶನ, ನಂ. 114 ವೈ, 'ಭೀಮರಥಿ' 4ನೇ ಮುಖ್ಯರಸ್ತೆ, 4ನೇ ಘಟ್ಟ 7ನೇ ವಿಭಾಗ ಬನಶಂಕರಿ 3ನೇ ಹಂತ, ಬೆಂಗಳೂರು-560 085. ರೂ. 250/- ರೂ, 2006.

* * *

# 11. ಪ್ರತಿಷ್ಠಾನ ವಾರ್ತೆ

## ಅ) ದತ್ತಿ ಕಾರ್ಯಕ್ರಮಗಳು

**1) ಎಂ.ವಿ.ಸೀ ಸಂಸ್ಮರಣೆ, ಪ್ರಶಸ್ತಿ ವಿತರಣೆ ಮತ್ತು ಪುಸ್ತಕ ಬಿಡುಗಡೆ ಕಾರ್ಯಕ್ರಮ:** ದಿನಾಂಕ 9.9.2005 ರಂದು ಎಂ.ವಿ.ಸೀ ಸಂಸ್ಮರಣೆ ಅಂಗವಾಗಿ ಅನಂತರಂಗ, ಸಾವಿತ್ರಮ್ಮ ಮತ್ತು ರಾಸ ಸಾಹಿತ್ಯ ಈ ಮೂರುದತ್ತಿಗಳ ಪ್ರಶಸ್ತಿ ವಿತರಣೆಯ ಕಾರ್ಯಕ್ರಮ ನಡೆಯಿತು. ಮಾನ್ಯ ಶಾಸಕರಾದ ಶ್ರೀ ಕೆ. ಚಂದ್ರಶೇಖರ್ ಅವರು ಉದ್ಘಾಟನೆ ಮಾಡಿದರು. ಪ್ರೊ॥ ಚಿ. ಶ್ರೀನಿವಾಸರಾಜು ಅವರು ಎಂ.ವಿ.ಸೀ. ಅವರಿಗೆ ಗುರುವಂದನೆ ಸಲ್ಲಿಸುತ್ತಾ ಪ್ರಶಸ್ತಿ ವಿತರಣೆ ಮಾಡಿದರು. ಪ್ರಶಸ್ತಿ ವಿಜೇತರು (1) ಶ್ರೀಮತಿ ಇಂದಿರಾ ಹೆಗ್ಗಡೆ, ಅವರು **"ಅನಂತರಂಗ ಸಂಶೋಧನ ಸಾಹಿತ್ಯ ಪ್ರಶಸ್ತಿ"**ಯನ್ನೂ (2) ಶ್ರೀ ಬೇಡರೆಡ್ಡಿಹಳ್ಳಿ ಪಂಪಣ್ಣ ಅವರು **"ಸಾವಿತ್ರಮ್ಮ ದತ್ತಿ ಮಕ್ಕಳ ಸಾಹಿತ್ಯ ಪ್ರಶಸ್ತಿ"**ಯನ್ನೂ (3) ಶ್ರೀಮತಿ ಹೆಚ್. ಶಶಿಕಲಾ **"ರಾಸ ಸಾಹಿತ್ಯ ದತ್ತಿ ವಿಮರ್ಶಾ ಬಹುಮಾನ"** ವನ್ನೂ ಪಡೆದರು.

ಇದೇ ಸಂದರ್ಭದಲ್ಲಿ ಶ್ರೀ ಎಸ್.ಟಿ. ರಾಧಾಕೃಷ್ಣ ಅವರ **"ಇಲ್ಲಿಂದೆಲ್ಲಿಗೆ"** ಪುಸ್ತಕವನ್ನು ಗೌರವಾಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ಬಿಡುಗಡೆ ಮಾಡಿದರು. ಅಧ್ಯಕ್ಷರಾದ ಡಾ ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು.

2) ದಿನಾಂಕ 11.02.2005 ರಂದು ನಡೆದ **ಟಿ.ಎನ್.ಮಹದೇವಯ್ಯ ಮತ್ತು ಎಂ.ಜಿ. ನಂಜುಂಡರಾಧ್ಯ ದತ್ತಿ ಕಾರ್ಯಕ್ರಮ**ದಲ್ಲಿ ಡಾ॥ ಬಿ.ನಂಜುಂಡಸ್ವಾಮಿ ಮತ್ತು ಶ್ರೀ ಷಣ್ಮುಖಯ್ಯ ಅಕ್ಕೂರು ಮಠ ಅವರು ಉಪನ್ಯಾಸಗಳನ್ನು ನೀಡಿದರು. ಶ್ರೀ ಎನ್.ಬಸವಾರಾಧ್ಯ ಅಧ್ಯಕ್ಷತೆ ವಹಿಸಿದ್ದರು.

**3) ಬಿ.ಎಂ. ಶ್ರೀ. ದತ್ತಿ ಅಂಗವಾಗಿ ಬಿ.ಎಂ.ಶ್ರೀ ಪ್ರತಿಮೆಗಳಿಗೆ ಮಾಲಾರ್ಪಣೆ ಕಾರ್ಯಕ್ರಮ :** ದಿನಾಂಕ: 03.01.2006ರಂದು ನ್ಯಾಷನಲ್ ಕಾಲೇಜ್ ವೃತ್ತದ ಬಿ.ಎಂ.ಶ್ರೀ. ಪ್ರತಿಮೆಗೆ ಸ್ವತಂತ್ರ ಹೋರಾಟಗಾರ ಶ್ರೀ ಎಚ್. ಎಸ್. ದೊರೆಸ್ವಾಮಿ ಅವರಿಂದ ಮತ್ತು ಬಿ.ಎಂ. ಶ್ರೀ ಪ್ರತಿಷ್ಠಾನದಲ್ಲಿರುವ ಬಿ.ಎಂ.ಶ್ರೀ ಪ್ರತಿಮೆಗೆ ಖ್ಯಾತ ಸಾಹಿತಿ ಬರಗೂರು ರಾಮಚಂದ್ರಪ್ಪ ಅವರಿಂದ ನಡೆಯಿತು. ಶ್ರೀಮತಿ ಜಯಾಪಾರ್ಥಸಾರಥಿ ಮತ್ತು ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಅವರಿಂದ ಸಿರಿ ಸಂಗೀತದ ಅಂಗವಾಗಿ ಬಿ.ಎಂ.ಶ್ರೀ. ಗೀತಗಾಯನವೂ ಪ್ರತಿಮೆಗಳ ಸಮ್ಮುಖದಲ್ಲಿ ನಡೆಯಿತು. ಶಾಸಕರಾದ ಕೆ. ಚಂದ್ರಶೇಖರ್, ಡಾ॥ ಎಂ. ಚಿದಾನಂದಮೂರ್ತಿ, ಪ್ರೊ॥ ಡಿ.ಲಿಂಗಯ್ಯ ಮುಂತಾದ ಗಣ್ಯರು ಉಪಸ್ಥಿತರಿದ್ದರು.

**4) ಡಾ॥ ಶಾಂತಾ ಪ್ರಭುಶಂಕರ್ ದತ್ತಿ ಕಾರ್ಯಕ್ರಮ** : ದಿನಾಂಕ 27.02.06ರಂದು ಡಾ॥ ಕೆ. ಜಯಲಕ್ಷ್ಮೀ ಅವರಿಂದ 'ಆರೋಗ್ಯದ ಸೂತ್ರಗಳು' ವಿಷಯದ ಬಗ್ಗೆ ಉಪನ್ಯಾಸ ನಡೆಯಿತು. ಡಾ॥ ಪ್ರಭುಶಂಕರ ಅವರು ಅಧ್ಯಕ್ಷತೆ ವಹಿಸಿದ್ದರು. ಶಾರದಾ ಮಂದಿರದ ಸಹಯೋಗದಲ್ಲಿ ಶಾರದಾ ಪ್ರಾರ್ಥನಾ ಮಂದಿರದಲ್ಲಿ ಈ ಕಾರ್ಯಕ್ರಮ ನಡೆಯಿತು.

**5) ವಿ.ಸೀ.ದತ್ತಿ ಕಾರ್ಯಕ್ರಮದ** ಅಂಗವಾಗಿ ದಿನಾಂಕ 01.05.2006 ರಂದು ವಿ.ಸೀ. ಸಂಪದದ ಸಹಯೋಗದಲ್ಲಿ ಖ್ಯಾತ ವಿಮರ್ಶಕ "ಕೆ. ನರಸಿಂಹಮೂರ್ತಿ, ಬದುಕು–ಸಾಹಿತ್ಯ ಸಮೀಕ್ಷೆ" ಪುಸ್ತಕ ಬಿಡುಗಡೆ ಸಮಾರಂಭ ನಡೆಯಿತು. ಪುಸ್ತಕದ ಲೇಖಕರಾದ ಡಾ॥ ಪಿ.ವಿ. ನಾರಾಯಣ ಅವರು ನರಸಿಂಹಮೂರ್ತಿ ಅವರ ಬದುಕು ಬರಹದ ಸಮೀಕ್ಷೆ ನಡೆಸಿದರು. ಪ್ರೊ॥ ಎಂ.ಎಚ್. ಕೃಷ್ಣಯ್ಯ ಅವರು ಪುಸ್ತಕ ಬಿಡುಗಡೆ ಮಾಡಿದರು. ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು.

**6) ಸಿ.ಕೆ. ನಾಗರಾಜರಾವ್ ದತ್ತಿ ಕಾರ್ಯಕ್ರಮ:** 15.06.06ರಂದು ಖ್ಯಾತ ಕಾದಂಬರಿಕಾರ ಸಿ.ಕೆ. ನಾಗರಾಜರಾವ್ ದತ್ತಿ ಕಾರ್ಯಕ್ರಮ ಅಂಗವಾಗಿ ಇನ್ನೊಬ್ಬ ಖ್ಯಾತ ಕಾದಂಬರಿಕಾರರಾದ ಆದ್ಯ ರಾಮಾಚಾರ್ಯ ಅವರಿಂದ 'ಐತಿಹಾಸಿಕ ಕಾದಂಬರಿಗಳು' ಕುರಿತು ಉಪನ್ಯಾಸ ನಡೆಯಿತು. ಖ್ಯಾತ ವಿಮರ್ಶಕರಾದ ಪ್ರೊ॥ ಎಲ್.ಎಸ್.ಶೇಷಗಿರಿರಾವ್ ಅವರು ಅಧ್ಯಕ್ಷತೆ ವಹಿಸಿದ್ದರು.

**7) ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ ಕಾರ್ಯಕ್ರಮ** : ಖ್ಯಾತ ಲೇಖಕರಾದ ಡಾ॥ ಕೆ. ಶ್ರೀಕಂಠಯ್ಯ ಅವರು ಸ್ಥಾಪಿಸಿರುವ 50,000 ರೂಗಳ ಕಣಕಟ್ಟೆ ಕೃಷ್ಣಮೂರ್ತಿರಾವ್ ಸ್ಮಾರಕ ದತ್ತಿ ನಿಧಿಯಲ್ಲಿ ಪ್ರತಿವರ್ಷ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಲಾಗುವುದು. ದಿನಾಂಕ 22.06.06 ರಂದು ನಡೆದ ಈ ದತ್ತಿಯ ಪ್ರಥಮ ಕಾರ್ಯಕ್ರಮವಾಗಿ ಯುಗಳವಾದ್ಯ ಸಂಗೀತವನ್ನು ಏರ್ಪಡಿಸಲಾಗಿತ್ತು. ಖ್ಯಾತ ಸಂಗೀತ ಕಲಾವಿದರಾದ ಶ್ರೀಮತಿ ಪುಷ್ಪ ಕಾಶಿನಾಥ ಅವರು ವೀಣಾ ವಾದನವನ್ನೂ ವಿದ್ವಾನ್ ಶ್ರೀ ಎಂ.ಕೆ. ಪ್ರಾಣೇಶ್ ಅವರು ಕೊಳಲು ವಾದನವನ್ನು ಯುಗಳವಾಗಿ ನುಡಿಸಿ ಸಭಿಕರನ್ನು ರಂಜಿಸಿದರು. ಅನೇಕ ಪ್ರಮುಖ ಕೀರ್ತನೆಗಳನ್ನು ಅತ್ಯಂತ ಸುಶ್ರಾವ್ಯವಾಗಿ ನುಡಿಸಿ ಪ್ರೌಢಿಮೆಯನ್ನು ತೋರಿದರು. ದಾನಿಗಳಾದ ಡಾ॥ ಕೆ. ಶ್ರೀಕಂಠಯ್ಯ ಅವರು ಉಪಸ್ಥಿತರಿದ್ದರು. ಪಕ್ಕವಾದ್ಯದಲ್ಲಿ ಮೃದಂಗ ಮತ್ತು ಖಂಜರಗಳನ್ನು ಆನೂರು ಅನಂತಕೃಷ್ಣ ಶರ್ಮ ಮತ್ತು ಅವರ ಶಿಷ್ಯರು ನುಡಿಸಿದರು. ಇದು ಪ್ರತಿಷ್ಠಾನದ ಸಿರಿಸಂಗೀತ ಮಾಲೆಯ ಕಾರ್ಯಕ್ರಮವೂ ಆಗಿತ್ತು.

**8) 27ನೇ ವಾರ್ಷಿಕೋತ್ಸವ ಸಮಾರಂಭ ಮತ್ತು ಪುಸ್ತಕ ಬಿಡುಗಡೆ** : ಈ ಕಾರ್ಯಕ್ರಮ ದಿನಾಂಕ: 06.05.06ರಂದು ನಡೆಯಿತು. ಸಚಿವರಾದ ಸನ್ಮಾನ್ಯ ಶ್ರೀ ರಾಮಚಂದ್ರಗೌಡ ಅವರು ಪುಸ್ತಕಗಳನ್ನು ಬಿಡುಗಡೆ ಮಾಡುತ್ತ ಪ್ರತಿಷ್ಠಾನದ ಬಗ್ಗೆ ಮೆಚ್ಚುಗೆ ಸೂಚಿಸಿ

ತಮ್ಮ ಶಾಸಕ ನಿಧಿಯಿಂದ ಪುಸ್ತಕ ಪ್ರಕಟಣೆಗಾಗಿ 2 ಲಕ್ಷರೂಗಳ ದೇಣಿಗೆ ಘೋಷಿಸಿದರು. ಮಾನ್ಯ ಶಾಸಕರಾದ ಶ್ರೀ. ಕೆ. ಚಂದ್ರಶೇಖರ್ ಅವರು ಹಸ್ತಪ್ರತಿ ಪ್ರದರ್ಶನ ಉದ್ಘಾಟನೆ ಮಾಡಿದರು. ನಗರ ಪಾಲಿಕೆ ಸದಸ್ಯ ಶ್ರೀ ಬಿ.ಎಸ್. ಸತ್ಯನಾರಾಯಣ ಅವರು ಉಪಸ್ಥಿತರಿದ್ದರು. ಗೌರವಾಧ್ಯಕ್ಷರಾದ ಶ್ರೀ.ಜಿ. ನಾರಾಯಣ ಅವರು ಅಧ್ಯಕ್ಷತೆ ವಹಿಸಿದ್ದರು. ಪ್ರೊ॥ ಡಿ. ಲಿಂಗಯ್ಯನವರು ಸಂಕಲಿಸಿರುವ 'ಬಿ.ಎಂ.ಶ್ರೀಕಂಠಯ್ಯ' ಮತ್ತು ಎಸ್.ವಿ. ಶ್ರೀನಿವಾಸರಾವ್ ಅವರು ಸಂಕಲಿಸಿರುವ 'ಎಂ.ವಿ.ಸೀತಾರಾಮಯ್ಯ' ಎಂಬ ವ್ಯಕ್ತಿ ಚಿತ್ರ ಮತ್ತು ಸೂಕ್ತಿಗಳ ಸಂಕಲನಗಳು ಬಿಡುಗಡೆಯಾದವು. ಇವು ರಜತೋತ್ಸವ ಮಾಲೆಯ ಗ್ರಂಥಗಳಾಗಿದ್ದು ಈ ಮಾಲೆಯಲ್ಲಿ ಇನ್ನು ಕೆಲವು ಪುಸ್ತಕಗಳು ಸಿದ್ಧವಾಗುತ್ತಿವೆ.

**9) ಎಂ.ವಿ.ಸೀ ಪುರಸ್ಕಾರ ಪ್ರದಾನ ಮತ್ತು ಉಪನ್ಯಾಸ ಕೊಠಡಿಗಳ ಉದ್ಘಾಟನೆ:** ದಿನಾಂಕ: 14.05.06 ರಂದು ಈ ಕಾರ್ಯಕ್ರಮ ನಡೆಯಿತು. ಕೊಠಡಿಗಳ ಉದ್ಘಾಟನೆ ಮತ್ತು ಎಂ.ವಿ. ಸೀ ಪುರಸ್ಕಾರ ಪ್ರದಾನವನ್ನು, ರಜೋತ್ಸವ ಸಂದರ್ಭದಲ್ಲಿ ತಮ್ಮ ಸಂಸದರ ನಿಧಿಯಿಂದ 5 ಲಕ್ಷ ರೂಗಳ ಕೊಡುಗೆ ನೀಡಿದ್ದ ಕಟ್ಟಡ ದಾನಿಗಳೂ ಕೇಂದ್ರ ಸರ್ಕಾರದ ಯೋಜನಾ ರಾಜ್ಯ ಸಚಿವರೂ ಆದ ಮಾನ್ಯಶ್ರೀ ಎಂ.ವಿ. ರಾಜಶೇಖರನ್ ಅವರು ನೆರವೇರಿಸಿದರು. ಕಾಮಗಾರಿಯ ಬಗ್ಗೆ ಮೆಚ್ಚುಗೆ ಸೂಚಿಸುತ್ತ ಉಳಿದ ಕಾಮಗಾರಿಗೆ ಅಗತ್ಯವಾದ ಇನ್ನೂ 5 ಲಕ್ಷರೂಗಳನ್ನು ನೀಡುವುದಾಗಿ ಭರವಸೆ ನೀಡಿದರು. ಹಿರಿಯ ಗಾಂಧಿವಾದಿಗಳಾದ ಶ್ರೀ.ಎಚ್.ಎಸ್. ದೊರೆಸ್ವಾಮಿ ಅವರು ಎಂ.ವಿ.ಸೀ ಪುರಸ್ಕಾರ ಸ್ವೀಕರಿಸಿದರು. ಈ ಬಾರಿಯ ಪುರಸ್ಕಾರ ನಾಡು-ನುಡಿ ಸಂಘಟನೆಯ ಕ್ಷೇತ್ರದ ಸಾಧಕರಿಗೆ ಮೀಸಲಾಗಿತ್ತು. ಶ್ರೀ. ವಿ.ಎಸ್. ಕೃಷ್ಣ ಅಯ್ಯರ್, ಗೌರವಾಧ್ಯಕ್ಷರಾದ ಶ್ರೀ.ಜಿ. ನಾರಾಯಣ ಅವರು ಮುಖ್ಯ ಅತಿಥಿಗಳಾಗಿದ್ದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು. ಈ ಪ್ರಶಸ್ತಿಯನ್ನು ಪ್ರತಿವರ್ಷ ಎಂ.ವಿ.ಸೀ. ಅವರ ಮಕ್ಕಳು ಪ್ರಾಯೋಜಿಸುತ್ತಿದ್ದಾರೆ.

## ಆ) ಶತಮಾನೋತ್ಸವ ಕಾರ್ಯಕ್ರಮಗಳು

**1) ರಂ.ಶ್ರೀ. ಮುಗಳಿ ಜನ್ಮ ಶತಮಾನೋತ್ಸವ :** ದಿನಾಂಕ 11.09.2005 ಭಾನುವಾರ ಸಂಜೆ 6-15ಕ್ಕೆ ಡಾ॥ ರಂ.ಶ್ರೀ. ಮುಗಳಿ ಜನ್ಮ ಶತಮಾನೋತ್ಸವ ಅಂಗವಾಗಿ ಶತಮಾನೋತ್ಸವ ಸಮಿತಿಯ ಸಹಯೋಗದಲ್ಲಿ "ಶಿಕ್ಷಣರಂಗ ಮತ್ತು ರಸಿಕರಂಗರು" ಚಿಂತನಗೋಷ್ಠಿ ಕಾರ್ಯಕ್ರಮ ನಡೆಯಿತು. ಶ್ರೀ ಜಿ. ನಾರಾಯಣ ಅವರು ಉದ್ಘಾಟನೆ ಮಾಡಿದರು. ಮುಖ್ಯ ಅತಿಥಿಗಳಾಗಿ, ಡಾ॥ ಹಂಪ ನಾಗರಾಜಯ್ಯ, ಡಾ॥ಎಚ್.ಎಸ್. ರಾಘವೇಂದ್ರರಾವ್ ಮತ್ತು ಡಾ॥ ಎಚ್.ಎ. ಸತ್ಯವತಿ ಭಾಗವಹಿಸಿ ಡಾ॥ ರಂ.ಶ್ರೀ. ಮುಗಳಿ ಅವರ ಜೀವನ ಸಾಧನೆ ವಿಶೇಷವಾಗಿ ಶಿಕ್ಷಣ ಕ್ಷೇತ್ರದ ಕೊಡುಗೆಗಳನ್ನು ಸ್ಮರಿಸಿದರು.

**2) ಡಿ.ಎಲ್. ನರಸಿಂಹಾಚಾರ್ ಶತಮಾನೋತ್ಸವ ವಿಚಾರಗೋಷ್ಠಿ :** ದಿನಾಂಕ11.11.2005 ಮತ್ತು 12.11.2005 ರಂದು ಡಿ.ಎಲ್.ಎನ್. ಶತಮಾನ ಸ್ಮರಣೆ ಕಾರ್ಯಕ್ರಮ ನಡೆಯಿತು. ಬೆಂಗಳೂರು ವಿಶ್ವವಿದ್ಯಾಲಯ, ಹಂಪಿ ವಿಶ್ವವಿದ್ಯಾಲಯ, ಬಿ.ಎಂ.ಶ್ರೀ. ಪ್ರತಿಷ್ಠಾನ ಸೇರಿ ಸೆನೆಟ್ ಹಾಲ್‌ನಲ್ಲಿ ನಡೆಸಿದ ಈ ಎರಡು ದಿನದ ವಿಚಾರಗೋಷ್ಠಿಯಲ್ಲಿ ಡಿ.ಎಲ್.ಎನ್ ಅವರ ಶಿಷ್ಯರು, ಗಣ್ಯ ಸಾಹಿತಿ-ವಿದ್ವಾಂಸರು ಪಾಲ್ಗೊಂಡಿದ್ದರು.

ಈ ವಿಚಾರ ಗೋಷ್ಠಿಯನ್ನು ಪ್ರೊ॥ ಜಿ.ವೆಂಕಟಸುಬ್ಬಯ್ಯನವರು ಉದ್ಘಾಟನೆ ಮಾಡಿದರೆ ಡಾ॥ ಎಂ.ಚಿದಾನಂದ ಮೂರ್ತಿಗಳು ಸಮಾರೋಪಭಾಷಣ ಮಾಡಿದರು. 'ಡಿ.ಎಲ್.ಎನ್. ಸಾಹಿತ್ಯ-ವಿವಿಧ ಮುಖಗಳು' ಗೋಷ್ಠಿಯಲ್ಲಿ ಅವರ ಸಾಹಿತ್ಯ ಕ್ಷೇತ್ರಗಳನ್ನು ಕುರಿತ ಉಪನ್ಯಾಸಗಳಿದ್ದವು. 'ಡಿ.ಎಲ್.ಎನ್. ನೆನಪಿನಂಗಳ' ಗೋಷ್ಠಿಗಳಲ್ಲಿ ಅವರ ಶಿಷ್ಯರುಗಳಿಂದ ರಸವತ್ತಾದ ಅನುಭವಗಳಿದ್ದವು. ಇದೇ ಸಂದರ್ಭದಲ್ಲಿ ಡಿ.ವಿ.ಕೆ. ಮೂರ್ತಿ ಪ್ರಕಾಶನದ ಡಿ.ಎಲ್.ಎನ್. ಕೃತಿಗಳನ್ನು ಬಿಡುಗಡೆ ಮಾಡಲಾಯಿತು.

**3) ಡಾ॥ ಆ.ನೇ. ಉಪಾಧ್ಯೆ ಶತಮಾನೋತ್ಸವ ಕಾರ್ಯಕ್ರಮ** : ದಿನಾಂಕ : 08.04.2006 ರಂದು ಖ್ಯಾತ ಜೈನ ಸಾಹಿತ್ಯ ಸಂಶೋಧಕ ಆ.ನೇ ಉಪಾಧ್ಯೆ ಅವರ ಶತಮಾನೋತ್ಸವ ಸ್ಮರಣೆ ನಡೆಯಿತು. ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರು ಕಾರ್ಯಕ್ರಮವನ್ನು ಉದ್ಘಾಟನೆಮಾಡಿದರು. 'ಉಪಾಧ್ಯೆಯವರ ಬದುಕು ಬರಹ' ವಿಷಯದ ಬಗ್ಗೆ ಪಂಡಿತ ಪ. ನಾಗರಾಜಯ್ಯ ಮತ್ತು 'ಉಪಾಧ್ಯೆಯವರ ಶಿಷ್ಯವಾತ್ಸಲ್ಯ'ದ ಬಗ್ಗೆ ಪ್ರೊ॥ ಶುಭಚಂದ್ರ ಅವರು ಉಪನ್ಯಾಸ ನೀಡಿದರು. ಅಧ್ಯಕ್ಷರಾದ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು. ಆ.ನೇ. ಉಪಾಧ್ಯೆ ದತ್ತಿ, ಎಂ.ಎ. ಜಯಚಂದ್ರ ದತ್ತಿ ಮತ್ತು ಎಂ.ಕೆ. ವಿಜಯಲಕ್ಷ್ಮೀ ದತ್ತಿಗಳ ಅಂಗವಾಗಿ ಈ ಕಾರ್ಯಕ್ರಮವನ್ನು ರೂಪಿಸಲಾಗಿತ್ತು. ದತ್ತಿದಾನಿಗಳಾದ ಪ್ರೊ॥ ಎಂ.ಎ. ಜಯಚಂದ್ರ, ಶ್ರೀ ಎಸ್.ಬಿ. ವಸಂತರಾಜಯ್ಯ ಮತ್ತು ಶ್ರೀಮತಿ ಮಾಲತಿ ಶೆಟ್ಟಿ ಮುಂತಾದ ಗಣ್ಯರು ಉಪಸ್ಥಿತರಿದ್ದರು.

**4) ರಾಶಿ ಮತ್ತು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಶತಮಾನೋತ್ಸವ** ಸ್ಮರಣೆಯಲ್ಲಿ ಜಿ.ಪಿ. ರಾಜರತ್ನಂ ದತ್ತಿ ಮತ್ತು ವೆಂಕಟರಂಗಪ್ಪ ದತ್ತಿ ಅಂಗವಾಗಿ ದಿನಾಂಕ 10.04.06 ರಂದು ಹಾಸ್ಯ ಸಂಜೆ ಕಾರ್ಯಕ್ರಮವು ನುಡಿ ಬಳಗದ ಸಹಯೋಗದೊಂದಿಗೆ ನಡೆಯಿತು. ಶ್ರೀ. ಬಿ.ಎಸ್. ಕೇಶವರಾವ್ ಮತ್ತು ಶ್ರೀ. ವೈ.ವಿ.ಗುಂಡುರಾವ್ ಭಾಗವಹಿಸಿದ್ದರು. ಅಧ್ಯಕ್ಷರಾದ ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ ಅಧ್ಯಕ್ಷತೆ ವಹಿಸಿದ್ದರು. ಎನ್ ರಾಮನಾಥ್ ಕಾರ್ಯಕ್ರಮ ನಿರೂಪಿಸಿದರು.

**5) ಪ್ರೊ॥ ಕೆ. ವೆಂಕಟರಾಮಪ್ಪ ಶತಮಾನೋತ್ಸವದ** ಅಂಗವಾಗಿ ದಿನಾಂಕ 28.05.06ರಂದು ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರ ಪ್ರೊ॥ ಕೆ.ವೆಂಕಟರಾಮಪ್ಪನವರ

ಜೀವನ ಸಾಧನೆ ಕುರಿತು ವಿಶೇಷ ಉಪನ್ಯಾಸ ನೀಡಿದರು. ಪ್ರಸಿದ್ಧ ಸಾಹಿತಿಗಳೂ ಜನಪ್ರಿಯವಾಗ್ಮಿಗಳೂ ಆಗಿದ್ದ ಪ್ರೊ॥ ಕೆ.ವೆಂಕಟರಾಮಪ್ಪನವರ ಶತಮಾನೋತ್ಸವದ ಅಂಗವಾಗಿ ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ ಈ ಕಾರ್ಯಕ್ರಮ ನಡೆಯಿತು. ಶ್ರೀ ಎಚ್.ಎಸ್. ದೊರೆಸ್ವಾಮಿ ಮತ್ತು ಡಾ॥ ಎನ್. ಸುಬ್ರಹ್ಮಣ್ಯ ಹಾಗೂ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರುಗಳೂ ಈ ಸಂದರ್ಭದಲ್ಲಿ ತಮ್ಮ ಅನುಭವಗಳನ್ನು ನೆನಪಿಸಿಕೊಂಡರು.

6) ಡಾ॥ ಎನ್.ಅನಂತರಂಗಾಚಾರ್ ಶತಮಾನೋತ್ಸವದ ಅಂಗವಾಗಿ ಶತಮಾನೋತ್ಸವ ಸಮಿತಿ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಡಾ॥ ಎನ್.ಅನಂತರಂಗಾಚಾರ್ ದತ್ತಿನಿಧಿಯ ಪ್ರಥಮ ಉಪನ್ಯಾಸವಾಗಿ೧೪...೬...೦೬...ರಂದು 'ಅನಂತರಂಗಾಚಾರ್ ಸಾಹಿತ್ಯ ಸಾಧನೆ' ವಿಷಯವನ್ನು ಕುರಿತು ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಗಳು ಮಾತನಾಡಿದರು. ಪ್ರೊ॥ ಎನ್.ನಾಗಪ್ಪ ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಎ. ಜಾನಕಿ ಮತ್ತು ಅವರ ಬಂಧುಗಳು ಉಪಸ್ಥಿತರಿದ್ದರು.

## ಇ) ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ ಕಾರ್ಯಕ್ರಮಗಳು

1) ದಿನಾಂಕ 28.8.2005 ರಂದು ಭಾನುವಾರ ಶ್ರೀಮತಿ ಶಾಂತಕುಮಾರಿ ಅವರಿಂದ 'ಟಿ.ಎನ್. ಮಹದೇವಯ್ಯನವರ ಸಾಹಿತ್ಯ' ಕುರಿತು ಚರ್ಚಾಗೋಷ್ಠಿ ನಡೆಯಿತು. ಶ್ರೀ ಎನ್. ಬಸವಾರಾಧ್ಯ ಪ್ರೊ॥ ನಾ. ಗೀತಾಚಾರ್ಯ ಅವರು ಉಪಸ್ಥಿತರಿದ್ದರು. ಪ್ರೊ॥ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು.

2) ದಿನಾಂಕ 13.11.2005 ರಂದು ಭಾನುವಾರ ಶ್ರೀ ಮಂಜುನಾಥಸ್ವಾಮಿ ಜಿ.ಎಸ್. ಅವರಿಂದ 'ವಚನ ಚಳುವಳಿ ಆಂತರಿಕ ವೈರುಧ್ಯಗಳು' ಕುರಿತು ಚರ್ಚಾಗೋಷ್ಠಿ ನಡೆಯಿತು. ಪ್ರೊ॥ ನಾ. ಗೀತಾಚಾರ್ಯ ಉಪಸ್ಥಿತರಿದ್ದರು.

3) ದಿನಾಂಕ 16.12.2005ರಂದು ಹಂಪಿ ವಿಶ್ವವಿದ್ಯಾಲಯದಲ್ಲಿ ಕುಲಪತಿಗಳ ಕಾರ್ಯಾಲಯದಲ್ಲಿ ಸಂಶೋಧನ ಕೇಂದ್ರಗಳ ಸಮಾಲೋಚನ ಸಭೆಯು ಕುಲಪತಿಗಳಾದ ಡಾ॥ ಬಿ.ಎ. ವಿವೇಕ ರೈ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಕನ್ನಡ ವಿಶ್ವವಿದ್ಯಾಲಯದ 9 ಸಂಶೋಧನ ಕೇಂದ್ರದ ಪ್ರತಿನಿಧಿಗಳು, ಕುಲಸಚಿವರು, ಅಧ್ಯಯನಾಂಗದ ನಿರ್ದೇಶಕರು ಮತ್ತು ಕಲಾ ವಿಭಾಗದ ಡೀನ್ ಅವರು ಭಾಗವಹಿಸಿದ್ದರು. ಪ್ರತಿಷ್ಠಾನದಿಂದ ಗೌರವ ಕಾರ್ಯದರ್ಶಿಗಳು ಭಾಗವಹಿಸಿದ್ದರು. ಪಿಎಚ್.ಡಿ ಮತ್ತು ಎಂ.ಫಿಲ್ ಅಧ್ಯಯನಕ್ಕಾಗಿ ಎಲ್ಲ ಕೇಂದ್ರಗಳಿಗೂ ಒಂದೇ ನೀತಿಯನ್ನು ರೂಪಿಸುವುದಕ್ಕೆ ಈ ಸಭೆಯು ವಿವರವಾದ ಚರ್ಚೆಯನ್ನು ನಡೆಸಿತು.

4) ಸಹೃದಯಗೋಷ್ಠಿಯಲ್ಲಿ ಪಿಎಚ್.ಡಿ. ವಿದ್ಯಾರ್ಥಿಗಳ ಸಂವಾದ ಕಾರ್ಯಕ್ರಮಗಳು: ದಿನಾಂಕ 08.01.06 ಭಾನುವಾರ ಶ್ರೀ ಎಲ್.ಎಂ. ವೆಂಕಟೇಶ ಅವರು 'ಕಲ್ಯಾಣಕ್ರಾಂತಿ ಮತ್ತು ಸಾಂಸ್ಕೃತಿಕ ಸನ್ನಿವೇಶ' ಎಂಬ ತಮ್ಮ ಪಿಎಚ್.ಡಿ. ವಿಷಯದ ಬಗ್ಗೆ ಮಾತನಾಡಿದರು. ಅಧ್ಯಕ್ಷತೆಯನ್ನು ಮಾರ್ಗದರ್ಶಕರಾದ ಡಾ॥ ಪಿ.ವಿ. ನಾರಾಯಣ ವಹಿಸಿದ್ದರು.

ದಿನಾಂಕ 28.05.06ರಂದು ಶ್ರೀಮತಿ ಶಾಂತಕುಮಾರಿ ಅವರು 'ಕಂಪ್ಯೂಟರ್ ನೆಲೆಯಲ್ಲಿ ಬದಲಾದ ಕರ್ನಾಟಕ ಎಂಬ ತಮ್ಮ ಪಿಎಚ್.ಡಿ. ವಿಷಯದ ಬಗ್ಗೆ ಮಾತನಾಡಿದರು. ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಉಪಸ್ಥಿತಿಯಲ್ಲಿ ಮಾರ್ಗದರ್ಶಕರಾದ ಡಾ॥ ಎಂ.ಎಲ್. ಲಲಿತಮ್ಮ ಅವರು ಅಧ್ಯಕ್ಷತೆ ವಹಿಸಿದ್ದರು.

5) ಪಿಹೆಚ್.ಡಿ. ವಿದ್ಯಾರ್ಥಿಗಳಿಗೆ "ಸಂಶೋಧನ ಕಮ್ಮಟ" :ದಿನಾಂಕ 11, 12 ಮತ್ತು 13ನೇ ಮಾರ್ಚ್ 2006ರಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ (ರಿ). ಬೆಂಗಳೂರು ಇಲ್ಲಿ ಹಂಪಿ ಕನ್ನಡ ವಿಶ್ವ ವಿದ್ಯಾನಿಲಯದ ವತಿಯಿಂದ ಪಿಹೆಚ್.ಡಿ. ವಿದ್ಯಾರ್ಥಿಗಳಿಗೆ "ಸಂಶೋಧನ ಕಮ್ಮಟ" ನಡೆಯಿತು.

## ಸಂಶೋಧನ ಕಮ್ಮಟದ ವರದಿ

ಸಂಶೋಧನ ಕಮ್ಮಟದ ಚಟುವಟಿಕೆಗಳು ದಿನಾಂಕ 11.03.2006ರಂದು ವಿದ್ಯಾರ್ಥಿಗಳ ನೋಂದಣಿಯೊಂದಿಗೆ ಆರಂಭವಾಯಿತು. ಕನ್ನಡ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಷ್ಟೇ ಅಲ್ಲದೆ ಅನ್ಯ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೂ ನೋಂದಣಿಗೆ ಅವಕಾಶ ನೀಡಿದ್ದು ವಿಶೇಷವಾಗಿತ್ತು. ಕಮ್ಮಟದ ಉದ್ಘಾಟನೆಯನ್ನು ಪ್ರೊ॥ ಎನ್. ಬಸವಾರಾಧ್ಯ, ಡಾ॥ ಎಸ್. ನಾಗರಾಜ್ ಮತ್ತು ಕನ್ನಡ ವಿಶ್ವವಿದ್ಯಾನಿಲಯ ಪ್ರಸಾರಾಗಂದ ನಿರ್ದೇಶಕರಾದ ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶರವರು ನೆರವೇರಿಸಿದರು. ಮುಖ್ಯ ಅತಿಥಿಗಳಾದ ಡಾ॥ ಎಸ್. ನಾಗರಾಜ್‌ರವರು 'ಸಂಶೋಧನೆ' ಎಂಬುದರ ಅರ್ಥವನ್ನು ವಿಸ್ತೃತವಾಗಿ ವಿವರಿಸಿ ವ್ಯವಸ್ಥಾ ಸಿದ್ಧಾಂತವನ್ನು ಕುರಿತಂತೆ ಸಾಕಷ್ಟು ಉಪಯುಕ್ತ ಮಾಹಿತಿಗಳನ್ನು ನೀಡಿದರು. ಮತ್ತೊಬ್ಬ ಅತಿಥಿಗಳಾದ ಪ್ರೊ॥ ಮಲ್ಲೇಪುರಂ ಜಿ.ವೆಂಕಟೇಶ್ ರವರು ಕನ್ನಡ ವಿಶ್ವವಿದ್ಯಾನಿಲಯದ ಧ್ಯೇಯೋದ್ದೇಶಗಳನ್ನು ವಿವರಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಹಿರಿಯ ವಿದ್ವಾಂಸರೂ ಹಾಗೂ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಬಿ.ಎಂ.ಶ್ರೀ ಪ್ರತಿಷ್ಠಾನದ ಮಾಜಿ ಅಧ್ಯಕ್ಷರೂ ಆದ ಪ್ರೊ॥ ಎನ್. ಬಸವಾರಾಧ್ಯ ವಹಿಸಿದ್ದರು.

ಈ ದಿನದ ಮೊದಲನೆಯ ಗೋಷ್ಠಿಯನ್ನು ಕನ್ನಡ ವಿಶ್ವವಿದ್ಯಾನಿಲಯದ ಪುರಂದರ ಪೀಠದ ಸಂಚಾಲಕರೂ, ಹಸ್ತಪ್ರತಿ ವಿಭಾಗದ ಮುಖ್ಯಸ್ಥರೂ ಆದ ಪ್ರೊ॥ ಎ.ವಿ. ನಾವಡರವರು ನಡೆಸಿಕೊಟ್ಟರು. ಉಪನ್ಯಾಸದ ವಿಷಯವು 'ಅಧ್ಯಯನದ ವಿಧಿವಿಧಾನಗಳು ಮತ್ತು ಆಕರಗಳ ಬಳಕೆ' ಎಂಬುದಾಗಿದ್ದು, ಉಪನ್ಯಾಸಕರು

ಮಹಾಪ್ರಬಂಧಧ ಸ್ವರೂಪ ಮತ್ತು ವಿಶೇಷವಾಗಿ ಮೌಖಿಕ ಆಕರಗಳ ಬಗೆಗೆ ಮಾಹಿತಿಯನ್ನು ನೀಡಿದರು.

ಮಧ್ಯಾಹ್ನದ ಗೋಷ್ಠಿಯಲ್ಲಿ "ಸಂಶೋಧನೆಯ ತಾಂತ್ರಿಕ ಅಂಶಗಳು" ಎಂಬ ವಿಷಯದ ಬಗ್ಗೆ ಬೆಂಗಳೂರು ವಿಶ್ವವಿದ್ಯಾನಿಲಯದ ನಿವೃತ್ತ ಪ್ರಾಧ್ಯಾಪಕರಾದ ಡಾ॥ ಕೆ.ಪಿ. ಭಟ್ ರವರು ಮಾರ್ಗದರ್ಶನ ನೀಡಿದರು. ವಿಶೇಷವಾಗಿ ಈ ಉಪನ್ಯಾಸದಲ್ಲಿ ಮಹಾಪ್ರಬಂಧದ ಭಾಷೆಯ ಬಗ್ಗೆ ವ್ಯಾಪಕವಾಗಿ ಚರ್ಚೆ ನಡೆಯಿತು.

ಸಂಜೆ ನಡೆದ ಕಾರ್ಯಕ್ರಮದಲ್ಲಿ ಡಾ॥ ಪಿ.ವಿ. ನಾರಾಯಣರವು ಭಾಷಾವಿಜ್ಞಾನ ಶಿಬಿರಾರ್ಥಿಗಳಿಗೆ ಅರ್ಹತಾ ಪತ್ರಗಳನ್ನು ವಿತರಿಸಿದರು.

ಮಾರನೆಯ ದಿನದ ಅಂದರೆ ದಿನಾಂಕ 12.03.2006 ರ ಕಾರ್ಯಕ್ರಮವು ಮೊದಲಿಗೆ ಪ್ರೊ॥ ಮಲ್ಲೆಪುರಂ ಜಿ.ವೆಂಕಟೇಶ್ ನಡೆಸಿಕೊಟ್ಟ ಉಪನ್ಯಾಸದೊಂದಿಗೆ ಆರಂಭವಾಯಿತು. ಉಪನ್ಯಾಸದ ವಿಷಯವು 'ಸಮಾಜ ವಿಜ್ಞಾನಗಳ ಸಂಶೋಧನೆಯ ಈಚಿನ ಒಲವುಗಳು' ಎಂಬುದಾಗಿತ್ತು. ಆಕರ ಸಂಕಲನ ಘಟ್ಟದಿಂದ ಈಗ ಸಂಶೋಧನೆಯು ಅಧ್ಯಯನದತ್ತ ಹೊರಳಿರುವುದನ್ನು, ಆಕರಗಳ ಮರುಪರಿಶೀಲನೆಯ ಅಗತ್ಯತೆಯನ್ನು ಮತ್ತು ಸಂಶೋಧನೆಗಳು ಆಂತರ್ಶಿಸ್ತೀಯವಾಗಿರಬೇಕಾದ ಅನಿವಾರ್ಯತೆಯನ್ನು ಸೊಗಸಾಗಿ ಉಪನ್ಯಾಸಕರು ನಿರೂಪಿಸಿದರು. ಅಧ್ಯಕ್ಷತೆ ವಹಿಸಿದ್ದ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಯವರು ಸಂಶೋಧನೆ ಅಧ್ಯಯನಗಳು ಸಮಾಜಮುಖಿಯಾಗಿರಬೇಕು. ಹಾಗೂ ಸಂಶೋಧಕರಿಗೆ ಬಹುಭಾಷಾಜ್ಞಾನ ಮತ್ತು ಬಹುವಿಷಯ ಜ್ಞಾನವಿದ್ದರೆ ಸಂಶೋಧನೆಯು ಅರ್ಥಪೂರ್ಣವಾಗಿರುತ್ತದೆ ಎಂದು ಅಭಿಪ್ರಾಯಪಟ್ಟರು.

ಅದೇ ದಿನ ಮಧ್ಯಾಹ್ನ ಹೊಸ ವಿದ್ಯಾರ್ಥಿಗಳ ಪ್ರಬಂಧಗಳ ಚರ್ಚೆಯನ್ನು ಹಿರಿಯ ವಿದ್ವಾಂಸರು ಮತ್ತು ಸಂಶೋಧಕರ ಸಮ್ಮುಖದಲ್ಲಿ ಏರ್ಪಡಿಸಲಾಗಿತ್ತು. ಅಧ್ಯಕ್ಷತೆಯನ್ನು ಪ್ರೊ॥ ಕ.ವೆಂ. ರಾಜಗೋಪಾಲರವರು ವಹಿಸಿದ್ದರು. ತಾತ್ಕಾಲಿಕ ನೋಂದಣಿ ಮಾಡಿಸಿದ್ದ ಈ ಸಾಲಿನ ಮೂರು ಜನ ವಿದ್ಯಾರ್ಥಿಗಳಾ ಕೆ.ವಿ. ಅನಂತ ಪದ್ಮನಾಭ (ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯ) ಶ್ರೀಮತಿ ಲಕ್ಷ್ಮಿ (ನಾಗಬ್ರಹ್ಮ ಮತ್ತು ಕಂಬಳ) ಮತ್ತು ವಸಂತಕುಮಾರ್ (ರಂಗನಾಥಸ್ವಾಮಿ ಕ್ಷೇತ್ರಗಳ ಅಧ್ಯಯನ) ರವರ ಪ್ರಬಂಧಗಳ ಬಗ್ಗೆ ಸಾಕಷ್ಟು ಚರ್ಚೆ ನಡೆಯಿತು. ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಯವರು ಮತ್ತು ಉಪಸ್ಥಿತರಿದ್ದ ಎಲ್ಲ ಹಿರಿಯ ವಿದ್ವಾಂಸರು ಮೂರು ಜನ ವಿದ್ಯಾರ್ಥಿಗಳಿಗೆ ಹಲವಾರು ಉಪಯುಕ್ತ ಸಲಹೆಗಳನ್ನು ನೀಡಿ ಸಂಶೋಧನಾ ಮಾರ್ಗದಲ್ಲಿ ಮುನ್ನಡೆಯಲು ತುಂಬು ಹೃದಯದ ಪ್ರೋತ್ಸಾಹ ನೀಡಿದರು.

ಅದೇ ದಿನ ಸಂಜೆ ಎಂ.ವಿ.ಸೀ. ಸಂಸ್ಮರಣೆ ಸಿರಿಸಂಗೀತ ಮತ್ತು 15ನೇ ತಂಡದ ಹಸ್ತಪ್ರತಿಶಾಸ್ತ್ರ ತರಗತಿಯ ಸಮಾರೋಪ ಸಮಾರಂಭ ಏರ್ಪಟ್ಟಿದ್ದು ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಯವರು ಅಧ್ಯಕ್ಷತೆ ವಹಿಸಿದ್ದರು ಮುಖ್ಯ ಅತಿಥಿಗಳಾದ ಲಿಪಿಶಾಸ್ತ್ರದ ಉಪನ್ಯಾಸಕರಾದ ಡಾ॥ ಪಿ.ವಿ. ಕೃಷ್ಣಮೂರ್ತಿಯವರು ಹಸ್ತಪ್ರತಿ ಅಧ್ಯಯನದಲ್ಲಿ ಲಿಪಿಜ್ಞಾನದ ಅವಶ್ಯಕತೆಯನ್ನು ಒತ್ತಿ ಹೇಳಿದರು. ತರಗತಿಯ ವಿದ್ಯಾರ್ಥಿಗಳಾದ ಕೆ. ವಿ.ಅನಂತಪದ್ಮನಾಭ ಎಸ್. ನಂಜುಂಡಸ್ವಾಮಿ ಮತ್ತು ಕುಮಾರಿ ಕವಿತಾ ಮುಂತಾದವರು ತಮ್ಮ ಅನಿಸಿಕೆಗಳನ್ನು ವಕ್ತಪಡಿಸಿದರು.

13.03.2006 ಪೂರ್ವಾಹ್ನ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಯವರು ಅಧ್ಯಕ್ಷತೆಯಲ್ಲಿ ಹಿಂದಿನ ತಂಡದ ಮತ್ತು ಇತರ ಸಂಶೋಧನ ವಿದ್ಯಾರ್ಥಿಗಳ ಪ್ರಬಂಧಗಳ ಬಗೆಗೆ ಚರ್ಚೆ ಏರ್ಪಟ್ಟಿತ್ತು ಈ ಗೋಷ್ಠಿಯಲ್ಲೂ ವಿದ್ವಾಂಸರಿಂದ ಮತ್ತು ಮಾರ್ಗದರ್ಶಕರಿಂದ ಹಲವಾರು ಉಪಯುಕ್ತ ಸಲಹೆ ಸೂಚನಗಳು ವ್ಯಕ್ತವಾದವು.

ಅದೇ ದಿನ ಮಧ್ಯಾಹ್ನ ಸಂಶೋಧನ ಕಮ್ಮಟದ ಸಮಾರೋಪ ಸಮಾರಂಭವು ಏರ್ಪಟ್ಟಿತ್ತು. ಸಮಾರೋಪ ಭಾಷಣವನ್ನು ಮಾಡಿದ ಪ್ರೊ॥ ಮಲ್ಲೆಪುರಂ ಜಿ. ವೆಂಕಟೇಶ್ ಮತ್ತು ಪ್ರಮಾಣಪತ್ರ ವಿತರಣೆ ಮಾಡಿದ ಬೆಂಗಳೂರು ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾದ ಡಾ॥ ಬಸವರಾಜ ಕಲ್ಗುಡಿಯವರು ಸತ್ವಹೀನವಾದ ಪಿ.ಎಚ್.ಡಿ. ಪ್ರಬಂಧಗಳು ಹೊರಬರುತ್ತಿರುವ ಈ ಸಂದರ್ಭದಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಹೊಸಪೀಳಿಗೆಯ ಸಂಶೋಧಕರು ಸತ್ವಪೂರ್ಣವಾದ ಮತ್ತು ಉತ್ತಮವಾದ ಪ್ರಬಂಧಗಳನ್ನು ಸಮಾಜಕ್ಕೆ ನೀಡುವಂತೆ ಕರೆಯಿತ್ತರು. ಪೂರ್ವಸೂರಿಗಳ ಅಧ್ಯಯನದ ಶಿಸ್ತನ್ನು ಮೈಗೂಡಿಸಿಕೊಂಡು ಮೌಲಿಕವಾದ ಪ್ರಬಂಧಗಳನ್ನು ರಚಿಸುವತ್ತ ಅಧ್ಯಕ್ಷತೆ ವಹಿಸಿದ್ದ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಯವರು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿದರು.

ಈ ಮೂರು ದಿನದ ಕಮ್ಮಟವನ್ನು ಸುವ್ಯವಸ್ಥಿತವಾಗಿ ಕಮ್ಮಟದ ನಿರ್ದೇಶಕರೂ ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ ನಿರ್ದೇಶಕರೂ ಉತ್ಸಾಹಿ ಸಂಶೋಧಕರೂ ಆದ ಪ್ರೊ.ನಾ.ಗೀತಾಚಾರ್ಯರು ಆಯೋಜಿಸಿದ್ದರು. ಅವರು ಜೊತೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಸಿಬ್ಬಂದಿವರ್ಗ ಶ್ರಮವಹಿಸಿ ಕಾರ್ಯನಿರ್ವಹಿಸಿ, ಕಮ್ಮಟ ಯಶಸ್ವಿಯಾಗಲು ಕಾರಣರಾದರು. ಸಂಶೋಧನ ಕ್ಷೇತ್ರಕ್ಕೆ ಕಾಲಿಡುತ್ತಿರುವ ನನ್ನಂತಹ ಹಲವಾರು ಜನ ವಿದ್ಯಾರ್ಥಿಗಳಿಗೆ ಇದು ನಿಜವಾದ ಅರ್ಥದಲ್ಲಿ ಸಂಶೋಧನೆಯ ಬಗ್ಗೆ ಕುತೂಹಲ-ಆಸಕ್ತಿ-ಕ್ರಿಯಾಶೀಲತೆಯನ್ನು ಮೈಗೂಡಿಸಿಕೊಂಡು ಸಂಶೋದನೆಯ ದಾರಿಯಲ್ಲಿ ಮುಂದುವರೆಯಲು ಪ್ರೇರೇಪಣೆ ನೀಡಿತು

**(ವರದಿ-ಅನಂತಪದ್ಮನಾಭ,** ಪಿಹೆಚ್.ಡಿ. ವಿದ್ಯಾರ್ಥಿ)

## ಈ) ಶ್ರದ್ಧಾಂಜಲಿ ಕಾರ್ಯಕ್ರಮಗಳು

1) **ಎನ್.ಎಸ್. ರಾಮಸ್ವಾಮಿ ಅಯ್ಯರ್ ಸ್ಮರಣೆ ಮತ್ತು ಗಮಕ ನಮನ** : ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಸ್ಥಾಪನೆಯ ಕಾಲದಿಂದಲೂ ಕಾರ್ಯಕರ್ತರಾಗಿ ಕೋಶಾಧಿಕಾರಿಗಳಾಗಿ ಹಸ್ತಪ್ರತಿ ತಜ್ಞರಾಗಿ ಸೇವೆಸಲ್ಲಿಸುತ್ತಿದ್ದ ದಿವಂಗತರು 20.06.2005 ರಂದು ನಿಧನರಾದುದಕ್ಕಾಗಿ ಗೌರವ ಸೂಚಿಸಲು 9.7.2005ರಂದು ಈ ಕಾರ್ಯಕ್ರಮ ನಡೆಯಿತು. ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆ ವಹಿಸಿದ್ದರು. ಹಿರಿಯ ವಿದ್ವಾಂಸರೂ ದಿವಂಗತರ ಗುರುಗಳೂ ಆಗಿದ್ದ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ಹಾಗೂ ಶಿಷ್ಯರಾಗಿದ್ದ ಶ್ರೀ ಮೋಹನ್‌ದಾಸ್ ದಾವಸ್ಕರ್, ಗಮಕ ಕಲಾಪರಿಷತ್ತಿನ ಅಧ್ಯಕ್ಷರೂ, ಸ್ನೇಹಿತರೂ ಆಗಿದ್ದ ಶ್ರೀ ವೆಂಕಟಾದ್ರಿ ಶರ್ಮ ಅವರುಗಳು ಸತ್ಯ, ನಿಷ್ಠೆ, ಪ್ರಾಮಾಣಿಕತೆ, ಸೇವಾಪರತೆಯ ಕೊಂಡಿಯಾಗಿದ್ದ ಎನ್.ಎಸ್. ರಾಮಸ್ವಾಮಿ ಅಯ್ಯರ್ ಅವರನ್ನು ಕುರಿತು ಮಾತನಾಡಿದರು. ಗಮಕಿಗಳೂ ಆಗಿದ್ದ ಎನ್.ಎಸ್. ರಾಮಸ್ವಾಮಿ ಅಯ್ಯರ್ ಗೌರವಾರ್ಥ 'ಗಮಕ ನಮನ'ದಲ್ಲಿ ಗಮಕಿ ಶ್ರೀ ಜಿ.ಬಿ. ಗೋಪಿನಾಥರಾವ್ ಅವರು ಕುಮಾರವ್ಯಾಸ ಭಾರತದಿಂದ ಆಯ್ದುಪದ್ಯಗಳ ಕಾವ್ಯವಾಚನ ನಡೆಸಿಕೊಟ್ಟರು.

2) **ಅಗಲಿದ ಸಾಹಿತಿಗಳ ಸ್ಮರಣೆ** : ದಿನಾಂಕ 10.9.2005 ರಂದು ಅತ್ತಿಮಬ್ಬೆ ಪ್ರತಿಷ್ಠಾನ ಮತ್ತು ಕರ್ನಾಟಕ ಲೇಖಕರ ಸಂಘ ಇವುಗಳ ಸಹಯೋಗದಲ್ಲಿ ಈಚೆಗೆ ಅಗಲಿದ ಖ್ಯಾತನಾಟಕಕಾರ ಕೆ.ವಿ. ಸುಬ್ಬಣ್ಣ, ಖ್ಯಾತ ಲೇಖಕಿ ಹಾಗೂ ಪ್ರತಿಷ್ಠಾನದ ಗೌರವ ಸದಸ್ಯರಾದ ಶಾಂತಾದೇವಿ ಮಾಳಾವಾಡ, ಹಿರಿಯ ವಿದ್ವಾಂಸರೂ ಲೋಚನ ಸಂಪಾದಕರೂ ಆಗಿದ್ದ ಪ್ರೊ॥ಟಿ.ಕೇಶವಭಟ್ಟ, ಸಾಹಿತಿ ಆಳವಂದಾರ್ ಗೋಪಾಲಾಚಾರ್ ಬಗ್ಗೆ 'ಸ್ಮರಣೆ' ಕಾರ್ಯಕ್ರಮ ನಡೆಯಿತು. ಶ್ರೀ ಜಿ. ನಾರಾಯಣ, ಶ್ರೀ ಎನ್. ಬಸವಾರಾಧ್ಯ, ಡಾ॥ ವರದಾ ಶ್ರೀನಿವಾಸ್, ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರುಗಳು ದಿವಂಗತರ ಸಾಧನೆ-ಸೇವೆಗಳನ್ನು ಸ್ಮರಿಸಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅಧ್ಯಕ್ಷತೆ ವಹಿಸಿದ್ದರು.

## ಉ) 'ಸಿರಿಕಂಟ' ಮತ್ತು 'ಸಿರಿಸಂಗೀತ' ಕಾರ್ಯಕ್ರಮಗಳು

1) ದಿನಾಂಕ 9.9.2005 ರಂದು "ಸಿರಿಸಂಗೀತ" ಕಾರ್ಯಕ್ರಮದ ಅಂಗವಾಗಿ ಕನ್ನಡ ಭಾವಗೀತೆಗಳ ಸುಗಮಸಂಗೀತ ಕಾರ್ಯಕ್ರಮವು ಶ್ರೀಮತಿ ಜಯಾಪಾರ್ಥಸಾರಥಿ, ರಮಾದೇವಿ ವಿಶ್ವೇಶ್ವರಯ್ಯ ಮತ್ತು ಸಂಗಡಿಗರಿಂದ ನಡೆಯಿತು.

2) ದಿನಾಂಕ 14.11.2005 ರಂದು 'ಸಿರಿಕಂಟ'ದ ವತಿಯಿಂದ ನಡೆದ ಹಸ್ತಪ್ರತಿಶಾಸ್ತ್ರ ತರಗತಿಯ 14ನೇ ತಂಡಕ್ಕೆ ಅರ್ಹತಾ ಪತ್ರ ವಿತರಣೆ ಮತ್ತು 15ನೇ ತಂಡದ ತರಗತಿ ಉದ್ಘಾಟನೆ ಕಾರ್ಯಕ್ರಮದಲ್ಲಿ ರಮಾದೇವಿ ವಿಶ್ವೇಶ್ವರಯ್ಯ ತಂಡದವರಿಂದ ಸುಗಮಸಂಗೀತದಲ್ಲಿ ಭಾವಗೀತೆಗಳ ಕಾರ್ಯಕ್ರಮ ನಡೆಯಿತು.

3) ದಿನಾಂಕ 10.12.2005 ರಂದು ಸಿರಿಸಂಗೀತ ಅಂಗವಾಗಿ ಶ್ರೀಮತಿ ಅಂಬುಜ ಹಾಗೂ ಶ್ರೀ ನಾಗರಾಜ್ ಮತ್ತು ಸಂಗಡಿಗರಿಂದ ಹರಿದಾಸರ ಕೀರ್ತನೆಗಳ ಹಾಡುಗಾರಿಕೆ ಕಾರ್ಯಕ್ರಮ ನಡೆಯಿತು.

4) **ಸುಗಮ ಸಂಗೀತ ಸ್ಪರ್ಧೆ ಕಾರ್ಯಕ್ರಮ** : ಬಿ.ಎಂ.ಶ್ರೀ ಮತ್ತು ಪಿ.ಕಾಳಿಂಗರಾವ್ ಸ್ಮಾರಕ ಅಖಿಲ ಕರ್ನಾಟಕ ಸುಗಮ ಸಂಗೀತ ಸ್ಪರ್ಧೆ ದಿನಾಂಕ 29.01.06 ರಂದು ಪಿ.ಕಾಳಿಂಗರಾವ್ ಬಳಗದ ಸಹಯೋಗದಲ್ಲಿ ಜಯಾ ಪಾರ್ಥಸಾರಥಿ ದಂಪತಿಗಳ ಸಹಕಾರದಿಂದ ನಡೆಯಿತು. ಶ್ರೀಮತಿ ನಾರಾಯಣಮ್ಮ ಅವರು ಉದ್ಘಾಟನೆ ಮಾಡಿದ ಈ ಸ್ಪರ್ಧೆಯಲ್ಲಿ 45 ಸ್ಪರ್ಧಿಗಳು ಭಾಗವಹಿಸಿ ಭಾವಗೀತೆ ಮತ್ತು ಜನಪದಗೀತೆಗಳಲ್ಲಿ ಹಿರಿಯರ ಮತ್ತು ಕಿರಿಯರ ವಿಭಾಗದಲ್ಲಿ ತಲಾ ಮೂರು ಬಹುಮಾನಗಳನ್ನು ಪಡೆದರು. ಸಂಜೆ ಲೇಖಕಿ ಶ್ರೀಮತಿ. ಬಿ. ನಾರಾಯಣಮ್ಮ ಅವರಿಂದ ಬಹುಮಾನ ವಿತರಣೆ ಕಾರ್ಯಕ್ರಮ ನಡೆಯಿತು. ತೀರ್ಪುಗಾರರಾಗಿ ಶ್ರೀ ನಾರಾಯಣರಾವ್ ಮಾನೆ ಮತ್ತು ಶ್ರೀ ಪುರಂದರ ಭರಣಿ ಅವರುಗಳು ಸಹಕರಿಸಿದ್ದರು.

ಜನವರಿ 3 ರಂದು ಜಯಾಪಾರ್ಥಸಾರಥಿ ಮತ್ತು ರಮಾದೇವಿ ವಿಶ್ವೇಶ್ವರಯ್ಯ ಅವರಿಂದ ಭಾವಗೀತೆಗಳ ಗಾಯನ ಕಾರ್ಯಕ್ರಮ ನಡೆಯಿತು.

5) ದಿನಾಂಕ 25.02.06 ರಂದು ಶ್ರೀ.ಕೆ.ವಿ. ಕೃಷ್ಣಪ್ರಸಾದ ಮತ್ತು ತಂಡದವರಿಂದ ಸಿರಿಸಂಗೀತ ತಿಂಗಳ ಸಂಗೀತ ಕಾರ್ಯಕ್ರಮದ ಅಂಗವಾಗಿ 'ವಚನಗಾಯನ' ಕಾರ್ಯಕ್ರಮ ನಡೆಯಿತು.

6) ದಿನಾಂಕ 12.03.06 ರಂದು ಶ್ರೀ ನಾರಾಯಣರಾವ್ ಮಾನೆಯವರಿಂದ ಸಿರಿಸಂಗೀತ ಕಾರ್ಯಕ್ರಮದಲ್ಲಿ 'ಜಾನಪದ ಗೀತೆಗಳ' 'ಗಾಯನ ಕಾರ್ಯಕ್ರಮ ನಡೆಯಿತು.

7) ದಿನಾಂಕ 01.05.06 ರಂದು ಶ್ರೀಮತಿ ಶಾರದಾ ರಾಮನಾಥ್ ಮತ್ತು ಶ್ರೀಮತಿ ಶ್ಯಾಮಲಾ ಜನಾರ್ಧನ ಅವರಿಂದ 'ಕೀರ್ತನೆಗಳ ಹಾಡುಗಾರಿಕೆ' ಕಾರ್ಯಕ್ರಮ ನಡೆಯಿತು.

8) ದಿನಾಂಕ 17.06.06ರಂದು ನುಡಿಬಳಗದ ಮೂಲಕ ಶ್ರೀ ವೈ.ಎಂ.ಎನ್. ಮೂರ್ತಿ ಅವರಿಂದ ನಿತ್ಯಜೀವನದಲ್ಲಿ ಹಾಸ್ಯ ಕಾರ್ಯಕ್ರಮ ನಡೆಯಿತು.

## ಊ) ಸುವರ್ಣ ಕರ್ನಾಟಕ ಕಾರ್ಯಕ್ರಮಗಳು

1) ದಿನಾಂಕ 03.01.06 ರಂದು ಸುವರ್ಣ ಕರ್ನಾಟಕದ ವಿಶೇಷ ಯೋಜನೆಯ ಅಂಗವಾಗಿ ನಾಡು ನುಡಿ ಚಿಂತನೆ ಕುರಿತ **'ಸುವರ್ಣ ಕರ್ನಾಟಕ ಚಿಂತನ ಮಾಲೆ'** ಯನ್ನು ಪ್ರತಿಷ್ಠಾನ ಆರಂಭಿಸಿದ್ದು ಮೊದಲಿಗೆ **'ಸುವರ್ಣ ಕರ್ನಾಟಕ ಸಾರ್ಥಕತೆ ಹೇಗೆ?**

**ಚಿಂತನ ಗೋಷ್ಠಿ'** ನಡೆಸಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಖ್ಯಾತ ಚಿಂತಕರಾದ ಪ್ರೊ॥ ಬರಗೂರು ರಾಮಚಂದ್ರಪ್ಪ ಅವರು ನಡೆಸಿಕೊಟ್ಟರು. ಮುಖ್ಯ ಅತಿಥಿಗಳಾಗಿ ಬಸವನಗುಡಿ ಕ್ಷೇತ್ರದ ಶಾಸಕರಾದ ಶ್ರೀ.ಕೆ. ಚಂದ್ರಶೇಖರ್, ಪಾಲಿಕೆ ಸದಸ್ಯರು ಶ್ರೀ.ಬಿ.ಎಸ್. ಸತ್ಯನಾರಾಯಣ ಮತ್ತು ಸಾಹಿತಿ ಡಾ॥ ಪಿ.ವಿ. ನಾರಾಯಣ ಭಾಗವಹಿಸಿದ್ದರು. ವಿಷಯ ಮಂಡನೆಯನ್ನು ಪ್ರೊ॥ ನಾ.ಗೀತಾಚಾರ್ಯ ಅವರು ಮಾಡಿದರು. ಗೌರವಾಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ಅಧ್ಯಕ್ಷತೆ ವಹಿಸಿದ್ದರು.

2) 25.02.06ರಂದು ಸುವರ್ಣಕರ್ನಾಟಕ ಕವಿಗೋಷ್ಠಿ ಮತ್ತು ಸಿರಿಸಂಗೀತ ಕಾರ್ಯಕ್ರಮ ನಡೆಯಿತು. ಮಹಾಬಲಮೂರ್ತಿ ಕೊಡ್ಲೆಕೆರೆ ಅವರ ಅಧ್ಯಕ್ಷತೆಯಲ್ಲಿ ಹತ್ತು ಜನ ಕವಿಗಳು ಕವನ ವಾಚನ ಮಾಡಿದರು.

3) ದಿನಾಂಕ 28.02.06 ರಂದು ಎಂ.ವಿ.ಸೀ. ಕನ್ನಡ ದತ್ತಿ ಕಾರ್ಯಕ್ರಮದ ಅಂಗವಾಗಿ ಸುವರ್ಣ ಕರ್ನಾಟಕ ಚಿಂತನಮಾಲೆಯಲ್ಲಿ **'ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ'** ಚಿಂತನಗೋಷ್ಠಿ ಕಾರ್ಯಕ್ರಮ ನಡೆಯಿತು. ಆಶಯ ಭಾಷಣವನ್ನು ಖ್ಯಾತ ಸಂಶೋಧಕರಾದ ಡಾ॥ ಎಂ. ಚಿದಾನಂದಮೂರ್ತಿ ಅವರು ಮಾಡಿದರು. ಮುಖ್ಯ ಅತಿಥಿಗಳಾಗಿ ಭಾಷಾತಜ್ಞ ಡಾ॥ ಕೆ.ಪಿ. ಭಟ್ ಕನ್ನಡ, ತೆಲಗುಭಾಷಾತಜ್ಞ ಡಾ॥ ಆರ್.ವಿ.ಎಸ್. ಸುಂದರಂ ತಮಿಳುತಜ್ಞ ಶ್ರೀ ಎಂ. ಗೋವಿಂದರಾಜು ಮತ್ತು ಸಂಘ ಸಂಸ್ಥೆ ಪ್ರತಿನಿಧಿಯಾಗಿ ಕರ್ನಾಟಕ ರಾಜ್ಯ ಸಾರಿಕೆ ಕನ್ನಡ ಕ್ರಿಯಾ ಸಮಿತಿ ಅಧ್ಯಕ್ಷ ವ.ಚ. ಚನ್ನೇಗೌಡ ಅವರು ಭಾಗವಹಿಸಿದ್ದರು. ಅಧ್ಯಕ್ಷರಾದ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಅಧ್ಯಕ್ಷತೆವಹಿಸಿದ್ದರು.

**4) 'ಕನ್ನಡಕ್ಕೆ ಸಂಪುಟದ ದರ್ಜೆ ಸಚಿವಸ್ಥಾನ' ಚಿಂತನಗೋಷ್ಠಿ :**

25.06.06 ರಂದು ನಯನ ಸಭಾಂಗಣದಲ್ಲಿ ನಡೆದ ಮೇಲ್ಕಂಡ ಚಿಂತನಗೋಷ್ಠಿಯಲ್ಲಿ ವಿಧಾನ ಪರಿಷತ್ ಸದಸ್ಯರಾದ ಡಾ॥ ಚಂದ್ರಶೇಖರ ಕಂಬಾರ, ಡಾ॥ ಎಲ್.ಹನುಮಂತಯ್ಯ, ಸಾಹಿತಿಗಳಾದ ಡಾ॥ ಪಿ.ವಿ.ನಾರಾಯಣ ಅವರು ಭಾಗವಹಿಸಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ॥ ಚಂದ್ರಶೇಖರ್ ಪಾಟೀಲರವರು ಅಧ್ಯಕ್ಷತೆ ವಹಿಸಿದ್ದರು. ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ॥ ನಾ. ಗೀತಾಚಾರ್ಯರವರು ಆಶಯ ಭಾಷಣವನ್ನು ಮಾಡಿದರು. 'ಕನ್ನಡ ಜನಶಕ್ತಿ' ಮತ್ತು 'ಕನ್ನಡ ಗೆಳೆಯರ ಬಳಗ' ಗಳ ಸಹಯೋಗದಲ್ಲಿ ಈ ಕಾರ್ಯಕ್ರಮ ನಡೆಯಿತು. ರಾ.ನಂ. ಚಂದ್ರಶೇಖರ್, ಸಿ.ಕೆ. ರಾಮೇಗೌಡ, ಡಾ॥ ಎಸ್.ವಿ. ಪ್ರಭಾವತಿ ಮುಂತಾದ ಗಣ್ಯರು ಉಪಸ್ಥಿತರಿದ್ದರು. ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಪ್ರಾರ್ಥನೆ ಮತ್ತು ನಿರೂಪಣೆ ಮಾಡಿದರು. ವ್ಯವಸ್ಥಾಪಕ ಕಾರ್ಯದರ್ಶಿಗಳಾದ ಎಸ್.ವಿ. ಶ್ರೀನಿವಾಸರಾವ್ ಸ್ವಾಗತ ಕೋರಿದರು. ಈ ಕಾರ್ಯಕ್ರಮದಲ್ಲಿ ಈ ಕೆಳಕಂಡ ನಿರ್ಣಯವನ್ನು ಅಂಗೀಕರಿಸಿ ಸರ್ಕಾರಕ್ಕೆ

ಕಳುಹಿಸಲಾಯಿತು.

"ಸರ್ಕಾರದ ಆಡಳಿತಮಟ್ಟದಲ್ಲಿ ಕನ್ನಡ ಅನುಷ್ಠಾನ ಆಗಬೇಕಾದರೆ ಕನ್ನಡಕ್ಕೇ ಪ್ರತ್ಯೇಕವಾಗಿ ಒಂದು ಸ್ವತಂತ್ರವಾದ ಸಂಪುಟ ದರ್ಜೆಯ ಸಚಿವ ಸ್ಥಾನಮಾನ ಬೇಕು. ಮತ್ತು ಅದು ಹಣಕಾಸು ಇಲಾಖೆಯಷ್ಟೇ ಬಲಯುತವಾಗಿರಬೇಕು. ಸುವರ್ಣ ಕರ್ನಾಟಕ ವರ್ಷದಲ್ಲಿ ಸರ್ಕಾರ ಈ ಬಗ್ಗೆ ಸೂಕ್ತ ಘೋಷಣೆಯನ್ನು ಮಾಡಬೇಕು ಎಂದು ಈ ಸಭೆ ಒಕ್ಕೊರಲಿನಿಂದ ಹಕ್ಕೊತ್ತಾಯವನ್ನು ಮಂಡಿಸುತ್ತದೆ. ಈ ನಿರ್ಣಯವನ್ನು ಮಾನ್ಯ ಮುಖ್ಯಮಂತ್ರಿಗಳಿಗೆ ಮತ್ತು ಉಪಮುಖ್ಯಮಂತ್ರಿಗಳಿಗೆ ಹಾಗೂ ಎಲ್ಲ ಸಚಿವರಿಗೆ ಕಳುಹಿಸಿ ಸಂಪುಟ ಸಭೆಯಲ್ಲಿ ಈ ಬಗ್ಗೆ ಆದಷ್ಟು ಬೇಗ ಸರ್ಕಾರದ ನಿರ್ಣಯ ಕೈಗೊಳ್ಳಬೇಕೆಂದು ಈ ಸಭೆ ವಿನಂತಿಸುತ್ತದೆ."

## ಋ) ಇತರೆ ಕಾರ್ಯಕ್ರಮಗಳು

**1) ಲ.ನ.ಶಾಸ್ತ್ರೀ ವ್ಯಕ್ತಿ-ಕೃತಿ ಪರಿಚಯ ಮತ್ತು ಸನ್ಮಾನ :** ಕರ್ನಾಟಕ ಸಾಹಿತ್ಯ ಸ್ಪಂದನ, ಮೈಸೂರಿನ ಸಿರಿಗನ್ನಡ ವೇದಿಕೆ ಮತ್ತು ಬಿ.ಎಂ.ಶ್ರೀ ಪ್ರತಿಷ್ಠಾನ ಇವರ ಸಂಯುಕ್ತಾಶ್ರಯದಲ್ಲಿ ದಿನಾಂಕ 28.08.2005ರ ಭಾನುವಾರ ಶ್ರೀ ಲ.ನ. ಶಾಸ್ತ್ರೀ ವ್ಯಕ್ತಿ ಮತ್ತು ಕೃತಿ ಪರಿಚಯ, ಕೃತಿ ಬಿಡುಗಡೆ, ಕವಿ ಗೋಷ್ಠಿ, ಸನ್ಮಾನ ಕಾರ್ಯಕ್ರಮ ನಡೆಯಿತು. ಉದ್ಘಾಟನೆಯನ್ನು ಅಧ್ಯಕ್ಷರಾದ ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಮಾಡಿದರು. ಅಧ್ಯಕ್ಷತೆಯನ್ನು ಶ್ರೀ ಹೆಚ್.ಸಿ. ನಾಗೇಂದ್ರ ರವರು ವಹಿಸಿದ್ದರು. ಕೃತಿಗಳನ್ನು ಡಾ॥ ಎ.ವಿ. ಪ್ರಸನ್ನ ಅವರು ಬಿಡುಗಡೆ ಮಾಡಿದರು. ಕವಿಗೋಷ್ಠಿಯ ಅಧ್ಯಕ್ಷತೆಯನ್ನು ಪ್ರೊ॥ ಡಿ. ಲಿಂಗಯ್ಯ ಅವರು ವಹಿಸಿದ್ದರು. ಶ್ರೀ ಲ.ನ. ಶಾಸ್ತ್ರಿ ಅವರ ವಿವಿಧ ಕೃತಿಗಳನ್ನು ಕುರಿತು ಪ್ರೊ॥ ಜಿ. ಅಶ್ವತ್ಥನಾರಾಯಣ, ನಾ.ಗೀತಾಚಾರ್ಯ, ಶ್ರೀ ಹೆಚ್.ಎಸ್. ಹಿರಿಯಣ್ಣಯ್ಯ, ಡಾ॥ ಹೆಚ್.ಜೆ. ಸತೀಶ್ ಪ್ರಸಾದ್ ಮಾತನಾಡಿದರು. ವೇದಿಕೆಯ ಶ್ರೀ ವೆಂಕಟರಮಣಯ್ಯ ಅವರು ಕಾರ್ಯಕ್ರಮವನ್ನು ವ್ಯವಸ್ಥೆ ಮಾಡಿದ್ದರು.

**2) ಬಸವನಗುಡಿ ವಿಧಾನ ಸಭಾಕ್ಷೇತ್ರದ ರಾಜ್ಯಪ್ರಶಸ್ತಿ ವಿಜೇತರಿಗೆ ಗೌರವ :** ದಿನಾಂಕ 6.11.2005 ರಂದು ನಿವಾರಣ ಸಂಸ್ಥೆಯಿಂದ ಪ್ರತಿಷ್ಠಾನದ ಸಹಯೋಗದೊಂದಿಗೆ 2005ನೇ ಸಾಲಿನ ಸುವರ್ಣ ಕರ್ನಾಟಕ ರಾಜ್ಯ ಪ್ರಶಸ್ತಿ ಪುರಸ್ಕೃತರಾದ ಬಸವನಗುಡಿ ವಿಧಾನಸಭಾ ಕ್ಷೇತ್ರದ ವಿವಿಧ ಗಣ್ಯರನ್ನು ಗೌರವಿಸಲಾಯಿತು. ಸಾಹಿತಿ ಶ್ರೀ ಎಸ್.ವಿ. ಶ್ರೀನಿವಾಸರಾವ್, ಗಮಕಿ ಎಂ.ಆರ್. ಸತ್ಯನಾರಾಯಣ, ಉದಯಭಾನು ಕಲಾ ಸಂಘದ ಪರವಾಗಿ ಗೌ॥ ಕಾರ್ಯದರ್ಶಿ ಶ್ರೀ ಎಂ. ನರಸಿಂಹ, ವೈದ್ಯರಾದ ಡಾ॥ ರಮೇಶ್, ಶ್ರೀ ಮುರಳಿ, ಚಲನಚಿತ್ರ ಕಲಾವಿದರಾದ ಶ್ರೀ ಡಿ.ವಿ. ಸುಧೀಂದ್ರರವರು ಮತ್ತು ಯುವಕ ಸಂಘದ ಶ್ರೀ ವಿ. ಅಣ್ಣಯ್ಯ ಅವರನ್ನು ಗೌರವಿಸಲಾಯಿತು. ಗೌರವಾಧ್ಯಕ್ಷರಾದ

ಶ್ರೀ ಜಿ. ನಾರಾಯಣ ಅವರಿಗೆ ಜಾನಪದ ಪರಿಷತ್ತಿನ ಅಧ್ಯಕ್ಷ ಗೌರವಕ್ಕಾಗಿ ಸನ್ಮಾಸಲಾಯಿತು. ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅಧ್ಯಕ್ಷತೆ ವಹಿಸಿದ್ದರು. ಶಾಸಕರಾದ ಶ್ರೀ ಕೆ. ಚಂದ್ರಶೇಖರ್ ಸ್ವಾಗತ ಕೋರಿದರು, ಪ್ರೊ॥ ನಾ.ಗೀತಾಚಾರ್ಯ ವಂದಿಸಿದರು.

3) 12.12.05ರಂದು **'ಕನ್ನಡ ಕುಲಪುರೋಹಿತ ಆಲೂರು ವೆಂಕಟರಾವ್'** ವಿಷಯದ ಬಗ್ಗೆ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಂಗದ ವತಿಯಿಂದ ಪ್ರೊ॥ ಆರ್.ರಾಚಪ್ಪ ಅವರು ವಿಶೇಷ ಉಪನ್ಯಾಸ ನೀಡಿದರು.

**4) 'ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ' ವಿಶೇಷ ಉಪನ್ಯಾಸ ಕಾರ್ಯಕ್ರಮ:** ದಿನಾಂಕ 14.05.06 ರಂದು ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆಯಿತು. ಪ್ರೊ॥ ನಾ.ಗೀತಾಚಾರ್ಯ ಅವರು ಈ ವಿಶೇಷ ಉಪನ್ಯಾಸ ನೀಡಿದರು. ನಾರಾಯಣಶರ್ಮ ಸಂಸ್ಕೃತಿ ಕೇಂದ್ರವು ಹರಿದಾಸರಾದ ನಾರಾಯಣಶರ್ಮರ ಮತ್ತು ಶ್ರೀ ರಾಮಾನುಜರ ಜಯಂತಿಯ ಅಂಗವಾಗಿ ಈ ಕಾರ್ಯಕ್ರಮವನ್ನು ರೂಪಿಸಿತ್ತು.

## ದಾನಗಳ ವಿವರ

**ಅ) ಪ್ರತಿಷ್ಠಾನಕ್ಕೆ ದಾನ**

| | | |
|---|---|---|
| 1) ರಾಮಚಂದ್ರನ್ ಶಾಸ್ತ್ರಿ, ಬೆಂಗಳೂರು | – | 5,000=00 |
| 2) ಸ್ಟೇಟ್‌ಬ್ಯಾಂಕ್ ಆಫ್ ಮೈಸೂರು ಹನುಮಂತನಗರ ಬ್ರಾಂಚ್, ಬೆಂಗಳೂರು | – | 5,000=00 |
| 3) ಎಂ.ಕೆ. ರವೀಂದ್ರನಾಥ್, ಬೆಂಗಳೂರು | – | 3,000=00 |
| 4) ಕುಮಾರಿ ಅರುಣಕುಮಾರಿ ಎಂ.ಬಿ, ಬೆಂಗಳೂರು | – | 2,000=00 |
| 5) ಎಸ್.ಟಿ. ರಾಧಾಕೃಷ್ಣ, ಬೆಂಗಳೂರು | – | 2,000=00 |
| 6) ಎಂ.ಎಸ್. ಶೇಷಾದ್ರಿನಾಥ್, ಬೆಂಗಳೂರು | – | 2,000=00 |
| 7) ಎಂ.ಎಸ್. ರಾಮಪ್ರಸಾದ, ಬೆಂಗಳೂರು | – | 1,000=00 |
| 8) ಎ.ಜಾನಕಿ, ಬೆಂಗಳೂರು | – | 1,000=00 |
| 9) ಶರತ್, ಬೆಂಗಳೂರು | – | 1,000=00 |
| 10) ವೈ.ಎಂ.ಎನ್.ಮೂರ್ತಿ, ಬೆಂಗಳೂರು | – | 1,000=00 |
| 11) ಎನ್. ರಾಮನಾಥ್, ನುಡಿಬಳಗ, ಬೆಂಗಳೂರು | – | 600=00 |
| 12) ಪ್ರೊ॥ ನಾ.ಗೀತಾಚಾರ್ಯ, ಬೆಂಗಳೂರು | – | 500=00 |
| 13) ಶ್ರೀಮತಿ ಬಿ.ಎ. ಸೌಭಾಗ್ಯ, ಬೆಂಗಳೂರು | – | 500=00 |
| 14) ಡಾ॥ ಪಿ.ವಿ.ಕೃಷ್ಣಮೂರ್ತಿ, ಬೆಂಗಳೂರು | – | 200=00 |

15) ಪ್ರೊ॥ ಅ.ರಾ. ಮಿತ್ರ, ಬೆಂಗಳೂರು - 100=00

**ಆ) ದತ್ತಿದಾನ :**

1) **ಡಾ॥ ಡಿ.ವಿ. ಗುಂಡಪ್ಪ ದತ್ತಿ ನಿಧಿಗಾಗಿ**
ಡಾ॥ ಎಸ್.ಕೆ ಲಕ್ಷಣರಾವ್, ಬೆಂಗಳೂರು - 40,000=00.

1) **ಶಾರದಮ್ಮ ಮತ್ತು ಜಿ.ಹನುಮಯ್ಯ ದತ್ತಿ ನಿಧಿಗಾಗಿ**
ಶ್ರೀಮತಿ ಜಯಮ್ಮ ಕರಿಯಣ್ಣ, ಬೆಂಗಳೂರು - 15,000=00

2) **ರಾಮಚಂದ್ರರಾವ್ ಗಿರಿರಾವ್ ಪಟವಾರಿ ದತ್ತಿ ನಿಧಿಗಾಗಿ**
ಪ್ರೊ॥ ಬಿ.ಆರ್. ಸುರಪುರ, ಗುಲಬರ್ಗ - 5,000=00
(ಒಟ್ಟು 10,000.00)

**ಇ) ಗ್ರಂಥಾಲಯಕ್ಕೆ ದಾನ :**

1) ಶ್ರೀಮತಿ ಕೆ.ಎಸ್. ರಮಾಮಣಿ ಬೆಂಗಳೂರು (ಬೀರು ಕೊಳ್ಳಲು)- 5,000=00
2) ತಿರುಮಲೆ ಶ್ರೀರಂಗಾಚಾರ್, (ರ‍್ಯಾಕ್ ಕೊಳ್ಳಲು) - 2,000=00
3) ಡಿ.ನಂ. ವೆಂಕಟರಮಣಯ್ಯ, ಬೆಂಗಳೂರು - 1,000=00

**ಈ) ಗ್ರಂಥದಾನ :**

1) ಶ್ರೀಮತಿ ಕೆ.ಎಸ್. ರಮಾಮಣಿ, ಬೆಂಗಳೂರು : 564 ಪುಸ್ತಕಗಳು
2) ದಿ॥ ಎನ್.ಎಸ್. ರಾಮಸ್ವಾಮಿ ಅಯ್ಯರ್ ಅವರ ಕುಟುಂಬ; ಬೆಂಗಳೂರು : 356 ಪುಸ್ತಕಗಳು
3) ಶ್ರೀ ಜಿ. ವಿ. ಆನಂದ್, ಬೆಂಗಳೂರು : ದಿ॥ ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯನವರ ಸಂಗ್ರಹ : 290 ಪುಸ್ತಕಗಳು
4) ಶ್ರೀ ಟಿ.ವಿ. ವೆಂಕಟರಮಣಯ್ಯ , ಬೆಂಗಳೂರು : ಅವರ ವಿವಿಧ ಪುಸ್ತಕಗಳ 585 ಪ್ರತಿಗಳು (ಮಾರಾಟ-ವಿತರಣೆಗೆ)
5) ಡಾ॥ ಕೆ.ಪಿ. ಭಟ್, ಬೆಂಗಳೂರು : 1 ಹಳೆಯ ರ‍್ಯಾಕ್ ಮತ್ತು 89 ಪುಸ್ತಕಗಳು
6) ಶ್ರೀ ಕೃಷ್ಣಮೂರ್ತಿ, ಬೆಂಗಳೂರು : 47 ಪುಸ್ತಕಗಳು
7) ದಿವಂಗತ ಎಂ.ಎಸ್. ನರಸಿಂಹಯ್ಯ, ಬೆಂಗಳೂರು : 108 ಗ್ರಂಥಗಳು.
8) ಅಬ್ದುಲ್ ಬಷೀರ್, ಬೆಂಗಳೂರು : 40 ಗ್ರಂಥಗಳು
9) ಡಾ॥ ಜಿ.ಶಕುಂತಲಾಬಾಯಿ, ಬೆಂಗಳೂರು : ಜ್ಞಾನಗಂಗೋತ್ರಿಯ ಏಳು ಸಂಪುಟಗಳು

**ಉ) ಹಸ್ತಪ್ರತಿದಾನ**

1) ಶ್ರೀ ನಾ.ರಾ. ಜ್ಯೋತಿ, ಬೆಂಗಳೂರು : 1 ಓಲೆಗರಿ ಕಟ್ಟು, 1 ಕಾಗದದ ಹಸ್ತಪ್ರತಿ.
2) ಶ್ರೀ.ಹ.ನಾಗರಾಜು, ಬೆಂಗಳೂರು, ಇವರಿಂದ 8 ಕಾಗದದ ಹಸ್ತಪ್ರತಿಗಳು : (1. ಕೃಷ್ಣಾರ್ಜುನಕಾಳಗ, 2. ಶ್ರೀಕೃಷ್ಣನ ಕಥೆ, 3. ಬಭ್ರುವಾಹನಯಕ್ಷಗಾನ, 4. ಮೃಕಂಡು ಮುನಿಯ ಕಥೆ ಮತ್ತು ಕಬೀರದಾಸ ಹರಿಕಥೆ, 5. ಮಾರ್ಕಂಡೇಯನ

ಮುನಿಯನ ಕಥೆ, 6. ಐರಾವತ ನಾಟಕ, 7. ಕನಕಾಂಗಿಯ ಕಥೆ, 8. ನಳದಮಯಂತಿ ನಾಟಕ)

**ಊ) ಉಪಕರಣ ದಾನ**

'ಶ್ರೀಮತಿ ದಾಸರ ಪದ್ಮಾವತಮ್ಮ, ಬೆಂಗಳೂರು : 1 ಟೇಬಲ್, 2 ವೈರ್‌ಚೇರು ಮತ್ತು 1 ಫ್ಯಾನ್

ಈ ಎಲ್ಲಾ ಮಾನ್ಯ ದಾನಿಗಳಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನ ಕೃತಜ್ಞವಾಗಿರುತ್ತದೆ. ಮತ್ತು ನೀಡಿರುವ ದಾನಗಳನ್ನು ಉದ್ದೇಶಿತ ಕಾರ್ಯಗಳಿಗೆ ಪ್ರಾಮಾಣಿಕವಾಗಿ ವಿನಿಯೋಗಿಸಲಾಗುತ್ತದೆ ಎಂದು ಈ ಮೂಲಕ ತಿಳಿಸಲಿಚ್ಛಿಸುತ್ತದೆ.

*****

## 12. ವಸ್ತುಸಂಗ್ರಹ

### ಅ. ಸುವರ್ಣ ಕರ್ನಾಟಕ :

ನವೆಂಬರ್ 1, 2005ರಿಂದ ನವೆಂಬರ್ 1, 2006ರ ವರ್ಷವನ್ನು ಕರ್ನಾಟಕ ಸರ್ಕಾರ 'ಸುವರ್ಣ ಕರ್ನಾಟಕ ವರ್ಷ' ಎಂದು ಘೋಷಿಸಿ, 'ಕರ್ನಾಟಕ ರಾಜ್ಯ' ರಚನೆಯಾದ 50 ವರ್ಷಗಳ ನೆನಪಿಗಾಗಿ ಹಲವಾರು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕೋಟಿ-ಕೋಟಿ ರೂ.ಗಳನ್ನು ವೆಚ್ಚ ಮಾಡುತ್ತಿದೆ. ಅವುಗಳಲ್ಲಿ ಪ್ರಮುಖವಾದದ್ದು ವಿಶ್ವಕನ್ನಡ ಸಮ್ಮೇಳನ, ರಾಜ್ಯಾದ್ಯಂತ ಸಾಂಸ್ಕೃತಿಕ ಕಾರ್ಯಕ್ರಮಗಳು, 100 ಗ್ರಂಥಗಳ ಪ್ರಕಟನೆ ಇತ್ಯಾದಿ. ಇದರೊಂದಿಗೆ, ಸಂಘ-ಸಂಸ್ಥೆಗಳೂ ಅನೇಕ ಯೋಜನೆಗಳನ್ನು ಪ್ರಕಟಿಸುತ್ತಿವೆ. ಸರ್ಕಾರ ಈ ಉದ್ದೇಶಕ್ಕಾಗಿ ಇಡುವ ಮೊತ್ತದಲ್ಲಿ ಎಲ್ಲವನ್ನೂ ಕನ್ನಡ ಸಂಸ್ಕೃತಿ ಇಲಾಖೆಯ ಯೋಜನೆಗಳಿಗೇ ಮೀಸಲಿಡದೆ ಸಮಪಾಲನ್ನಾದರೂ ಸಂಘ-ಸಂಸ್ಥೆಗಳ ಯೋಜನೆಗಳಿಗೂ ವಿಸ್ತರಿಸುವ ಮೂಲಕ ಕಾರ್ಯಕ್ರಮಗಳಲ್ಲಿ ವೈಶಿಷ್ಟ್ಯತೆ-ವೈವಿಧ್ಯತೆಗಳನ್ನು ತರಲು ಪ್ರಯತ್ನಿಸಬೇಕು. ಆಗಲೇ ಸುವರ್ಣ ಕರ್ನಾಟಕದ ಸಂಭ್ರಮ ನಿಜವಾದ ಸಂಭ್ರಮವಾಗುವುದು.

ವಾಸ್ತವವಾಗಿ ಅತ್ಯಂತ ವೈಭವೋಪೇತವಾಗಿ ಸಂಭ್ರಮಗೊಳ್ಳುವ ಸ್ಥಿತಿಯಲ್ಲಿ ಕರ್ನಾಟಕವಿಲ್ಲ. ಶಾಸ್ತ್ರೀಯ ಭಾಷೆಯ ಘೋಷಣೆ, ಆಡಳಿತ ಭಾಷೆಯ ಕಟ್ಟುನಿಟ್ಟಾದ ಅನುಷ್ಠಾನ, ಪ್ರಾಥಮಿಕ ಹಂತದ ಕನ್ನಡ ಮಾಧ್ಯಮಕ್ಕಿರುವ ನ್ಯಾಯಾಲಯದ ತಡೆಯ ತೆರವು, ಮಹಿಷಿವರದಿಯ ಜಾರಿ, ಕನ್ನಡ ಸಂಸ್ಕೃತಿ ಇಲಾಖೆಗೆ ಸಂಪುಟ ದರ್ಜೆಯ ಸಚಿವ ಸ್ಥಾನ ಇತ್ಯಾದಿಗಳನ್ನು ಸರ್ಕಾರ ಪ್ರಮಾಣಿಕವಾಗಿ ನೆರವೇರಿಸಿದರಷ್ಟೇ ಸುವರ್ಣ ಕರ್ನಾಟಕದ ಆಚರಣೆ ಅರ್ಥಪೂರ್ಣವಾಗಬಲ್ಲದು. ಈ ನಿಟ್ಟಿನಲ್ಲಿ ಸರ್ಕಾರ ಪ್ರಯತ್ನಿಸಬೇಕು, ಸಂಘ-ಸಂಸ್ಥೆಗಳೂ ಒತ್ತಾಯಿಸಬೇಕು.

ಬಿ.ಎಂ.ಶ್ರೀ. ಪ್ರತಿಷ್ಠಾನವು ಈ ವಿಶೇಷ ಸಂದರ್ಭಕ್ಕಾಗಿ ಹಲವು ಯೋಜನೆಗಳನ್ನು ರೂಪಿಸಿ ಸಹಾಯಧನಕ್ಕಾಗಿ ಸರ್ಕಾರವನ್ನು ವಿನಂತಿಸಿದೆ. (1) **ಸುವರ್ಣ ಕರ್ನಾಟಕ ಚಿಂತನ ಮಾಲೆ**. ಇದು ತಿಂಗಳಿಗೊಂದು-ಕನ್ನಡಕ್ಕೆ ಆಗಲೇಬೇಕಾದ ನಾಡು-ನುಡಿ ಸಮಸ್ಯೆಗಳತ್ತ ಗಮನ ಸೆಳೆಯುವ-ವಿಶೇಷ ಉಪನ್ಯಾಸ ಮಾಲೆ. (2) **ಶ್ರೀ ಸಮಗ್ರ ಸಾಹಿತ್ಯ** ಸಂಪುಟ ಪ್ರಕಟನೆ (3) ರಾಜ್ಯಾದ್ಯಂತ. **ಬಿ.ಎಂ.ಶ್ರೀ. ಕನ್ನಡ ಜಾಗೃತಿ-ಸಂಸ್ಕೃತಿ ದರ್ಶನ:** ಇದರಲ್ಲಿ ಕರ್ನಾಟಕದ ಹಿರಿಮೆ-ಗರಿಮೆಗಳನ್ನು ತಿಳಿಸುವ, ಬಿ.ಎಂ.ಶ್ರೀ.ಯವರ ಕನ್ನಡ ಜಾಗೃತಿಯನ್ನು ನೆನಪಿಸುವ, ಜ್ವಲಂತ ಸಮಸ್ಯೆಗಳತ್ತ ಜಾಗೃತಿ ಮೂಡಿಸುವ,

ಪ್ರಾಚೀನ ಕಾವ್ಯ-ಸುಗಮ ಸಂಗೀತದ ಸವಿಮೂಡಿಸುವ, ಹಸ್ತಪ್ರತಿಗಳ ಪ್ರದರ್ಶನದ ಮೂಲಕ ನಾಡಿನ ಅಮೂಲ್ಯ ಆಸ್ತಿಯತ್ತ ಆಸಕ್ತಿ ಮೂಡಿಸುವ ವಿಶಿಷ್ಠ ಪ್ರವಾಸ ಕಾರ್ಯಕ್ರಮ. **(4) 19ನೇ ಶತಮಾನದ ಸಾಹಿತ್ಯ ಚರಿತ್ರೆಯ ಸಿದ್ಧತೆ (5) ವಿಶೇಷ ಗ್ರಂಥಗಳ ಪ್ರಕಟನೆ (6) ಕವಿಗೋಷ್ಠಿ, ಕನ್ನಡ ಸಂಸ್ಕೃತಿ-ಸಂಗೀತ ಶಿಬಿರಗಳನ್ನು** ನಡೆಸುವುದು, ಇತ್ಯಾದಿ.

## (ಆ) ಶತಮಾನೋತ್ಸವಗಳು :

(1) **ಡಾ| ಎಂ.ಶಿವರಾಂ** (10-11-1905) : 'ರಾಶಿ' ಎಂದೇ ಪ್ರಸಿದ್ಧರಾಗಿದ್ದ ಎಂ.ಶಿವರಾಂ ಅವರು ಕನ್ನಡ ಸಾಹಿತ್ಯಕ್ಕೆ ನೀಡಿರುವ ಕೊಡುಗೆ ಅಪಾರ. 'ಕೊರವಂಜಿ' ಹಾಸ್ಯಪತ್ರಿಕೆಯ ಮೂಲಕ ಕನ್ನಡದಲ್ಲಿ ಅನೇಕಜನ ಹಾಸ್ಯಸಾಹಿತಿಗಳನ್ನು ಬೆಳೆಸುತ್ತ, ಹಾಸ್ಯಸಾಹಿತಿಗಳಾಗಿಯೇ ಜನಪ್ರಿಯರಾಗಿರುವ ರಾಶಿ ಅವರು ಅತ್ಯುತ್ತಮ ಮನೋವೈಜ್ಞಾನಿಕ ಲೇಖಕರೂ ಹೌದು. ಅವರ ಮನೋನಂದನ, ಮನಮಂಥನ ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಗಳು. 10-11-2005 ರಾಶಿ ಅವರ ನೂರನೇ ಜನ್ಮದಿನ. ಈ ಸಂದರ್ಭದಲ್ಲಿ 'ಕೊರವಂಜಿ'ಯ ಅಪರಾವತಾರವಾಗಿ ಈಗ ಪ್ರಕಟವಾಗುತ್ತಿರುವ 'ಅಪರಂಜಿ' ಪತ್ರಿಕೆಯ ಟ್ರಸ್ಟ್ ಅದೇ ದಿನ ರವೀಂದ್ರ ಕಲಾಕ್ಷೇತ್ರದಲ್ಲಿ 'ರಾಶಿ ಜನ್ಮಶತಮಾನೋತ್ಸ'ವನ್ನು ಆಚರಿಸಿತು. ಬಿಡುಗಡೆಯಾದ 'ರಾಶಿ ರಾಶಿ ನೆನಪು' ಹಾಗೂ ' 'ಅಪರಂಜಿ' ವಿಶೇಷಾಂಕ'ಗಳು ರಾಶಿಯವರ ಸ್ಮರಣೆಯಲ್ಲಿ ಹೊರಬಂದ ವಿಶೇಷ ಕೃತಿಗಳು.

(2) **ಬೆಂಗಳೂರು ಗಾಯನ ಸಮಾಜ** : ಬೆಂಗಳೂರು ಸಾಂಸ್ಕೃತಿಕ ಸಂಸ್ಥೆಗಳಲ್ಲಿ ಪ್ರಮುಖ ಹೆಸರಾಗಿರುವ ಬೆಂಗಳೂರು ಗಾಯನ ಸಮಾಜ (ಕೆ.ಆರ್.ರಸ್ತೆ) ಶತಮಾನೋತ್ಸವವನ್ನು ಆಚರಿಸಿಕೊಳ್ಳುತ್ತಿರುವುದು ವಿಶೇಷವಾಗಿದೆ. ಕಳೆದ ನೂರು ವರ್ಷಗಳ ಹಿಂದೆ ಕೆಲವೇ ಸಂಗೀತಾಸಕ್ತರ ಕನಸಿನ ಕೂಸಾಗಿ ರೂಪಗೊಂಡ ಈ ಸಂಸ್ಥೆ ಇಂದು ಬೃಹತ್ ವೇದಿಕೆಯಾಗಿ ರೂಪುಗೊಂಡು, ಕರ್ನಾಟಕದ ಸಂಗೀತ ಕ್ಷೇತ್ರಕ್ಕೆ ವಿಶಿಷ್ಟವಾದ ಕೊಡುಗೆಯನ್ನು ಸಲ್ಲಿಸಿದೆ. ಅನೇಕ ಜನ ಸಂಗೀತಗಾರರನ್ನು ಬೆಳೆಸಿದೆ. ಇದರ ಈ ಎಲ್ಲ ಕೊಡುಗೆಗಳನ್ನು ದಾಖಲಿಸುವಂತಹ ಹಲವು ಯೋಜನೆಗಳನ್ನು ಹೊಂದಿರುವ ಶತಮಾನೋತ್ಸವ ಸಮಾರಂಭವನ್ನು ಆಗಸ್ಟ್‌ನಲ್ಲಿ ಗಾಯನ ಸಮಾಜದ ಸಭಾಗಂಣದಲ್ಲಿ ನಡೆಸಲಾಯಿತು. ಈ ಸಂದರ್ಭದಲ್ಲಿ ಹಿಂದೂಸ್ಥಾನಿ ಗಾಯನದಲ್ಲಿ ಡಾ| ಗಂಗೂಬಾಯಿ ಹಾನಗಲ್, ಕರ್ನಾಟಕ ಸಂಗೀತದಲ್ಲಿ ಡಾ| ಆರ್.ಕೆ. ಶ್ರೀಕಂಠನ್ ಮತ್ತು ವಾದ್ಯಸಂಗೀತದಲ್ಲಿ ವೆಲ್ಲೂರು ರಾಮಭದ್ರನ್ ಅವರುಗಳಿಗೆ 'ಗಾಯನ ಸಮಾಜದ ಶತಮಾನೋತ್ಸವ ಪುರಸ್ಕಾರ'ವನ್ನು ನೀಡಿ ಗೌರವಿಸಲಾಗಿದೆ. ವರ್ಷವಿಡಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಇದೇ ಸಂದರ್ಭದಲ್ಲಿ ವೀಣೆ ಶೇಷಣ್ಣನವರ

ನೆನಪಿಗಾಗಿ 'ವೀಣೆಯ ಬೆಡಗು' ಎಂಬ ವಿಶೇಷ ಕಾರ್ಯಕ್ರಮವನ್ನೂ ನಡೆಸಿತು.

(3) 2006ರಲ್ಲಿ ಡಾ। ಡಿ.ಎಲ್.ನರಸಿಂಹಾಚಾರ್ (27.10.06) ಡಾ। ರಂ.ಶ್ರೀ. ಮುಗಳಿ (15.7.06) ಪ್ರೊ। ಆ.ನೇ.ಉಪಾಧ್ಯೆ (6.2.06), ಪ್ರೊ। ತೀ.ನಂ.ಶ್ರೀಕಂಠಯ್ಯ (26.11.06) ಪ್ರೊ। ತ.ಸು.ಶಾಮರಾವ್ (12.6.06) ಪ್ರೊ। ಕೆ.ವೆಂಕಟರಾಮಪ್ಪ (28.5.06) ಪ್ರೊ।. ಎಂ. ಮರಿಯಪ್ಪಭಟ್ಟ (1906) ಡಾ। ಎನ್.ಅನಂತರಂಗಾಚಾರ್ (23.5.06) ಪ್ರೋ॥ ಡಿ. ಕೆ. ಭೀಮಸೇನರಾವ್ ಪ್ರೊ॥ ಭೀಮರಾವ್ ಚಿಟಗುಪ್ಪಿ ಮುಂತಾದ ಅನೇಕ ಪ್ರಮುಖ ಕನ್ನಡ ಸಾಹಿತಿ ವಿದ್ವಾಂಸರ ಶತಮಾನೋತ್ಸವಗಳು ಬರುತ್ತದೆ. ಈಗಾಗಲೇ ರಂ.ಶ್ರೀ.ಮುಗಳಿ, ರಾಶಿ, ಡಿ.ಎಲ್.ಎನ್., ತೀ.ನಂ.ಶ್ರೀ. ಅವರ ಶತಮಾನೋತ್ಸವಗಳನ್ನು ಆಚರಿಸುತ್ತಿದ್ದು, ಜಿ. ನಾರಾಯಣರ ಅಧ್ಯಕ್ಷತೆಯಲ್ಲಿ ರಂ.ಶ್ರೀ.ಮುಗಳಿ ಶತಮಾನೋತ್ಸವ ಸಮಿತಿಯೂ ಡಾ। ಎಂ.ಚಿದಾನಂದ ಮೂರ್ತಿಗಳ ಅಧ್ಯಕ್ಷತೆಯಲ್ಲಿ ತೀ.ನಂ.ಶ್ರೀ. ಶತಮಾನೋತ್ಸವ ಸಮಿತಿಯೂ ರಚನೆಯಾಗಿದ್ದು ಹಲವಾರು ಕಾರ್ಯಕ್ರಮಗಳನ್ನು ಯೋಜಿಸಲಾಗಿದೆ. ಬಿ.ಎಂ.ಶ್ರೀ.ಪ್ರತಿಷ್ಠಾನ ಈಗಾಗಲೇ ಡಿ.ಎಲ್.ಎನ್. ಮತ್ತು ರಂ.ಶ್ರೀ.ಮುಗಳಿ ಶತಮಾನೋತ್ಸವ ಕಾರ್ಯಕ್ರಮಗಳನ್ನು ನಡೆಸಿದ್ದು ಉಳಿದವರ ಶತಮಾನೋತ್ಸವ ಕಾರ್ಯಕ್ರಮಗಳನ್ನೂ ಸೂಕ್ತರೀತಿಯಲ್ಲಿ ನಡೆಸಲು ಆಲೋಚಿಸುತ್ತಿದೆ.

### (ಇ) ಪ್ರಾಚೀನ ಹಸ್ತಪ್ರತಿ ಸರ್ವೇಕ್ಷಣೆ :

1) ಕೇಂದ್ರಸರ್ಕಾರದಲ್ಲಿ ಕಳೆದ ಮೂರು ವರ್ಷಗಳ ಹಿಂದೆ ರೂಪಗೊಂಡ 'ರಾಷ್ಟ್ರೀಯ ಹಸ್ತಪ್ರತಿ ಮಿಷನ್'ನ ಮೂಲಕ ಕರ್ನಾಟಕದಲ್ಲಿ ಹಸ್ತಪ್ರತಿ ಸರ್ವೇಕ್ಷಣ ಅಭಿಯಾನವನ್ನು ನವೆಂಬರ್ ತಿಂಗಳಿನಲ್ಲಿ ಒಂದು ವಾರ ಕಾಲ ನಡೆಸಲಾಯಿತು. ಈ ಮೊದಲೇ ಸಂಘಸಂಸ್ಥೆಗಳು, ವಿಶ್ವವಿದ್ಯಾನಿಲಯಗಳು ಮತ್ತು ವ್ಯಕ್ತಿಗಳಲ್ಲಿ ದಾಖಲಾಗಿರುವ ಹಸ್ತಪ್ರತಿಗಳನ್ನೇ ಈ ಸರ್ವೇಕ್ಷಣ ಯೋಜನೆಯಲ್ಲಿ ದಾಖಲಿಸಲಾಯಿತಾದರೂ ಅಲ್ಲಿ ಇಲ್ಲಿ ಅಪರಿಚಿತ ವ್ಯಕ್ತಿಗಳಿಂದಲೂ ಹೊಸ ಹಸ್ತಪ್ರತಿಗಳು ಸಂಗ್ರಹವಾದ ಸುದ್ದಿಗಳು ಪತ್ರಿಕೆಗಳಲ್ಲಿ ಕಾಣಿಸಿಕೊಂಡವು. ಜಿಲ್ಲಾಡಳಿತ, ತಾಲೂಕು ಅಧಿಕಾರಿಗಳು, ಇತ್ಯಾದಿ ಸರ್ಕಾರಿ ಇಲಾಖೆಯ ಸಹಕಾರದೊಂದಿಗೆ ಜಿಲ್ಲೆ-ತಾಲೂಕುಗಳಿಗೆ ಪ್ರತ್ಯೇಕವಾಗಿ ನೇಮಿಸಲ್ಪಟ್ಟಿದ್ದ ಸ್ವಯಂಸೇವಕ ಸರ್ವೇಕ್ಷಕರ ಮೂಲಕ ಈ ಸರ್ವೇಕ್ಷಣ ಅಭಿಯಾನ ಯಾವುದೇ ಹಣಕಾಸಿನ ಕೊರತೆಯಿಲ್ಲದೆ ನಡೆಯಿತಾದರೂ ನಿರೀಕ್ಷಿತ ಮಟ್ಟದಲ್ಲಿ ಈ ಯೋಜನೆ ಯಶಸ್ವಿಯಾಗಲಿಲ್ಲ. ಈ ಕ್ಷೇತ್ರದಲ್ಲಿ ಅನುಭವವಿರುವ ವಿದ್ವಾಂಸರ-ಸಂಸ್ಥೆಗಳ ಅರಿವಿಗೆಬಾರದ ರೀತಿಯಲ್ಲಿ ಈ ಯೋಜನೆ ಆಗಿಹೋದದ್ದು ಕೇವಲ ಸರ್ಕಾರದ ಯೋಜನೆಯ 'ಲೆಕ್ಕ'ಕ್ಕೆ ದಾಖಲಾಯಿತೇ ವಿನಾ ಈ ಕ್ಷೇತ್ರದಲ್ಲಿ ಆಗಬೇಕಾದ ಕಾರ್ಯ ಹಾಗೇಯೇ ಉಳಿಯಿತು.

ಬಿ.ಎಂ.ಶ್ರೀ.ಪ್ರತಿಷ್ಠಾನದ ಹಸ್ತಪ್ರತಿ ವೇದಿಕೆ 'ಸಿರಿಕಂಟ'ದ ಸಂಚಾಲಕರಾದ ಶ್ರೀ ಜಿ.ಎಸ್.ಎಸ್.ರಾವ್ ಅವರು ಈ ಕಾರ್ಯಕ್ಕಾಗಿ ಬೆಂಗಳೂರು ನಗರದ ಸರ್ವೇಕ್ಷಕರಾಗಿ ನೇಮಕವಾಗಿದ್ದರು. ಬೆಂಗಳೂರು ಚಿತ್ರಕಲಾ ಪರಿಷತ್ತಿನ 'ಇಂಟ್ಯಾಕ್'ನ ನಿರ್ದೇಶಕರಾದ ಎಸ್.ಸುಬ್ಬರಾಮನ್ ಈ ಸರ್ವೇಕ್ಷಣ ಯೋಜನೆಯ ರಾಜ್ಯ ಸಂಚಾಲಕರಾಗಿದ್ದರು. 19.11.05ರಂದು ರಾಜ್ಯಪಾಲ ಟಿ.ಎನ್.ಚತುರ್ವೇದಿ ಇದನ್ನು ವಿದ್ಯುಕ್ತವಾಗಿ ಉದ್ಘಾಟಿಸಿದ್ದರು.

(2) **ಹಸ್ತಪ್ರತಿ ಸಂರಕ್ಷಣೆಗೆ ನ್ಯಾನೋ ತಂತ್ರಜ್ಞಾನ** : ನವೆಂಬರ್‌ನಲ್ಲಿ ನಗರದ ನ್ಯಾಷನಲ್ ಕಾಲೇಜು ಮೈದಾನದಲ್ಲಿ ನಡೆದ ಒಂಬತ್ತು ದಿನಗಳ 'ಮಹಾಭಾರತ ಉತ್ಸವ'ವನ್ನು ಉದ್ಘಾಟಿಸಿದ ರಾಷ್ಟ್ರಪತಿ ಎ.ಪಿ.ಜೆ.ಅಬ್ದುಲ್ ಕಲಾಂ ಅವರು ಪ್ರಾಚೀನ ಹಸ್ತಪ್ರತಿಗಳನ್ನು ಸಂರಕ್ಷಿಸಲು ಈಗ ಉನ್ನತ ಸಂಸ್ಥೆಗಳಲ್ಲಿ ಬಳಸುತ್ತಿರುವ ನ್ಯಾನೋತಂತ್ರಜ್ಞಾನವನ್ನು ಅಳವಡಿಸಿಕೊಳ್ಳಬೇಕು ಎಂದು ಕರೆಕೊಟ್ಟರು. ಮಹಾಭಾರತ ಸಂಶೋಧನ ಪ್ರತಿಷ್ಠಾನ ರೂಪಿಸಿದ್ದ ಮಹಾಭಾರತದ ಡಿಜಿಟಲ್ ಸಂಚಾರಿ ಪ್ರಯೋಗಾಲಯವನ್ನು ಉದ್ಘಾಟಿಸಿದ ಸಂದರ್ಭದಲ್ಲಿ ರಾಷ್ಟ್ರಪತಿ ಭವನದ ಗ್ರಂಥಾಲಯಕ್ಕೆ ಅಳವಡಿಸಿರುವ ಈ ವಿನೂತನ ತಂತ್ರಜ್ಞಾನವನ್ನು ಎಲ್ಲರೂ ಅಳವಡಿಸಿಕೊಳ್ಳಬಹುದು ಎನ್ನುತ್ತಾ ನ್ಯಾನೋಪುಡಿಯನ್ನು ಜೀರ್ಣವಾಗಿರುವ ಹಸ್ತಪ್ರತಿಗಳ ಮೇಲೆ ಸಿಂಪಡಿಸಿದರೆ ಫೊಟೊ ಪ್ರಿಟ್‌ಅನ್ನು ಸುಲಭವಾಗಿ ತೆಗೆದು ಹಸ್ತಪ್ರತಿ ಬರಹವನ್ನು ದೃಶ್ಯಮಾಧ್ಯಮಕ್ಕೆ ತರಬಹುದು ಎಂದು ವಿವರಿಸಿದರು.

ಈ ಮಹಾಭಾರತ ಉತ್ಸವದಲ್ಲಿ 'ಮಹಾಭಾರತ ಲಕ್ಷಾಲಂಕಾರಪ್ರತಿ'. ಮಹಾಭಾರತ ಕಥಾಚಿತ್ರಗಳನ್ನೊಳಗೊಂಡ ಬೃಹತ್ ಬಟ್ಟೆಚಿತ್ರವನ್ನು ಪ್ರದರ್ಶಿಸಲಾಗಿತ್ತು. ಈ ಸಮಾರಂಭದಲ್ಲಿ ಕರ್ನಾಟಕದ ಪ್ರಸಿದ್ಧ ಸಂಸ್ಕೃತ ವಿದ್ವಾಂಸರಾದ ಡಾ। ಕೆ.ಟಿ.ಪಾಂಡುರಂಗಿ ಅವರಿಗೆ ಹಾಗೂ ಅನೇಕ ರಾಷ್ಟ್ರಮಟ್ಟದ ವಿದ್ವಾಂಸರಿಗೆ ರಾಷ್ಟ್ರೀಯ ಪ್ರಶಸ್ತಿಗಳನ್ನು ನೀಡಿ ಗೌರವಿಸಲಾಯಿತು. ಇದೊಂದು ಅಪರೂಪದ ಬೃಹತ್ ಕಾರ್ಯಕ್ರಮವಾಗಿತ್ತು.

### (ಈ) ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ :

ಕಳೆದ ವರ್ಷದಿಂದ ಹೋರಾಟಕ್ಕಿಳಿದಿರುವ ಕನ್ನಡಿಗರ ಈ ಬೇಡಿಕೆಯನ್ನು ಕೇಂದ್ರಸರ್ಕಾರ ಇನ್ನು ಈಡೇರಿಸಿಲ್ಲ. ಈ ಸಂಬಂಧದಲ್ಲಿ ರಾಜ್ಯಸರ್ಕಾರವೂ ಪ್ರಾಮಾಣಿಕ ಪ್ರಯತ್ನ ಮಾಡಿಲ್ಲ. ಕೇಂದ್ರ ಸಚಿವರಾದ ಶ್ರೀ ಎಂ.ವಿ.ರಾಜಶೇಖರನ್ ಅವರೊಬ್ಬರನ್ನು ಬಿಟ್ಟರೆ ಬೇರೆ ಯಾರೂ ಗಂಭೀರವಾಗಿ ಈ ಬಗ್ಗೆ ಪ್ರಯತ್ನಿಸುತ್ತಿಲ್ಲ. ಕರ್ನಾಟಕದ ಸಂಸದರೂ ಲೋಕಸಭೆಯಲ್ಲಿ ಧ್ವನಿ ಎತ್ತಿಲ್ಲ. ಈ ಉದ್ದೇಶಕ್ಕಾಗಿಯೇ ನಿಯೋಗ ಒಯ್ಯುವ ಅಂದಿನ ಮುಖ್ಯಮಂತ್ರಿ ಧರ್ಮಸಿಂಗರ ವಾಗ್ದಾನ ಮರೆತೇಹೋಗಿದೆ. ಆದರೂ ಸರ್ಕಾರ ರಚಿಸಿದ್ದ ಸಮಿತಿ –ಡಾ॥ ಎಂ.ಚಿದಾನಂದಮೂರ್ತಿ ಪ್ರೊ॥

ಎಲ್.ಎಸ್.ಶೇಷಗಿರಿರಾವ್ ಡಾ॥ಎನ್.ಎಸ್. ತಾರಾನಾಥ್ ಅವರುಗಳು ಸಾಕಷ್ಟು ದಾಖಲೆಗಳನ್ನು ಸಂಗ್ರಹಿಸಿ ಮಧ್ಯಂತರ ಮತ್ತು ಅಂತಿಮ ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಸರ್ಕಾರ ಕೇಂದ್ರ ಸರ್ಕಾರಕ್ಕೆ ರವಾನಿಸಿದೆ. ಕೇಂದ್ರಸರ್ಕಾರದಲ್ಲೂ ಈ ಬಗ್ಗೆ ಪರಿಶೀಲನೆಗಾಗಿ ಸಮಿತಿ ರಚಿಸಲಾಗಿದೆ ಎಂದು ತಿಳಿದು ಬಂದಿದೆ.

ನವೆಂಬರ್ 29ರಂದು ಹೆಸರಾಂತ ಸಾಹಿತಿ ನಿವೃತ್ತ ಕುಲಪತಿ ಡಾ। ದೇ.ಜವರೇಗೌಡ ಅವರು ಈ ಹಿಂದೆಯೇ ಘೋಷಿಸಿದ್ದಂತೆ ಒಂದು ದಿನದ ಸಾಂಕೇತಿಕ ಉಪವಾಸ ಸತ್ಯಾಗ್ರಹವನ್ನು ಮೈಸೂರಿನಲ್ಲಿ ನಡೆಸುವ ಮೂಲಕ ಸರ್ಕಾರದ ಮೇಲೆ ಒತ್ತಡವನ್ನು ಪರಿಣಾಮಕಾರಿಯಾಗಿ ಹಾಕಿದರು. ಅನೇಕ ಸಾಹಿತಿಗಳು ಅಭಿಮಾನಿಗಳ ಬೆಂಬಲದೊಂದಿಗೆ ಮೈಸೂರು-ಬೆಂಗಳೂರುಗಳಲ್ಲಿ ಈ ಶಾಸ್ತ್ರೀಯ ಭಾಷೆಯ ಒತ್ತಾಯಕ್ಕಾಗಿ ನಡೆದ ಚಳವಳಿ ಯಶಸ್ವಿಯಾಯಿತು. ಮೈಸೂರಿನಲ್ಲಿ ಭಾಗವಹಿಸಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ। ಚಂಪಾ ಅವರು ಇದು ಇನ್ನೊಂದು ಗೋಕಾಕ್ ಚಳವಳಿಯಾಗಿ ಬೆಳೆಯಲಿ ಎಂದರು. ದೇ.ಜ.ಗೌ.ಅವರು ಸರ್ಕಾರಕ್ಕೆ ಒಂದು ತಿಂಗಳ ಗಡುವನ್ನು ನೀಡಿ ಮತ್ತೆ ಚಳವಳಿ ಹೂಡಲಾಗುವುದೆಂದು ಎಚ್ಚರಿಸಿದರು. ಬೆಂಗಳೂರಿನಲ್ಲಿ ಕನ್ನಡ ಅನುಷ್ಠಾನ ಮಂಡಳಿವತಿಯಿಂದ ನಿಯೋಗ ಕೊಂಡೊಯ್ಯುವುದಕ್ಕೆ ಒತ್ತಾಯಿಸಿ ಲಕ್ಷ ಸಹಿ ಚಳವಳಿಯೂ ಕಾರ್ಖಾನೆಗಳ ಕನ್ನಡ ಸಂಘಗಳ ಒಕ್ಕೂಟದಿಂದ ದರಣಿ ಸತ್ಯಾಗ್ರಹವೂ ನಡೆಯಿತು. ಇವುಗಳಲ್ಲಿ ಸಾಹಿತಿಗಳಾದ ವ್ಯಾಸರಾಯ ಬಲ್ಲಾಳ, ಡಾ। ಜಿ.ಎಸ್.ಸಿದ್ಧಲಿಂಗಯ್ಯ, ಬಿ.ಟಿ. ಲಲಿತನಾಯಕ್, ಕೊ.ವೆಂ. ರಾಮಕೃಷ್ಣೇಗೌಡ, ಪ್ರೊ। ನಾ.ಗೀತಾಚಾರ್ಯ, ಗಾಂಧಿವಾದಿ ಎಚ್.ಎಸ್.ದೊರೆಸ್ವಾಮಿ, ಚಳವಳಿಗಾರರಾದ ಪ್ರಭಾಕರ ರೆಡ್ಡಿ, ರಾಮಣ್ಣ ಕೊಡಿಹೊಸಳ್ಳಿ, ರಮಾದೇವಿ ವಿಶ್ವೇಶ್ವರಯ್ಯ ಶ್ರದ್ಧೆ, ಪಾರ್ಶ್ವನಾಥ ಮುಂತಾದ ಅನೇಕ ಗಣ್ಯರು ಭಾಗವಹಿಸಿದ್ದರು.

ಈ ನಡುವೆ ಶಾಸ್ತ್ರಿಯ ಪದದ ಬಗ್ಗೆ ಅದರ ಅರ್ಥವ್ಯಾಪ್ತಿಯ ಬಗೆಗೆ ಕೆಲವು ಸಾಹಿತಿ-ವಿದ್ವಾಂಸರಲ್ಲಿ ಜಿಜ್ಞಾಸೆಯಾಗುತ್ತಿದೆ. ಕೆಲವರು ಅದರ ಭಾಷಾವೈಜ್ಞಾನಿಕ ಪರಿಭಾಷೆಯ ಅರ್ಥವನ್ನು ಹಿಡಿದು ಕನ್ನಡ ಶಾಸ್ತ್ರೀಯ ಭಾಷೆಯಾಗಲಾರದೆಂದೂ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ ದೊರಕುವುದರಿಂದ ಯಾವ ಲಾಭವೂ ಆಗದೆಂದೂ ಕನ್ನಡಕ್ಕಿರುವ ಇತರ ಸಮಸ್ಯೆಗಳತ್ತ ಗಮನಹರಿಸಿಬೇಕೆಂದೂ ಹೇಳಿಕೆಗಳನ್ನು ನೀಡುತ್ತ ಸಾರ್ವಜನಿಕರಲ್ಲಿ ಗೊಂದಲವನ್ನುಂಟು ಮಾಡುತ್ತಿದ್ದಾರೆ.

ವಾಸ್ತವವಾಗಿ 'ಶಾಸ್ತ್ರೀಯ ಭಾಷೆ' ಎಂಬುದು ಭಾಷಾವಿಜ್ಞಾನದಲ್ಲಿ 'ಬಳಕೆಯಲ್ಲಿಲ್ಲದ ಪ್ರಾಚೀನ ಭಾಷೆ' ಎಂಬರ್ಥವಿದ್ದರೂ ಕೇಂದ್ರಸರ್ಕಾರ ತಮಿಳಿಗೆ 'ಶಾಸ್ತ್ರೀಯ' ಸ್ಥಾನ ನೀಡುವ ಮೂಲಕ 'ಬಳಕೆಯಲ್ಲಿರುವ ಪ್ರಾಚೀನಭಾಷೆಯೂ ಶಾಸ್ತ್ರೀಯ ಭಾಷೆಯಾಗುತ್ತದೆ' ಎಂಬ ನೂತನ ವ್ಯಾಖ್ಯಾನವನ್ನು ನೀಡಿದೆ. ಈಗಾಗಲೆ ಈ ಸೌಲಭ್ಯದಡಿ ತಮಿಳು-

ಸಂಸ್ಕೃತಗಳು ಸರ್ಕಾರದಿಂದ ಹಲವು ಕೋಟಿ ರೂ.ಗಳ ಪ್ರಯೋಜನವನ್ನು ಪಡೆಯುತ್ತಿರುವಾಗ ನಾವು ಹೀಗೆ ಒಣ ಚರ್ಚೆ ಮಾಡುತ್ತಾ ಕಾಲಕಳೆಯುವುದರಲ್ಲಿ ಯಾವ ಅರ್ಥವೂ ಕಾಣದು. ತಮಿಳಿನಷ್ಟೇ ಪ್ರಾಚೀನತೆ-ಸ್ಥಾನಮಾನ ಹೊಂದಿರುವ ಕನ್ನಡಕ್ಕೆ ಆ ಸೌಲಭ್ಯವನ್ನು ಇನ್ನೂ ಕೊಡದಿರುವ ಕೇಂದ್ರಸರ್ಕಾರದ ಮಲತಾಯಿ ಧೋರಣೆಯ ಬಗ್ಗೆ ನಮ್ಮ ಒಕ್ಕೊರಲಿನ ಪ್ರತಿಭಟನೆ-ಒತ್ತಾಯ ಮಾಡಬೇಕಾದುದು ಈಗ ಆಗಬೇಕಾಗಿರುವ ಕಾರ್ಯ.

## (ಉ) ಗೌರವಗಳು-ವಿಶೇಷ ಗ್ರಂಥಗಳು :

(1) **ಪ್ರೊ ಜಿ.ವೆಂಕಟಸುಬ್ಬಯ್ಯ ಅವರಿಗೆ 94ರ ಗೌರವ** : ಪ್ರಸಿದ್ಧ ವಿದ್ವಾಂಸರೂ ನಿಘಂಟು ತಜ್ಞರೂ ಹಿರಿಯರೂ ಆದ ಪ್ರೊ॥ ಜಿ.ವೆಂಕಟಸುಬ್ಬಯ್ಯನವರಿಗೆ 94ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಭಾರತೀಯ ವಿದ್ಯಾಭವನ 23.8.05ರಂದು ಗೌರವ ಸಮರ್ಪಣೆ ಮಾಡಿತು. ಈ ಸಂದರ್ಭದಲ್ಲಿ ಪ್ರೊ ಜಿ.ವಿ. ಅವರ ಬದುಕು ಬರಹ ಕುರಿತ 'ಜೀವಭಾವ' ಕೃತಿಯನ್ನು ಬಿಡುಗಡೆ ಮಾಡಲಾಯಿತು. ಉಪಮುಖ್ಯಮಂತ್ರಿ ಎಂ.ಪಿ. ಪ್ರಕಾಶ್, ಮತ್ತೂರು ಕೃಷ್ಣಮೂರ್ತಿ, ವಿದ್ಯಾಭವನದ ಅಧ್ಯಕ್ಷ ಎನ್.ರಾಮಾನುಜ ಅವರು ಉಪಸ್ಥಿತರಿದ್ದ ಸಮಾರಂಭದಲ್ಲಿ ಹಿರಿಯ ಸಾಹಿತಿಗಳಾದ ಪ್ರೊ ಎಲ್.ಎಸ್. ಶೇಷಗಿರಿ ರಾವ್ ಅವರು ಎರಡು ಸಾವಿರ ವರ್ಷಗಳ ಭವ್ಯ ಇತಿಹಾಸವಿರುವ ಕನ್ನಡ ಭಾಷೆಗೆ ಸಮಗ್ರವಾದ ಭಾಷಿಕ ಚರಿತ್ರೆಯನ್ನು ರಚಿಸುವ ಅಗತ್ಯವಿದ್ದು ಭಾಷಾವಿದ್ವಾಂಸರಾದ ಪ್ರೊ ಜಿ.ವಿ.ಅವರಂಥವರು ಇತ್ತ ಗಮನ ಹರಿಸಬೇಕೆಂದು ಹೇಳಿದರು.

(2) **ನಾಡೋಜ ದೇಶಹಳ್ಳಿ ಜಿ. ನಾರಾಯಣ ಅಭಿನಂದನ ಸಂಪುಟ** : ದಿನಾಂಕ 27.03.2006 ರಂದು 82 ವಸಂತಗಳನ್ನು ಕಂಡಿರುವ ನಾಡೋಜ ದೇಶಹಳ್ಳಿ ಜಿ. ನಾರಾಯಣರವರಿಗೆ ರವೀಂದ್ರ ಕಲಾಕ್ಷೇತ್ರದಲ್ಲಿ ಅದ್ದೂರಿಯ ಅಭಿನಂದನ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಇದೇ ಸಂದರ್ಭದಲ್ಲಿ ಪ್ರೊ॥ ಎಂ.ಎಚ್. ಕೃಷ್ಣಯ್ಯ ಮತ್ತು ಡಾ॥ ಚಕ್ಕರೆಶಿವಶಂಕರ್ ಸಂಪಾಂದಿಸಿರುವ. 'ನಾಡೋಜ ದೇಶಹಳ್ಳಿ ಜಿ.ನಾರಾಯಣ' ಎಂಬ ಅಭಿನಂದನ ಸಂಪುಟವನ್ನು ಸಮರ್ಪಿಸಲಾಯಿತು. ಮುಖ್ಯಮಂತ್ರಿ ಶ್ರೀ ಹೆಚ್.ಡಿ. ಕುಮಾರಸ್ವಾಮಿಯವರು ಶ್ರೀ ನಾರಾಯಣರವರ ಬಹುಮುಖ ಸೇವೆಯನ್ನು ಶ್ಲಾಘಿಸಿ, ಅವರು ಅನುಕರಣೀಯ ಆದರ್ಶ ವ್ಯಕ್ತಿಯಾಗಿದ್ದಾರೆಂದು ಹೇಳಿದರು. ಸುಮಾರು 350 ಪುಟ (ಡೆಮ್ಮಿ ಆಕಾರ) ಗಳ ಈ ಬೃಹತ್ ಕೃತಿಯಲ್ಲಿ 50 ಜನ ನಾಡಿನ ಶ್ರೇಷ್ಠ ಸಾಹಿತಿಗಳು, ಕಲಾವಿದರು, ರಾಜಕಾರಣಿಗಳು ಶ್ರೀ ನಾರಾಯಣರ ಬದುಕು, ಬರಹ, ಕಾರ್ಯವಿಚಕ್ಷಣೆ, ಸಾಧನೆ, ಕುರಿತು ಮೌಲಿಕ ಲೇಖನಗಳನ್ನು ಬರೆದಿದ್ದಾರೆ. ಇದೊಂದು ಅತ್ಯುತ್ತಮ ಆಕರ ಗ್ರಂಥವಾಗಿದೆ.

(3) **ಬೆಂಗಳೂರು ದರ್ಶನ : ವಿಶೇಷ ಸಂಪುಟಗಳ ಬಿಡುಗಡೆ :** ನಗರದ ಉದಯಭಾನು ಕಲಾಸಂಘ ಸಿದ್ಧಪಡಿಸಿರುವ ಎರಡು ಸಂಪುಟಗಳ 'ಬೆಂಗಳೂರು ದರ್ಶನ' ಬೃಹದ್ಗ್ರಂಥವನ್ನು ಮುಖ್ಯಮಂತ್ರಿ ಧರ್ಮಸಿಂಗ್ ಅವರು 21.08.05ರಂದು ಲೋಕಾರ್ಪಣೆ ಮಾಡಿದರು. ಉದಯಭಾನು ಕಲಾಸಂಘ ತನ್ನ ನಾಲ್ಕು ದಶಕಗಳ ಸಾಧನೆಯ ನೆನಪಿಗಾಗಿ ಈ ಗ್ರಂಥವನ್ನು ಪ್ರಕಟಿಸಿದೆ. ಪ್ರೊ। ಎಲ್.ಎಸ್. ಶೇಷಗಿರಿ ರಾವ್ ಅವರ ಪ್ರಧಾನ ಸಂಪಾದಕತ್ವದಲ್ಲಿ ಡಾ। ಸೂರ್ಯನಾಥ ಕಾಮತ್ ಮತ್ತು ಪ್ರೊ। ಎಂ.ಎಚ್. ಕೃಷ್ಣಯ್ಯ ಅವರ ಸಂಪಾದಕತ್ವದಲ್ಲಿ ಡಾ। ವಿಜಯ ಅವರ ವ್ಯವಸ್ಥಾಪಕ ಸಂಪಾದಕತ್ವದಲ್ಲಿ ಈ ಸಂಪುಟಗಳು ಸರ್ವಾಂಗ ಸುಂದರವಾಗಿ ಹೊರಬಂದಿವೆ. ಶ್ರೀ ಜಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ಇದಕ್ಕಾಗಿ ರಚಿತಗೊಂಡಿದ್ದ ಒಂದು ಸಂಪಾದನಾ ಸಮಿತಿಯು ಸುಮಾರು 2 ವರ್ಷ ಸತತವಾಗಿ ಕೆಲಸ ಮಾಡಿದೆ. ಬೆಂಗಳೂರಿನ ಇತಿಹಾಸ, ಸಾಹಿತ್ಯ, ಕ್ರೀಡೆ, ಸಂಸ್ಕೃತಿ, ಕಲೆ, ವಿಜ್ಞಾನ, ವಾಣಿಜ್ಯ, ಕೈಗಾರಿಕೆ, ಐ.ಟಿ.ಉದ್ಯಮ, ಸಾರಿಗೆ, ಶಿಕ್ಷಣ, ಕಾನೂನು, ಮಾಧ್ಯಮ, ಧಾರ್ಮಿಕ, ಸಾಮಾಜಿಕ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಬೆಂಗಳೂರು ಬೆಳೆದಿರುವ - ಬೆಳೆಯಬೇಕಾದ ಸಂಗತಿಗಳೊಂದಿಗೆ ವಿಶ್ಲೇಷಣಾತ್ಮಕವಾದ ಸು.250 ಲೇಖನಗಳು, 1000ಕ್ಕೂ ಹೆಚ್ಚಿನ ಚಿತ್ರಗಳೊಂದಿಗೆ 1800 ಪುಟಗಳಲ್ಲಿ ಈ ಸಂಪುಟಗಳು ವಿಸ್ತಾರಗೊಂಡಿವೆ. ಬೃಹತ್ ಬೆಂಗಳೂರಿಗೆ ಇದೊಂದು ಸಮರ್ಪಕ ಕೈಪಿಡಿ. ಭಾರತದ ಯಾವುದೇ ಬೃಹತ್ ನಗರಗಳಿಗೆ ಇಲ್ಲದ ಇಂತಹ ಅತ್ಯುತ್ತಮ ಗ್ರಂಥವನ್ನು ಪ್ರಪ್ರಥಮವಾಗಿ ಬೆಂಗಳೂರಿಗೆ ನೀಡಿದ ಕೀರ್ತಿ ಉದಯಭಾನು ಕಲಾಸಂಘಕ್ಕೆ ಸಲ್ಲುತ್ತದೆ. ಅದರ ಅಧ್ಯಕ್ಷರಾದ ಎನ್.ಆರ್. ಚಂದ್ರನ್ ಮತ್ತು ಮುಖ್ಯವಾಗಿ ಸಂಸ್ಥಾಪಕ ಕಾರ್ಯದರ್ಶಿಗಳಾದ ಎಂ.ನರಸಿಂಹ ಅವರು ಹಾಗೂ ಸಂಘದ ಯಶಸ್ವೀ ಕಾರ್ಯಪಡೆ ಸಮಸ್ತ ಕನ್ನಡಿಗರ ಅಭಿನಂದನೆಗೆ ಪಾತ್ರವಾಗಿದೆ. ಇದು ಪ್ರತಿಯೊಬ್ಬರೂ ಸಂಗ್ರಹಿಸಿಟ್ಟುಕೊಳ್ಳಬೇಕಾದ ಆಕರ ಗ್ರಂಥ. ಇದೇ ಸಂದರ್ಭದಲ್ಲಿ ಪ್ರೊ। ಡಿ. ಲಿಂಗಯ್ಯನವರ ಸಂಪಾದಕತ್ವದಲ್ಲಿ 'ಜಾಗತೀಕರಣ ಬೆಂಗಳೂರು' ಎಂಬ ಇನ್ನೊಂದು ಉಪಯುಕ್ತ ಗ್ರಂಥವನ್ನು ಬಿಡುಗಡೆ ಮಾಡಲಾಯಿತು. ಜಾಗತೀಕರಣದ ಸವಾಲಿಗೆ ಬೆಂಗಳೂರು ಹೇಗೆ ತೆರೆದುಕೊಳ್ಳಬೇಕು ಎಂಬ ಮೌಲಿಕ ಚಿಂತನೆಗಳನ್ನು ಅಂಕಿ-ಅಂಶಗಳೊಂದಿಗೆ ವಿವಿಧ ಲೇಖಕರು ಇದರಲ್ಲಿ ಪ್ರತಿಪಾದಿಸಿದ್ದಾರೆ. ಇದರ ಸಂಪಾದಕ ಮಂಡಳಿಯಲ್ಲಿ ಶ್ರೀ ಎಸ್.ವಿ. ಶ್ರೀನಿವಾಸರಾವ್, ಶ್ರೀವತ್ಸ, ಶ್ರೀ ಕೆ.ವಿ.ರಾಧಾಕೃಷ್ಣ ಸಹಕರಿಸಿದ್ದಾರೆ.

(4) **ನಲ್ನುಡಿ ನಿಘಂಟು :** ಬೆಳಗೆರೆಯ ಶ್ರೀ ಶಾರದಾ ಮಂದಿರ ವಿದ್ಯಾಸಂಸ್ಥೆಯ ಅಧ್ಯಕ್ಷರೂ ಹಿರಿಯ ಶ್ರೇಷ್ಠ ಚಿಂತಕರೂ ಆದ ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳು ತಮ್ಮ ಸಂಸ್ಥೆಯ ಮೂಲಕ ಪ್ರಕಟಿಸಿರುವ ವಿಶಿಷ್ಟ ನಿಘಂಟು ಈ 'ನಲ್ನುಡಿ ನಿಘಂಟು'. ಇದನ್ನು 1935ರಷ್ಟು ಹಿಂದೆಯೇ ಚಿತ್ರದುರ್ಗ ಜಿಲ್ಲೆಯ ಹಳ್ಳಿಗಳಲ್ಲಿ ಶಾಲಾ

ಉಪಾಧ್ಯಾಯರಾಗಿ ಸೇವೆ ಸಲ್ಲಿಸುತ್ತಿದ್ದ ಎಚ್.ಅಲ್ಲಿಸಾಬ್ ಎಂಬ ಮುಸ್ಲಿಂ ಲೇಖಕರು ಸಿದ್ಧಪಡಿಸಿದ್ದುದು ಎಂಬುದೇ ಇದರ ವೈಶಿಷ್ಟ್ಯತೆ. ಯಾವುದೇ ನಿಘಂಟುಗಳ ಸಹಾಯವಿಲ್ಲದೆ ಕನ್ನಡ ಕಾವ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿರುವ, ಸಂಸ್ಕೃತ ಚೆನ್ನಾಗಿ ಬಲ್ಲ ಸಾಮಾನ್ಯ ಕನ್ನಡ ಮೇಷ್ಟರು ರಚಿಸಿದ್ದ ಈ ನಿಘಂಟಿನ ಹಸ್ತಪ್ರತಿ ಶ್ರೀ ಬೆಳಗೆರೆ ಅವರಿಗೆ ತಲುಪಿತ್ತು. ಅದರ ಬಗ್ಗೆ ಆಗಲೇ ಕುತೂಹಲಿಗಳಾಗಿದ್ದ ಶ್ರೀಯುತರು ಅಲ್ಲಿಸಾಬರ ಜೀವಿತಾವಧಿಯಲ್ಲೇ ಪ್ರಕಟಿಸುವ ಪ್ರಯತ್ನಕ್ಕೇ ಕೈಹಾಕಿದ್ದರಾದರೂ ಫಲಕಾರಿಯಾಗದೆ ಹಸ್ತಪ್ರತಿಯನ್ನು ಹಿಂತಿರುಗಿಸಿ ಸುಮ್ಮನಾಗಿದ್ದರು. ಅನಂತರ ಮತ್ತೆ ಈಚೆಗೆ ಅಲ್ಲಿಸಾಬರ ಮಕ್ಕಳ ಸಂಪರ್ಕವಾಗಿ ಮತ್ತೆ ಆ ಹಸ್ತಪ್ರತಿಯನ್ನು ಪಡೆದು ಇದೀಗ ಅದರ ಪ್ರಕಟನೆಯನ್ನು ತಾವೇ ಮಾಡುವ ಮೂಲಕ ಕನ್ನಡ ಸಾಹಿತ್ಯಕ್ಕೆ ಕಣ್ಮರೆಯಾಗಿದ್ದ 'ರತ್ನ'ವೊಂದನ್ನು ತೆರೆದಿಟ್ಟಿದ್ದಾರೆ. ಈ ನಿಘಂಟಿಗೆ ಪ್ರೊ॥ ಮಲ್ಲೇಪುರಂ ಜಿ.ವೆಂಕಟೇಶ ಅವರು ಸುಂದರವಾದ ಪುಸ್ತಕರೂಪ ಕೊಟ್ಟು ಮುನ್ನುಡಿ ಬರೆದಿದ್ದಾರೆ. ಹಿರಿಯ ನಿಘಂಟು ತಜ್ಞರಾದ ಪ್ರೊ॥ ಜಿ.ವೆಂಕಟಸುಬ್ಬಯ್ಯನವರು ಬೆನ್ನುಡಿ ಬರೆದಿದ್ದಾರೆ.

ಇದರಲ್ಲಿ ಸು.20 ಸಾವಿರ ಪದಗಳ ಸಂಗ್ರಹವಿದೆ. 75-80ವರ್ಷಗಳ ಹಿಂದೆ ನಿಘಂಟುಶಾಸ್ತ್ರ ಬೆಳೆದಿರಲಿಲ್ಲ. ಸಂಸ್ಕೃತ ಪಾರಂಪರಿಕ ನಿಘಂಟುಗಳು ಮಾತ್ರ ಇದ್ದವು. ಕಿಟ್ಟೆಲ್ ನಿಘಂಟು ಪ್ರಕಟವಾಗಿತ್ತು. ಪ್ರಾಯಶಃ ಅದರ ಹಿನ್ನೆಲೆಯಲ್ಲಿ ಅಲ್ಲಿಸಾಬ್ ಅವರು ಸ್ವಂತ ಪರಿಶ್ರಮದಿಂದ ಕನ್ನಡ ಕಾವ್ಯಗಳ ಓದಿನ ಹಿನ್ನೆಲೆಯಲ್ಲಿ ಕಠಿಣಪದಗಳಿಗೆ ಅರ್ಥ ಗ್ರಹಿಸುವ ಹಿನ್ನೆಲೆಯಲ್ಲಿ ಈ ನಿಘಂಟನ್ನು ಆಧುನಿಕ ನಿಘಂಟು ತತ್ವದ ಹಿನ್ನೆಲೆಯಲ್ಲಿ ರಚಿಸಿದ್ದಾರೆ. ನಿಘಂಟುಗಳ ಬಗ್ಗೆ ಕೆಲಸ ಮಾಡುವವರು ಇದನ್ನು ಗಮನಿಸಲೇಬೇಕಾದ ಮುಖ್ಯ ವಿಶಿಷ್ಟ ನಿಘಂಟಾಗಿ ಇದು ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗುತ್ತದೆ. ಇಂತಹ ಕಣ್ಮರೆಯಾಗಿದ್ದ ಕೃತಿಯೊಂದನ್ನು ಕನ್ನಡಕ್ಕೆ ಪರಿಚಯಿಸಿದ ಶ್ರೀ ಬೆಳಗೆರೆಯವರು ಅಭಿನಂದನಾರ್ಹರಾಗಿದ್ದಾರೆ.

5) **ರಂಗಕರ್ಮಿ ಎ.ಎಸ್. ಮೂರ್ತಿ ಅವರಿಗೆ ಸನ್ಮಾನ** : ಹಿರಿಯ ರಂಗಕರ್ಮಿ ಎ.ಎಸ್.ಮೂರ್ತಿ ಅವರಿಗೆ 77 ವರ್ಷ ತುಂಬಿದ ಸಂದರ್ಭದಲ್ಲಿ ಅವರ ಅಭಿಮಾನಿಗಳು ಅವರನ್ನು ಆತ್ಮೀಯವಾಗಿ ಸನ್ಮಾನಿಸಿದರು.

ನಗರದ ನಯನ ಸಭಾಂಗಣದಲ್ಲಿ ನಡೆದ ಈ ಸನ್ಮಾನ ಸಮಾರಂಭದಲ್ಲಿ ಮೂರ್ತಿಯವರು ಬರೆದ ಪತ್ರಿಕಾ ಅಂಕಣಗಳ ಸಂಗ್ರಹ 'ಟೀಕಾಸ್ತ್ರ'ವನ್ನು ಬಿಡುಗಡೆ ಮಾಡಿದರು. ಮೂರ್ತಿ ಅವರ ಮೊಮ್ಮಗ ಮತ್ತು ರಂಗಭೂಮಿ ನಟ ವಿ.ಎಸ್.ಕಶ್ಯಪ್ ಅವರು ಬರೆದ 'ವಿರುದನ್ನರಸಿ' ಮಕ್ಕಳ ನಾಟಕ ಪುಸ್ತಕವನ್ನು ಬಿಡುಗಡೆ ಮಾಡಿದರು.

## (ಊ) ಪ್ರಚಲಿತ ವಿಷಯಗಳು :

(1) **ಸಂಪಿಗೆ ಬಿ.ಎಂ.ಶ್ರೀ. ಭವನವನ್ನು ತಕ್ಷಣ ಪ್ರಾರಂಭಿಸಲು ಸರ್ಕಾರಕ್ಕೆ ಕೋರ್ಟ್‌ನ ಆದೇಶ** : ಹಿಂದಿನ ಸಂಚಿಕೆಯಲ್ಲಿ, ಪತ್ರಿಕೆಯಲ್ಲಿ ಬಂದಿದ್ದ ಸಂಪಿಗೆ ಬಿ.ಎಂ.ಶ್ರೀ. ಮನೆಯ ಸುದ್ದಿಯನ್ನು ಪ್ರಕಟಿಸಿದ್ದ ಹಿನ್ನೆಲೆಯಲ್ಲಿ ಆ ಮನೆಯನ್ನು ಸರ್ಕಾರಕ್ಕೆ ವಹಿಸಿದ್ದ ವಾರಸುದಾರ ಸೋದರರಲ್ಲಿ ಒಬ್ಬರಾದ ಸತ್ಯನಾರಾಯಣ ಅವರು ಪ್ರತಿಷ್ಠಾನಕ್ಕೆ ಭೇಟಿ ಕೊಟ್ಟು ವಸ್ತುಸ್ಥಿತಿಯನ್ನು ವಿವರಿಸಿದ್ದರು. ಅವರ ಅಭಿಪ್ರಾಯದಂತೆ ಭವನ ನಿರ್ಮಾಣ ಮಾಡುವ ನಿರ್ಬಂಧದೊಂದಿಗಷ್ಟೇ ನಿವೇಶನವನ್ನು ಸರ್ಕಾರಕ್ಕೆ ನೀಡಲಾಗಿದ್ದು ಅದು ಸಾಧ್ಯವಾಗದೆ ಹೋದರೆ ಹಿಂಪಡೆಯುವ ಅಧಿಕಾರವುಳ್ಳವರಾಗಿದ್ದೇವೆಂದೂ ಸರ್ಕಾರದ ಈ ನಿಧಾನಗತಿ ಮತ್ತು ಅನುದಾನದ ದುರುಪಯೋಗದ ಬಗ್ಗೆ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿದ್ದು ಅದು ಇತ್ಯರ್ಥವಾದ ನಂತರ ಆ ಸಮಿತಿಯಲ್ಲಿ ಬಿ.ಎಂ.ಶ್ರೀ.ಪ್ರತಿಷ್ಠಾನವನ್ನು ಸೇರಿಸಲು ಪ್ರಯತ್ನಿಸುವುದಾಗಿಯೂ ತಿಳಿಸಿದ್ದರು. ಅವರ ಈ ಹೋರಾಟಕ್ಕೆ ನಮ್ಮಿಂದ ಎಲ್ಲ ರೀತಿಯ ಬೆಂಬಲವನ್ನು ನೀಡುವುದಾಗಿಯೂ ಭರವಸೆ ನೀಡಿದ್ದೆವು.

ಇದೀಗ ಪತ್ರಿಕೆಯಲ್ಲಿ ಈ ದಾವೆ ಇತ್ಯರ್ಥವಾಗಿರುವ ಸುದ್ದಿ ಪ್ರಕಟವಾಗಿದೆ. ಸರ್ಕಾರಕ್ಕೆ ನ್ಯಾಯಾಲಯ ಛೀಮಾರಿ ಹಾಕಿದ್ದು ಒಂದು ತಿಂಗಳೊಳಗೆ ಕಾಮಗಾರಿ ಆರಂಭಿಸಬೇಕೆಂದೂ 2 ವರ್ಷಗಳೊಳಗಾಗಿ ಭವನ ನಿರ್ಮಾಣವನ್ನು ಪೂರ್ಣಗೊಳಿಸಬೇಕೇಂದೂ ತೀರ್ಪು ನೀಡಿದೆ. ಸರ್ಕಾರದ ಪರವಾಗಿ ತುಮಕೂರು ಜಿಲ್ಲಾಧಿಕಾರಿಗಳು ನ್ಯಾಯಾಲಯದಲ್ಲಿ ಹಾಜರಿದ್ದು ಲಿಖಿತ ಹೇಳಿಕೆ ನೀಡಿದ್ದಾರೆ.

2) **ಸಂಸತ್‌ನಲ್ಲಿ ಕನ್ನಡ ಪ್ರೇಮ : ಸಚಿವ ಸಯೀದ್‌ಗೆ ಸನ್ಮಾನ** : ಕರ್ನಾಟಕ ಸಂಸದರೊಬ್ಬರ ಪ್ರಶ್ನೆಗೆ ಕನ್ನಡದಲ್ಲಿ ಉತ್ತರಿಸಿ ಲೋಕಸಭೆಯಲ್ಲಿ ಕನ್ನಡ ಡಿಂಡಿಮ ಬಾರಿಸಿದ ಕೇಂದ್ರ ವಿದ್ಯುತ್ ಖಾತೆ ಸಚಿವ ಪಿ.ಎಂ.ಸಯೀದ್ ಅವರನ್ನು ರಾಜ್ಯದ ಜನತೆಯ ಪರವಾಗಿ ಇಂದನ ಸಚಿವ ರೇವಣ್ಣ, ಅಭಿನಂದಿಸಿದರು.

ಸಂಸತ್ ಇತಿಹಾಸದಲ್ಲಿ ಪ್ರಥಮ ಬಾರಿಗೆ ಸಂಸದರು ಕೇಳಿದ ಭಾಷೆಯಲ್ಲಿ ಉತ್ತರಿಸಿರುವ ಸಚಿವ ಸಯೀದ್ ಅವರನ್ನು ಅಭಿನಂದಿಸುತ್ತ ಈ ಪರಂಪರೆ ಮುಂದುವರಿಯಲಿ ಎಂದು ಆಶಿಸೋಣ.

3) **ಹೊರನಾಡಿನ ಸಾಹಿತ್ಯ -ಸಂಸ್ಕೃತಿ ಸಮ್ಮೇಳನ** : ಪಾಂಡಿಚೇರಿಯಲ್ಲಿ ಅ.15 ಮತ್ತು 16ರಂದು ನಡೆದ 9ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಸಮ್ಮೇಳನ ಕರ್ನಾಟಕ ವಿ.ವಿ.ಯ ಮಾಜಿ ಕುಲಪತಿಗಳೂ, ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಳಿಯ ಮಾಜಿ ಅಧ್ಯಕ್ಷರೂ ಆದ ಡಾ। ಎಸ್.ರಾಮೇಗೌಡ ಅವರ

ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ಜರುಗಿತು.

ಬಾ.ಸಾಮಗ ಅವರ 'ದೆಹಲಿ ಕನ್ನಡಿಗ' ಪತ್ರಿಕೆ ಆಶ್ರಯದಲ್ಲಿ ನಡೆದ ಈ ಸಮ್ಮೇಳನವನ್ನು ಪಾಂಡಿಚೇರಿಯ ಮುಖ್ಯಮಂತ್ರಿ ಎನ್. ರಂಗಸ್ವಾಮಿ ಅವರು ಉದ್ಘಾಟಿಸಿದರು. ಪಾಂಡಿಚೇರಿಯ ಮಾಜಿ ಶಿಕ್ಷಣ ಸಚಿವೆ ಪ್ರೊ॥ ರೇಣುಕಾ ಅಪ್ಪಾದೊರೈ ಅವರು ಸ್ಮರಣ ಸಂಚಿಕೆ ಬಿಡುಗಡೆ ಮಾಡಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಡಾ। ಹಂಪ ನಾಗರಾಜಯ್ಯ ಅವರು ಸಾಹಿತ್ಯೋತ್ಸವವನ್ನು, ಖ್ಯಾತ ಸುಗಮ ಸಂಗೀತಗಾರ ಶಿವಮೊಗ್ಗ ಸುಬ್ಬಣ್ಣ ಅವರು ಸಾಂಸ್ಕೃತಿಕೋತ್ಸವವನ್ನು, ತಿರುಚಿನಾಪಳ್ಳಿ ಆಕಾಶವಾಣಿ ನಿಲಯ ನಿರ್ದೇಶಕ ಡಾ। ಕೆ.ವಾಗೀಶ್ ಅವರು ಭಾಷಾ ಬಾಂಧವ್ಯೋತ್ಸವವನ್ನು, ಅಭಿನಯ ಶಾರದೆ ನಟಿ ಜಯಂತಿ ಅವರು ಮಹಿಳಾ ಉತ್ಸವವನ್ನು, ಮುಂಬಯಿಯ ಕನ್ನಡ ಸಾಹಿತಿ ಡಾ।ಜಿ.ಡಿ.ಜೋಷಿ ಅವರು ವಿಚಾರೋತ್ಸವವನ್ನು, ಉಡುಪಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಯು.ಚಂದ್ರಶೇಖರ ಹೊಳ್ಳ ಅವರು ಸಾಂಸ್ಕೃತಿಕ ಬಾಂಧವ್ಯೋತ್ಸವವನ್ನು, ಕವಯತ್ರಿ ಡಾ। ಎಚ್.ಎಸ್.ಸುಜಾತಾ ಅವರು ಕವಿಗೋಷ್ಠಿಯನ್ನು, ಶಿಕ್ಷಣ ತಜ್ಞ ಪ್ರೊ॥ ವೈ.ವೃಷಭೇಂದ್ರಪ್ಪ ಅವರು ಕಲಾ ಉತ್ಸವವನ್ನು, ಡೆಲ್ಲಿ ಜವಾಹರಲಾಲ್ ನೆಹರು ವಿ.ವಿ.ಯ ಮಾಜಿ ಗ್ರಂಥಪಾಲಕ ಬಿ.ಎನ್.ರಾವ್ ಅವರು ಪುಸ್ತಕ ಪ್ರದರ್ಶನವನ್ನೂ ಉದ್ಘಾಟಿಸಿದರು.

**4) ಸಾರಿಗೆ ಕನ್ನಡ ಕ್ರಿಯಾ ಸಮಿತಿಯಿಂದ ಸಾಹಿತ್ಯ ಪ್ರಶಸ್ತಿ:** ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಕನ್ನಡ ಕ್ರಿಯಾ ಸಮಿತಿಯ ಅಧ್ಯಕ್ಷ ಸ್ಥಾನಕ್ಕೆ ಈಚೆಗೆ ಕನ್ನಡ ಕ್ರಿಯಾ ಸಮಿತಿಯ ಸಂಸ್ಥಾಪಕ ವ.ಚ.ಚನ್ನೇಗೌಡರನ್ನು ರಾಜ್ಯಾಧ್ಯಕ್ಷರಾಗಿ ಆಯ್ಕೆ ಮಾಡಲಾಗಿದೆ. ಕ್ರಿಯಾ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ರಫಾಯಿಲ್ ರಾಜ್ ನೇಮಕವಾಗಿದ್ದಾರೆ. ಇವರಿಗೆ ನಮ್ಮ ಅಭಿನಂದನೆಗಳು. ಈ ಕ್ರಿಯಾಸಮಿತಿ ಸುವರ್ಣ ಕರ್ನಾಟಕ ಸಂದರ್ಭದಲ್ಲಿ ಕನ್ನಡ ಸಾಹಿತ್ಯ–ಸಂಸ್ಕೃತಿಯನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಮೂರು ಲಕ್ಷ ರೂಗಳ ಅತ್ಯುನ್ನತ ಪ್ರಶಸ್ತಿಯನ್ನು ಸ್ಥಾಪಿಸಿರುವುದು ಅಭಿನಂದನೀಯವಾಗಿದೆ.

ಇದಕ್ಕೆ ಹಿರಿಯ–ಗಣ್ಯ ಸಾಹಿತಿಗಳ ಒಂದು ಸ್ಥಾಯಿ ಸಮಿತಿಯನ್ನು ರಚಿಸಿ ಸೂಕ್ತವಾದ ರೂಪುರೇಷೆಗಳನ್ನು ನಿಗದಿಪಡಿಸಬೇಕು ಮತ್ತು ಇದನ್ನು ರಾಷ್ಟ್ರಮಟ್ಟದಲ್ಲಿ ನೀಡುವಂತಹ ಗಣ್ಯ ಪ್ರಶಸ್ತಿಯನ್ನಾಗಿ ರೂಪಿಸಬೇಕು. ಹಾಗಾದಾಗ ಮಾತ್ರ ಈ ಪ್ರಶಸ್ತಿಗೆ ಗೌರವ ಬರುತ್ತದೆ. ಈ ಬಗ್ಗೆ ಕ್ರಿಯಾಸಮಿತಿಗೆ ಸೂಕ್ತ ಮಾರ್ಗದರ್ಶನ ನೀಡಲು ಬಿ.ಎಂ.ಶ್ರೀ. ಪ್ರತಿಷ್ಠಾನ ಸಿದ್ಧವಿದೆ.

* * *

# ಅಭಿನಂದನೆ

**ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪ್ರಶಸ್ತಿ:** ಡಾ. ಎಸ್.ಎಲ್. ಭೈರಪ್ಪ ಅವರ ಖ್ಯಾತ ಕಾದಂಬರಿ 'ಧರ್ಮಶ್ರೀ'ಯ ಸಂಸ್ಕೃತ ಅನುವಾದಿತ ಕೃತಿಗೆ 2005ನೇ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ಲಭಿಸಿದೆ. ಅನುವಾದಕರು: ಶ್ರೀ ಜನಾರ್ಧನ ಹೆಗಡೆ.

**ಭಾಷಾ ಸನ್ಮಾನ ಪ್ರಶಸ್ತಿ** : ಕೇಂದ್ರ ಸಾಹಿತ್ಯ ಅಕಾಡೆಮಿ ನೀಡುವ ಈ ಪ್ರಶಸ್ತಿ (2005) ಡಾ.ಎಲ್. ಬಸವರಾಜ್‌ರವರಿಗೆ ಬಂದಿದೆ.

**ಕೇಂದ್ರ ಸಾಹಿತ್ಯ ಅಕಾಡೆಮಿಯ ಭಾಷಾಂತರ ಪ್ರಶಸ್ತಿ:** ಕನ್ನಡದ ಸಾಹಿತಿ, ಭಾಷಾಂತರಕಾರ ಪ್ರೊ. ಪಂಚಾಕ್ಷರಿ ಹಿರೇಮಠ ಅವರ 'ವಸಂತಋತುವಿನ ಸ್ವರಗಳು' ಕನ್ನಡ ಕೃತಿಗೆ ಈ ಪ್ರತಿಷ್ಠಿತ ಪ್ರಶಸ್ತಿ ಲಭಿಸಿದೆ. ಮೂಲ ಕೃತಿ ಲೇಖಕಿ: ಗುರ್ರತ್-ಉಲ್-ಐನ್ ಹೈದರ್. ಪ್ರೊ. ಪಂಚಾಕ್ಷರಿಯವರು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಸುಮಾರು 32 ವರ್ಷ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಅಮೇರಿಕಾದ ಅರಿಜೋನಾ ವಿಶ್ವವಿದ್ಯಾನಿಲಯದಿಂದ ಡಿಲಿಟ್ ಪಡೆದ ಖ್ಯಾತಿವಂತರು.

**ಪಂಪ ಪ್ರಶಸ್ತಿ** : 2005ನೇ ಸಾಲಿನ ಪಂಪ ಪ್ರಶಸ್ತಿಗೆ ಡಾ॥ ಎಸ್.ಎಲ್. ಭೈರಪ್ಪರವರು ಭಾಜನರಾಗಿದ್ದಾರೆ.

**ಚಾವುಂಡರಾಯ ಪ್ರಶಸ್ತಿ;** ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶ್ರವಣಬೆಳಗೊಳದ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ ಸ್ಥಾಪಿಸಿರುವ 2006ನೇ ಸಾಲಿನ ಈ ಪ್ರಶಸ್ತಿ ಕನ್ನಡದ ಹಿರಿಯ ವಿದ್ವಾಂಸ ಪಂಡಿತ ನಾಗರಾಜಯ್ಯರವರಿಗೆ ಸಂದಿದೆ. ನಾಗರಾಜಯ್ಯನವರು ಅಜಿತ ಪುರಾಣ ತಿಲಕ, ಮಲ್ಲಿನಾಥ ಪುರಾಣ, ಅನಂತನಾಥ ಪುರಾಣಗಳ ಕಾವ್ಯ ಸಂಗ್ರಹವನ್ನು ಸಂಪಾದಿಸಿದ್ದಾರೆ. ಮಹಾವೀರಚರಿತೆ, ಪಾರ್ಶ್ವನಾಥ ಚರಿತೆ, ಬಾಹುಬಲಿ ಚರಿತೆ, ಪೂಜ್ಯಪಾದ ಚರಿತೆಗಳನ್ನು ಪದ್ಯರೂಪದಲ್ಲಿ ಪ್ರಕಟಿಸಿದ್ದಾರೆ. ಛಂದಸ್ಸು, ಅಲಂಕಾರ, ವ್ಯಾಕರಣ ಮೊದಲಾದವುಗಳಲ್ಲಿ ಅಪಾರ ಪರಿಣತಿ ಹೊಂದಿರುವ ಈ ವಿದ್ವಾಂಸರು ಕನ್ನಡ ವಿದ್ವತ್ ಕ್ಷೇತ್ರಕ್ಕೆ ಮಹತ್ತರ ಕಾಣಿಕೆಗಳನ್ನು ಸಲ್ಲಿಸಿದ್ದಾರೆ.

**ರನ್ನ ಸಾಹಿತ್ಯ ಪ್ರಶಸ್ತಿ:** ಅತ್ತಿಮಬ್ಬೆ ಪ್ರತಿಷ್ಠಾನ ಮತ್ತು ಲೇಖಕಿಯರ ಪರಿಷತ್ 2006ನೇ ಸಾಲಿನ ಈ ಪ್ರಶಸ್ತಿಯನ್ನು ಡಾ॥ ವಿಜಯ ಸುಬ್ಬರಾಜು ಮತ್ತು ಡಾ॥ ಅನಂತರಾಮು ಅವರಿಗೆ ನೀಡಿ ಪುರಸ್ಕರಿಸಿವೆ. ಏಪ್ರಿಲ್ 30, 2006ರಿಂದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಈ ಪ್ರಶಸ್ತಿ ಪುರಸ್ಕಾರ ವಿತರಣೆ ನಡೆಯಿತು.

**ರಾಜ್ಯ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ ಮತ್ತು ಬಹುಮಾನಗಳು :**

ಬಳ್ಳಾರಿಯಲ್ಲಿ ನಡೆದ ಸಮಾರಂಭದಲ್ಲಿ ಡಾ॥ ಕೃಷ್ಣಮೂರ್ತಿ ಕಿತ್ತೂರ, ಡಾ॥ ಆರ್.ವಿ. ಭಂಡಾರಿ, ಪ್ರೊ॥ ಕಾಳೇಗೌಡ ನಾಗವಾರ, ಡಾ॥ ಎಚ್.ಗಿರಿಜಮ್ಮ ಮತ್ತು ಶ್ರೀಮತಿ ಶಶಿಕಲಾ ವೀರಯ್ಯಸ್ವಾಮಿ ಅವರಿಗೆ 2005ನೇ ಸಾಲಿನ ಗೌರವ ಪ್ರಶಸ್ತಿಯನ್ನು, ಈ ಕೆಳಕಂಡವರಿಗೆ 2006ನೇ ಸಾಲಿನ ಪುಸ್ತಕ ಬಹುಮಾನವನ್ನು ನೀಡಲಾಯಿತು. ಡಾ॥ ಧರಣೀದೇವಿ ಮೂಲಗತ್ತಿ (ಕಾವ್ಯ), ಶ್ರೀನಿವಾಸ ಬಿ.ವೈದ್ಯ (ಕಾದಂಬರಿ), ಕೇಶವಮಳಿಗಿ (ಸಣ್ಣಕತೆ) ಡಾ॥ ಹೆಚ್.ಎಲ್. ಪುಷ್ಪ (ನಾಟಕ), ಚಂದ್ರಶೇಖರ ಆಲೂರು (ಲಲಿತ ಪ್ರಬಂಧ), ನೇಮಿಚಂದ್ರ (ಪ್ರವಾಸ ಸಾಹಿತ್ಯ), ಶ್ರೀಧರ್ (ಜೀವನ ಚರಿತ್ರೆ), ಡಾ॥ ಲೋಕೇಶ ಅಗಸನ ಕಟ್ಟೆ (ಸಾಹಿತ್ಯ ವಿಮರ್ಶೆ) ಪ್ರೊ॥ ನಾ.ಗೀತಾಚಾರ್ಯ (ಗ್ರಂಥ ಸಂಪಾದನೆ) ಸಂಪಟೂರು ವಿಶ್ವನಾಥ್ (ಮಕ್ಕಳ ಸಾಹಿತ್ಯ), ಡಾ॥ ಬಿ.ಎಸ್. ಶೈಲಜಾ (ವಿಜ್ಞಾನ ಸಾಹಿತ್ಯ) ವಿಷ್ಣುನಾಯ್ಕ (ಮಾನವಿಕ) ಎಸ್.ಎಸ್. ಹಿರೇಮಠ (ಸಂಶೋಧನೆ), ಶ್ಯಾಮಲಾ ಮಾಧವಿ (ಅನುವಾದ) ಡಾ॥ ಆರ್. ಲಕ್ಷ್ಮೀನಾರಾಯಣ (ಅನುವಾದ ಡಾ॥ ಅ. ಶ್ರೀಧರ (ಸಂಕೀರ್ಣ) ಹನೂರು ಚನ್ನಪ್ಪ (ಲೇಖಕರ ಮೊದಲ ಕೃತಿ) ಡಿ.ಕೆ. ಸೀತಾರಾಮ ಶಾಸ್ತ್ರಿ (ಕನ್ನಡದಿಂದ ಇಂಗ್ಲೀಷಿಗೆ ಅನುವಾದ)

**ಪ್ರೊ॥ ಎಸ್.ವಿ. ಪರಮೇಶ್ವರಭಟ್ಟ ಸಂಸ್ಮರಣ ಪ್ರಶಸ್ತಿ:** 2006ನೇ ಸಾಲಿನ ಈ ಪ್ರಶಸ್ತಿ ಮೈಸೂರು ವಿಶ್ವವಿದ್ಯಾನಿಲದಿಂದ ಕುವೆಂಪು ಅಧ್ಯಯನ ಸಂಸ್ಥೆಯ ನಿವೃತ್ತ ಪ್ರಾಧ್ಯಾಪಕರೂ, ಹೆಸರಾಂತ ಲೇಖಕರೂ ಆದ ಡಾ॥ ಸಿ.ಪಿ. ಕೃಷ್ಣಕುಮಾರ್ ಅವರಿಗೆ ಲಭಿಸಿದೆ.

**ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ವಿಶೇಷ ಪ್ರಶಸ್ತಿ (2005):** ಬಿ.ಎಸ್. ಗದಗಿನಮಠ ಪ್ರಶಸ್ತಿ ಜಾನಪದ ಸಾಹಿತಿ ಡಾ॥ ವೀರಣ್ಣದಂಡೆಯವರಿಗೆ, ಜೀಶಂಪ ಪ್ರಶಸ್ತಿ ಡಾ॥ ರಾಘವನ್ ನಂಬಿಯಾರ್‌ರವರಿಗೆ ನೀಡಲಾಗಿದೆ. ಇದೇ ಸಂದರ್ಭದಲ್ಲಿ 30 ಮಂದಿ ಜಾನಪದ ಪ್ರಕಾರದ ವಿವಿಧ ಕಲಾವಿದರಿಗೆ "ಜಾನಪದ ಪ್ರಶಸ್ತಿ" ನೀಡಲಾಗಿದೆ.

**ಪದ್ಮಶ್ರೀ ಪ್ರಶಸ್ತಿ :** ಇನ್ಫೋಸಿಸ್ ಪ್ರತಿಷ್ಠಾನದ ಅಧ್ಯಕ್ಷೆ ಖ್ಯಾತ ಸಾಹಿತಿ ಶ್ರೀಮತಿ ಸುಧಾ ಮೂರ್ತಿರವರಿಗೆ ಈ ಪ್ರಶಸ್ತಿ ಸಂದಿದೆ (2006)

**ಶ್ರೀಧರ ಸಾಹಿತ್ಯ ಪ್ರಶಸ್ತಿ :** ಶ್ರೀ ಎಸ್. ದಿವಾಕರ್ ಅವರಿಗೆ 2006ನೇ ಸಾಲಿನ ಶ್ರೀಧರ ಸಾಹಿತ್ಯ ಪ್ರಶಸ್ತಿ ಲಭಿಸಿದೆ.

**ವೀಚಿ ಸಾಹಿತ್ಯ ಪ್ರಶಸ್ತಿ :** ತುಮಕೂರಿನ ಹಿರಿಯ ಕವಿ 'ವೀಚಿ' ಅವರ ಹೆಸರಿನಲ್ಲಿ ನೀಡಲಾಗುವ 2005ನೇ ಸಾಲಿನ ಪ್ರಶಸ್ತಿ ಖ್ಯಾತ ಲೇಖಕರಾದ ಕುಂ. ವೀರಭದ್ರಪ್ಪನವರ 'ಅರಮನೆ' ಕಾದಂಬರಿಗೆ ಸಂದಿದೆ.

**ಕಾಯ್ಕಿಣಿ ಪ್ರಶಸ್ತಿ :** 2005ನೇ ಸಾಲಿನ ಪ್ರಶಸ್ತಿಗೆ ಶ್ರೀಮತಿ ಪ್ರತಿಭಾನಂದಕುಮಾರ್ ಅವರಿಗೆ ಲಭಿಸಿದೆ.

**'ಬಸವಶ್ರೀ' ಪ್ರಶಸ್ತಿ** : ಬಸವ ಜಯಂತಿ ಪ್ರಯುಕ್ತ ನೀಡಲಾಗುವ 'ಬಸವಶ್ರೀ' ಪ್ರಶಸ್ತಿ ಮುಖ್ಯ ನ್ಯಾಯಮೂರ್ತಿ ಡಾ.ವಿ.ಎಸ್. ಮಳೀವತ್‌ರವರಿಗೆ 'ಅಲ್ಲಮಪ್ರಭು' ಪ್ರಶಸ್ತಿ ಮಾಜಿ ಸಚಿವೆ ಲೀಲಾದೇವಿ ಆರ್. ಪ್ರಸಾದ್‌ರವರಿಗೆ; 'ವಚನಸಾಹಿತ್ಯಶ್ರೀ' ಪ್ರಶಸ್ತಿ, ಪೋಲೀಸ್ ಆಯುಕ್ತ ಡಾ|| ಅಜಯ್‌ಕುಮಾರ್‌ಸಿಂಗ್ ರವರಿಗೆ ಸಂದಿವೆ.

**ಕೆಂಪೇಗೌಡ ಪ್ರಶಸ್ತಿ** : ಬೆಂಗಳೂರು ಮಹಾನಗರ ಪಾಲಿಕೆ ನೀಡುವ ಕೆಂಪೇಗೌಡ ಪ್ರಶಸ್ತಿ ಈ ಸಾರಿ ವಿವಿಧ ಕ್ಷೇತ್ರದಲ್ಲಿ ಅಮೂಲ್ಯ ಸೇವೆ ಸಲ್ಲಿಸಿರುವ 65 ಜನರಿಗೆ ಪ್ರತಿಷ್ಠಿತರಿಗೆ ಸಂದಿದೆ. ಸಾಹಿತ್ಯಕ್ಷೇತ್ರ: ಡಾ|| ಕರೀಂಖಾನ್, ಹಿ.ಚಿ. ಶಾಂತವೀರಯ್ಯ, ಸುಧಾ ಬರಗೂರು, ವಿಶ್ವೇಶ್ವರಭಟ್, ಟಿ.ಸಿ. ಪೂರ್ಣಿಮಾ, ಮತ್ತು ಮಹೇಶ್ ಜೋಶಿ (ದೂರದರ್ಶನ) ಮುಂತಾದವರು ಸೇರಿದ್ದಾರೆ.

**ಜೆ.ಪಿ.ರಾಷ್ಟ್ರೀಯ ಗೌರವ ಪ್ರಶಸ್ತಿ** : ಬೆಂಗಳೂರು ದೂರದರ್ಶನ ಕೇಂದ್ರದ ನಿರ್ದೇಶಕರಾದ ಶ್ರೀ ಮಹೇಶ್ ಜೋಶಿಯವರಿಗೆ ಸಂದಿದೆ.

**ಕನ್ನಡ 'ತುತ್ತೂರಿ' ಗೆ ಪ್ರಶಸ್ತಿ** : ಪಿ. ಶೇಷಾದ್ರಿಯವರ ನಿರ್ದೇಶನದ ಕನ್ನಡ ಚಿತ್ರ 'ತುತ್ತೂರಿಗೆ' 9ನೇ ಢಾಕಾ ಅಂತರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಅತ್ಯುತ್ತಮ ಮಕ್ಕಳ ಚಲನ ಚಿತ್ರವೆಂದು ಪ್ರೇಕ್ಷಕರ ಪ್ರಶಸ್ತಿ ಲಭಿಸಿದೆ.

**ಚಿದಾನಂದ ಪ್ರಶಸ್ತಿ** : 2006ನೇ ಸಾಲಿನ ಈ ಪ್ರಶಸ್ತಿ ಡಾ.ಎಸ್.ಎಂ. ವೃಷಭೇಂದ್ರ ಸ್ವಾಮಿಯವರಿಗೆ ಸಂದಿದೆ

**ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ** : ಸಣ್ಣಕತೆ, ಕಾದಂಬರಿಗಳಿಂದ ಖ್ಯಾತರಾದ ಶ್ರೀ ರಾಘವೇಂದ್ರ ಪಾಟೀಲರ ಕಾದಂಬರಿ 'ತೇರು' 2005ನೇ ಸಾಲಿನ ಪ್ರಶಸ್ತಿಗೆ ಆಯ್ಕೆಗೊಂಡಿದೆ.

**ಪ್ರತಿಷ್ಠಿತ 'ಜೋಷುವಾ' ಸಾಹಿತ್ಯ ಪ್ರಶಸ್ತಿ** : 2004ನೇ ಸಾಲಿನ ಆಂಧ್ರಪ್ರದೇಶದ ಪ್ರತಿಷ್ಠಿತ ಜೋಷುವಾ ಸಾಹಿತ್ಯ ಪ್ರಶಸ್ತಿಗೆ ಕನ್ನಡದ ಖ್ಯಾತ ಲೇಖಕ ಡಾ|| ಚಂದ್ರಶೇಖರ ಕಂಬಾರ ಆಯ್ಕೆಯಾಗಿದ್ದಾರೆ. ಪ್ರಶಸ್ತಿ ಒಂದು ಲಕ್ಷ ರೂ. ನಗದು ಹಾಗೂ ಪ್ರಶಸ್ತಿ ಪತ್ರ ಒಳಗೊಂಡಿರುತ್ತದೆ.

**ಅರಸು ಪ್ರಶಸ್ತಿ** : ಈ ಸಾಲಿನ ದೇವರಾಜ ಅರಸು ಪ್ರಶಸ್ತಿಗೆ ನಿಡುಮಾಮಿಡಿ ಮಹಾಮಠದ ಪೀಠಾಧ್ಯಕ್ಷರಾದ ಶ್ರೀ ವೀರಭದ್ರ ಚನ್ನಮಲ್ಲಸ್ವಾಮಿಗಳು ಆಯ್ಕೆಗೊಂಡಿದ್ದಾರೆ.

**ಬಸವಶ್ರೀ ಪ್ರಶಸ್ತಿ** : ಚಿತ್ರದುರ್ಗ ಮುರುಘರಾಜೇಂದ್ರ ಬೃಹನ್ಮಠದಿಂದ ಪ್ರತಿವರ್ಷ ಕೊಡಮಾಡುವ ಪ್ರತಿಷ್ಠಿತ 'ಬಸವ ಶ್ರೀ' ಪ್ರಶಸ್ತಿಯನ್ನು 2005ನೇ ಸಾಲಿಗೆ ಖ್ಯಾತ ಕೃಷಿ ತಜ್ಞ, ಸುಭಾಷ್ ಪಾಳೇಗಾರ್ ಅವರಿಗೆ ನೀಡಲಾಗಿದೆ. ಪ್ರಶಸ್ತಿಯು 1 ಲಕ್ಷ ರೂ. ನಗದು ಹಾಗೂ ಪ್ರಶಸ್ತಿ ಫಲಕ ಒಳಗೊಂಡಿರುತ್ತದೆ.

**ಶಂಬಾ ಪ್ರಶಸ್ತಿ** : ಕರ್ನಾಟಕ ಸಂಘ ಶಿವಮೊಗ್ಗ ಕೊಡಮಾಡುವ 'ಶಂಬಾ

ಪ್ರಶಸ್ತಿ'ಯನ್ನು ಡಾ॥ ಹಂಪ ನಾಗರಾಜಯ್ಯನವರಿಗೆ ನೀಡಿ ಪುರಸ್ಕರಿಸಲಾಯಿತು.

**'ಗಾನ ಕಲಾಭೂಷಣ', 'ಗಾನಕಲಾಶ್ರೀ' ಬಿರುದು :** ಘಟವಾದನಪಟು ಶ್ರೀ ಕೆ.ಎನ್. ಕೃಷ್ಣಮೂರ್ತಿಯವರಿಗೆ 'ಕರ್ನಾಟಕ ಗಾನಕಲಾ ಭೂಷಣ' ಲಯ ವಿದ್ವಾಂಸ ಆನೂರು ಅನಂತ ಕೃಷ್ಣಶರ್ಮ ಅವರಿಗೆ 'ಗಾನಕಲಾಶ್ರೀ' ಬಿರುದನ್ನು ಕರ್ನಾಟಕ ಗಾನ ಕಲಾಪರಿಷತ್ತು ಸಂಗೀತ ಸಮ್ಮೇಳನದ ಅಂಗವಾಗಿ ನೀಡಿ ಗೌರವಿಸಲಾಯಿತು.

**ಮಾಸ್ತಿ ಪ್ರಶಸ್ತಿ :** 2006ನೇ ಸಾಲಿನ ಪ್ರಶಸ್ತಿ ಡಾ॥ ನಿಸಾರ್ ಅಹಮದ್ ರವರಿಗೆ ಪ್ರಾಪ್ತವಾಗಿವೆ.

**ನಾಡೋಜ ಪ್ರಶಸ್ತಿ :** ಪ್ರೊ॥ ಜಿ. ವೆಂಕಟಸುಬ್ಬಯ್ಯ ಹಾಗೂ ಸಾರಾ ಅಬೂಬಕರ್ ಅವರಿಗೆ (ಸಾಹಿತ್ಯ ಕ್ಷೇತ್ರ) ಹಂಪೆ ಕನ್ನಡ ವಿಶ್ವವಿದ್ಯಾನಿಲಯ ನೀಡುವ ಗೌ॥ ಡಾಕ್ಟರೇಟ್ ಪದವಿಯಾದ ನಾಡೋಜ ಪ್ರಶಸ್ತಿಯಯನ್ನು ಈ ಸಾಲಿನಲ್ಲಿ ನೀಡಿ ಗೌರವಿಸಲಾಯಿತು.

**ಬೆಳಗಾವಿ ನಾಡೋಜ ಪ್ರತಿಷ್ಠಾನ :** ಇದು ಕೆಳಕಂಡವರಿಗೆ ಈ ಸಾಲಿನ ಪ್ರಶಸ್ತಿಗಳನ್ನು ಪ್ರಕಟಿಸಿದೆ. 1) ನಿವೃತ್ತ ಪೋಲಿಸ್ ಮಹಾನಿರ್ದೇಶಕ ಶ್ರೀ ಟಿ.ಎಸ್. ಗರುಡಾಚಾರ್ ಅವರಿಗೆ 'ಅರವಿಂದ' ಪ್ರಶಸ್ತಿ; ಮಾಲತಿ ಪಟ್ಟಣಶೆಟ್ಟಿಯವರಿಗೆ 'ಕಾತ್ಯಾಯಿನಿ'; ಬಿ.ಎಲ್. ಪಾಟೀಲ್ ಅವರಿಗೆ 'ವಾಮನರಾವ್-ಸುಶೀಲಬಾಯಿ ಪ್ರಶಸ್ತಿ'ಗಳನ್ನು ಘೋಷಿಸಿದೆ.

**ಜೈಂಟ್ಸ್ ಇಂಟರ್‌ನ್ಯಾಷನಲ್ ಪ್ರಶಸ್ತಿ :** ಕರ್ನಾಟಕದ ಧರ್ಮಸ್ಥಳ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ಡಾ॥ಡಿ. ವೀರೇಂದ್ರಹೆಗ್ಗಡೆ, ಬಾಲಿವುಡ್ ತಾರೆಯಾದ ಸುನಿಲ್ ಶೆಟ್ಟಿ, ಸುಷ್ಮಿತಾ ಸೇನ್, ಒ.ಎನ್.ಜಿ.ಸಿ. ಅಧ್ಯಕ್ಷ ಸುಬೀರ್ ಷಾ ಸೇರಿದಂತೆ 9 ಜನಗಣ್ಯರಿಗೆ ಈ ಪ್ರತಿಷ್ಠಿತ ಅಂತರರಾಷ್ಟ್ರೀಯ ಪ್ರಶಸ್ತಿಯನ್ನು ಮುಂಬಯಿಯಲ್ಲಿ ಪ್ರದಾನ ಮಾಡಲಾಯಿತು.

**ಸಂಗೀತ, ನೃತ್ಯ ಅಕಾಡೆಮಿ ಪ್ರಶಸ್ತಿಗಳು:** 2004-05ನೇ ಸಾಲಿನ ಮೈಸೂರಿನ ಎಂ.ಕೆ.ಸರಸ್ವತಿ (ವೀಣೆ), ಬೆಂಗಳೂರಿನ ಮತ್ತೂರು ಕೃಷ್ಣಮೂರ್ತಿ (ಗಮಕ), ಇವರಿಗೆ ಗೌರವ ಪ್ರಶಸ್ತಿಯನ್ನು ಹಾಗೂ 16 ಮಂದಿ ವಿವಿಧ ಪ್ರಕಾರದ ಕಲಾವಿದರಿಗೆ ವಾರ್ಷಿಕ ಪ್ರಶಸ್ತಿಯನ್ನು ಬೆಂಗಳೂರಿನಲ್ಲಿ ಪ್ರದಾನ ಮಾಡಲಾಯಿತು. ಇದೇ ರೀತಿ 2005-06 ಸಾಲಿಗೆ ಬೆಳಗಾವಿಯ ಇಂದೂಧರ ನಿರೋಡಿ (ಹಿಂದೂಸ್ತಾನಿ ಸಂಗೀತ) ಮತ್ತು ಮೈಸೂರಿನ ಕೆ. ರಾಮಮೂರ್ತಿರಾವ್ (ನೃತ್ಯ) ಇವರಿಗೆ ಗೌರವ ಪ್ರಶಸ್ತಿಯನ್ನು ಮತ್ತು 16 ಮಂದಿ ವಿವಿಧ ಪ್ರಕಾರದ ಸಾಧಕರಿಗೆ ವಾರ್ಷಿಕ ಪ್ರಶಸ್ತಿಯನ್ನು ಪ್ರದಾನ ಮಾಡಲಾಯಿತು.

**ಜಾನಪದ-ಯಕ್ಷಗಾನ ಅಕಾಡೆಮಿ ಪ್ರಶಸ್ತಿ :** 2004ನೇ ಸಾಲಿನ ವಿಶೇಷ ಪ್ರಶಸ್ತಿಗೆ ಕೆರೆಮನೆ ಮಹಾಬಲ ಹೆಗಡೆ, ಮತ್ತು ಡಾ॥ಹಿ.ಶಿ. ರಾಮಚಂದ್ರೇಗೌಡರನ್ನು ಆಯ್ಕೆ ಮಾಡಲಾಗಿದೆ. ಮತ್ತೆ ರಾಜ್ಯದ ವಿವಿಧ ಕಲಾವಿದರಿಗೆ ಗೌರವ ಪ್ರಶಸ್ತಿಯನ್ನು ಸಹ ನೀಡಲಾಗಿದೆ.

**ಸುವರ್ಣ ಕರ್ನಾಟಕ ರಾಜ್ಯ ಪ್ರಶಸ್ತಿ :** ಕರ್ನಾಟಕ ಸರ್ಕಾರವು ಈ ಬಾರಿ 175

ಜನರಿಗೆ ರಾಜ್ಯ ಪ್ರಶಸ್ತಿ ನೀಡಿ ಪುರಸ್ಕರಿಸಿದೆ. ಸಾಹಿತ್ಯ ಕ್ಷೇತ್ರದ ಪ್ರಮುಖರಾದ ವ್ಯಾಸರಾಯ ಬಲ್ಲಾಳ, ಎಂ.ಎಚ್. ಕೃಷ್ಣಯ್ಯ, ಎಸ್.ಪಿ. ಶ್ರೀನಿವಾಸರಾವ್, ಶಶಿಕಲಾ ವೀರಯ್ಯಸ್ವಾಮಿ, ಮಲ್ಲೇಪುರಂ ಜಿ. ವೆಂಕಟೇಶ್, ಬಿ.ಎಲ್. ವೇಣು, ಎಚ್.ಎಸ್. ಶಿವಪ್ರಕಾಶ್, ಕೋಟಗಾನಹಳ್ಳಿ ರಾಮಯ್ಯ, ಡಾ॥ ಕೃಷ್ಣಮೂರ್ತಿ ಹನೂರು, ಪ್ರೊ॥ ಮಹಾದೇವಪ್ಪ, ಜರಗನಹಳ್ಳಿ ಶಿವಶಂಕರ್, ಮಹಬೂಬ್ ಕೈಸರ್, ಡಾ॥ ನಲ್ಲೂರು ಪ್ರಸಾದ್, ಟಿ.ಎನ್. ಸೀತಾರಾಮ್, ಶಿಕ್ಷಣ ತಜ್ಞರಾದ ಪ್ರೊ॥ ಕೆ.ಇ. ರಾಧಾಕೃಷ್ಣ, ಪ್ರೊ॥ ಎಚ್.ಆರ್. ದಾಸೇಗೌಡ ಮುಂತಾದವರು ಈ ಪ್ರಶಸ್ತಿಗೆ ಭಾಜನರಾಗಿದ್ದಾರೆ.

**ಅನಕೃ-ನಿರ್ಮಾಣ್ ಪ್ರಶಸ್ತಿ** : ಡಾ॥ ದೇ.ಜವರೇಗೌಡ ರವರಿಗೆ ಈ ಸಾಲಿನ ಪ್ರತಿಷ್ಠಿತ ಅನಕೃ ಹೆಸರಿನ ಪ್ರಶಸ್ತಿ ಸಂದಿದೆ.

**ಆಚಾರ್ಯ ಸುಮತಿ ಸಾಗರ ಶ್ರುತ ಸಂವರ್ಧನ ಪ್ರತಿಷ್ಠಾನ** : ಡಾ॥ ಹಂಪ ನಾಗರಾಜಯ್ಯ ಅವರಿಗೆ ಮಧ್ಯಪ್ರದೇಶದ ತೀರ್ಥಕ್ಷೇತ್ರ ಸೋನಾಗಿರಿಯಲ್ಲಿ ಆಚಾರ್ಯ ಜ್ಞಾನ ಸಾಗರ ಮಹಾರಾಜ ಜೈನ ಸಾಹಿತ್ಯ ಸಾಧನೆಗಾಗಿ ನೀಡುವ ರಾಷ್ಟ್ರೀಯ ಪ್ರಶಸ್ತಿಯನ್ನು ವಿತರಿಸಿದರು.

**ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ** : 2004ನೇ ಸಾಲಿನ ಗೌರವ ಪ್ರಶಸ್ತಿಯನ್ನು ಡಾ॥ ನಿರುಪಮಾ; ಬಾಲಚಂದ್ರ ಜಯಶೆಟ್ಟಿ; ಬಾನು ಮುಷ್ತಾಕ್ ಮತ್ತು ಪ್ರೊ॥ ಕೆ.ಬಿ. ಸಿದ್ದಯ್ಯ ಅವರಿಗೆ ನೀಡಲಾಗಿದೆ ಮತ್ತು 18 ವಿವಿಧ ಪ್ರಕಾರದ ಪುಸ್ತಕಗಳ ಗ್ರಂಥ ಕರ್ತೃಗಳಿಗೆ ಪ್ರಶಸ್ತಿ ನೀಡಿದೆ.

**ಸ್ವರಮೂರ್ತಿ ವಿ.ಎನ್.ರಾವ್ ಸ್ಮಾರಕ ಟ್ರಸ್ಟ್** : ವೀಣೆ ಶೇಷಣ್ಣ ಸ್ಮಾರಕ ಪ್ರಶಸ್ತಿಯನ್ನು ಪಿಟೀಲು ವಿದ್ವಾಂಸ ಆರ್.ಆರ್ ಕೇಶವಮೂರ್ತಿ ಅವರಿಗೆ ಹಾಗೂ ಸ್ವರಮೂರ್ತಿ ವಿ.ಎನ್. ರಾವ್ ಸ್ಮಾರಕ ಪ್ರಶಸ್ತಿಯನ್ನು ವಿದ್ವಾನ್ ಟಿ.ಕೆ. ಗೋವಿಂದರಾವ್ ಅವರಿಗೆ ವಿತರಿಸಲಾಗಿದೆ.

ಕೇಂದ್ರ ಸರ್ಕಾರ ಕೇಂದ್ರ ಆಡಳಿತ ಸುಧಾರಣಾ ಆಯೋಗಕ್ಕೆ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಶ್ರೀ ಎಂ. ವೀರಪ್ಪ ಮೊಯಿಲಿ ಯವರನ್ನು ಅಧ್ಯಕ್ಷರನ್ನಾಗಿ ನೇಮಿಸಿದೆ. **ಕರ್ನಾಟಕ ಅನುವಾದ ಅಕಾಡೆಮಿಗೆ** ಡಾ॥ ಪ್ರಧಾನ ಗುರುದತ್ ಅವರನ್ನು ಅಧ್ಯಕ್ಷರನ್ನಾಗಿ ಕರ್ನಾಟಕ ಸರ್ಕಾರ ನೇಮಿಸಿದೆ.

ಹಿರಿಯ ಪ್ರಕೃತಿ ಚಿಕಿತ್ಸಾ ತಜ್ಞ, ಲೇಖಕ ಡಾ। ಹೊ. ಶ್ರೀನಿವಾಸಯ್ಯ ಅವರು ರಾಜ್ಯ ಸರ್ಕಾರದ ಪ್ರಕೃತಿ ಚಿಕಿತ್ಸಾ ಮತ್ತು ಯೋಗ ಸಲಹಾ ಸಮಿತಿಯ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಎರಡು ವರ್ಷಗಳ ಅವಧಿಯ ಈ ಹುದ್ದೆಗೆ ಸರ್ಕಾರ ಅವರನ್ನು ನೇಮಿಸಿದೆ.

ಮೇಲ್ಕಂಡ ಎಲ್ಲಾ ಗಣ್ಯರಿಗೂ ಜಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಪರವಾಗಿ 'ಕರ್ನಾಟಕ ಲೋಚನ' ಹಾರ್ದಿಕ ಅಭಿನಂದನೆಗಳೊಡನೆ ಶುಭಾಶಯಗಳನ್ನು ಸಲ್ಲಿಸುತ್ತಿದೆ.

******

# ಶ್ರದ್ಧಾಂಜಲಿ

**1. ಡಾ। ಶಾಂತಾದೇವಿ ಮಾಳವಾಡ** : (10.12.1922–07.08.2005) : ಹಿರಿಯ ಸಾಹಿತಿ, 68ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ (ಬಾಗಲಕೋಟೆ)ದ ಅಧ್ಯಕ್ಷರಾಗಿದ್ದರು. ಪ್ರತಿಷ್ಠಾನದ ಗೌರವ ಸದಸ್ಯರೂ ಆಗಿದ್ದ ಶ್ರೀಮತಿಯವರು ದಿನಾಂಕ 7/8/05ರಂದು ಧಾರವಾಡದಲ್ಲಿ ನಿಧನರಾದರು. ಮುರುಗಪ್ಪ ಜಯಂತಿದೇವಿಯವರ ಪುತ್ರಿಯಾಗಿ ದಿನಾಂಕ 10.12.1922ರಂದು ಬೆಳಗಾವಿಯಲ್ಲಿ ಜನಿಸಿದ ಶಾಂತದೇವಿ ಮಾಳವಾಡರವರು ಖ್ಯಾತ ಸಾಹಿತಿ ಪ್ರೊ। ಸ.ಸ.ಮಾಳವಾಡರವರ ಪತ್ನಿಯಾಗಿ ಅನೇಕ ಕೃತಿಗಳನ್ನು ರಚಿಸಿ ಖ್ಯಾತರಾಗಿದ್ದಾರೆ. 1996ರಲ್ಲಿ ಇವರಿಗೆ ಕರ್ನಾಟಕ ರಾಜ್ಯದ 'ಅತ್ತಿಮಬ್ಬೆ' ಪ್ರಶಸ್ತಿ ಲಭಿಸಿತ್ತು. ಇವರು ರಚಿಸಿರುವ ಕೆಲವು ಪ್ರಮುಖ ಕೃತಿಗಳು: ಮೊಗ್ಗೆಯ ಮಾಲೆ, ಕುಂಕುಮಬಲ, ಸೊಬಗಿನ ಮನೆ, ಬಸವಪ್ರಕಾಶ, ಕೆಳದಿ ಚೆನ್ನಮ್ಮ, ಮಹಿಳಾ ಚೇತನ, ಸಾರ್ವಜನಿಕ ರಂಗದಲ್ಲಿ ಮಹಿಳೆ, ಜನನೀ ಜನ್ಮ ಭೂಮಿಶ್ಚ ಮುಂತಾದವು.

**2. ದಿವಸ್ಪತಿ ಹೆಗಡೆ** : ಖ್ಯಾತ ಲೇಖಕರಾಗಿದ್ದ ದಿವಸ್ಪತಿ ಹೆಗಡೆಯವರು ದಿನಾಂಕ 14.11.05ರಂದು ಬೆಂಗಳೂರಿನಲ್ಲಿ ನಿಧನ ಹೊಂದಿದರು. ಬಿ.ಎಚ್.ಎಸ್. ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದ ಶ್ರೀಯುವರು ಖ್ಯಾತನಾಟಕಕಾರರಾಗಿದ್ದರು. ಹಲವು ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳನ್ನು ರಚಿಸಿದ್ದಾರೆ.

**3. ಪ್ರೊ। ಟಿ.ಕೇಶವಭಟ್ಟ** (02.02.1920–20.08.2005) : ವಿದ್ವಾನ್ ಟಿ.ಕೇಶವಭಟ್ ಅವರು 20.08.05ರಂದು ಬೆಂಗಳೂರಿನಲ್ಲಿ ದೈವಾಧೀನರಾದರು. ಸಂಸ್ಕೃತ ಮತ್ತು ಕನ್ನಡ ವಿದ್ವಾಂಸರಾದ ತಾಳ್ತಜೆ ಕೇಶವಭಟ್‌ರವರು ಮೌಲ್ಯಾಧಾರಿತ ಗ್ರಂಥರಚನೆ ಹಾಗೂ ಗ್ರಂಥಸಂಪಾದನೆಗೆ ಹೆಸರಾಗಿದ್ದರು. 65ಕ್ಕೂ ಹೆಚ್ಚು ವೈವಿಧ್ಯಪೂರ್ಣ ಗ್ರಂಥಗಳನ್ನು ರಚಿಸಿರುವ ಶ್ರೀಯುತರು ಯಕ್ಷಗಾನ ಮತ್ತು ಜಾನಪದ ಕ್ಷೇತ್ರಕ್ಕೂ ಅಮೂಲ್ಯ ಸೇವೆಯನ್ನು ನೀಡಿರುತ್ತಾರೆ. 'ಹವ್ಯಕರ ಶೋಭಾನೆಗಳು' ಕೃತಿಗೆ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಪ್ರಶಸ್ತಿ ಲಭಿಸಿರುತ್ತದೆ. ಬಿ.ಎಂ.ಶ್ರೀ.ಪ್ರತಿಷ್ಠಾನದ ಸ್ಥಾಪಕ ಸದಸ್ಯರಾಗಿದ್ದ ಇವರು ಹಲವು ವರ್ಷ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ವಿದ್ವತ್ ಪತ್ರಿಕೆ 'ಕರ್ನಾಟಕ ಲೋಚನ'ದ ಸಂಪಾದಕರಾಗಿದ್ದರು. ಪ್ರತಿಷ್ಠಾನದ ಹಿತೈಷಿಗಳಾಗಿ ಮಾರ್ಗದರ್ಶಕರಾಗಿ ಸಂಸ್ಥೆಯ ಬೆಳವಣಿಗೆಯು ಸಕ್ರಿಯವಾಗಿ ತೊಡಗಿಕೊಂಡಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಪರಿಷತ್ಪತ್ರಿಕೆಯ ಸಂಪಾದಕರೂ, ಕವಿಯೂ ಆಗಿದ್ದ ಇವರ 'ಸತ್ಯಾಲೋಕನಂ' ಕಾವ್ಯಕ್ಕೆ ರಾಜ್ಯಪ್ರಶಸ್ತಿ ಲಭಿಸಿರುತ್ತದೆ. 'ಕೇಶವಾಖ್ಯಾನ' ಅವರ ಆತ್ಮಚರಿತ್ರೆ. ಇವರು 'ಜಾನಪದ

ತಜ್ಞ', 'ನುಡಿರೂಪರೂವಾರಿ', 'ಕವಿಶೇಖರ' ಮುಂತಾದ ಬಿರುದುಗಳಿಗೆ ಭಾಜನರಾಗಿದ್ದರು.

**4. ಎಸ್.ಜಿ.ಮೈಸೂರುಮಠ** (1925-2005) : ದಿನಾಂಕ 08.12.05 ರಂದು ನಿಧನರಾದ ಖ್ಯಾತ ಪತ್ರಿಕೋದ್ಯಮಿ ಎಸ್.ಜಿ. ಮೈಸೂರುಮಠ ಅವರು ಥಾಮ್ಸನ್ ಫೌಂಡೇಶನ್ ಫೆಲೋಷಿಪ್ ಪಡೆದು ಲಂಡನ್ನಿನಲ್ಲಿ ಪತ್ರಿಕೋದ್ಯಮದಲ್ಲಿ ಉನ್ನತ ಶಿಕ್ಷಣ ಪಡೆದಿದ್ದರು. ಶ್ರೀಯುತರು 50ಕ್ಕೂ ಹೆಚ್ಚು ವರ್ಷಕಾಲ ಪತ್ರಿಕೋದ್ಯಮದಲ್ಲಿ ಪ್ರಶಂಸನೀಯ ಸೇವೆಯನ್ನು ಸಲ್ಲಿಸಿರುತ್ತಾರೆ. ಇವರು ವಿಶ್ವಕರ್ನಾಟಕ, ಪ್ರಪಂಚ, ಡೆಕ್ಕನ್ ಹೆರಾಲ್ಡ್, ಸಂಯುಕ್ತ ಕರ್ನಾಟಕದಲ್ಲಿ ವಿವಿಧ ಹುದ್ದೆಗಳಲ್ಲಿ ದುಡಿದಿದ್ದಾರೆ. ಇವರು ಮಕ್ಕಳಿಗಾಗಿ 'ದಲಿತ ಮಾಮರ' ಎಂಬ ಕೃತಿಯನ್ನೂ ರಚಿಸಿದ್ದಾರೆ. ವಿಶ್ವವಿದ್ಯಾನಿಲಯಗಳ ಸೆನೆಟ್, ಸಿಂಡಿಕೇಟ್, ಅಕಾಡೆಮಿಕ್ ಕೌನ್ಸಲ್ ಸದಸ್ಯರಾಗಿಯೂ ಸೇವೆ ಸಲ್ಲಿಸಿರುತ್ತಾರೆ. ಕೆಲಕಾಲ ಶ್ರೀ ವೊಯಿಲಿಯುವರು ಕರ್ನಾಟಕ ಮುಖ್ಯಮಂತ್ರಿಯಾಗಿದ್ದಾಗ ಪತ್ರಿಕಾ ಕಾರ್ಯದರ್ಶಿಯಾಗಿದ್ದರು. ಇವರದು ಬಹುಮುಖ ಪ್ರತಿಭೆ. ಜನಾದರಣೀಯ ವ್ಯಕ್ತಿತ್ವ

**5. ಡಾ। ಎಚ್.ಎಲ್. ನಾಗೇಗೌಡ** (11.02.1915-22.09.2005) : ದಿನಾಂಕ 22.09.2005ರಂದು ನಿಧನರಾದ ಖ್ಯಾತ ಜಾನಪದ ವಿದ್ವಾಂಸರಾದ ಇವರು ಕರ್ನಾಟಕ ಸರ್ಕಾರದಲ್ಲಿ ಐ.ಎ.ಎಸ್. ಅಧಿಕಾರಿಯಾಗಿ ಕಾರ್ಯ ನಿರ್ವಹಿಸಿ ಹೆಸರು ಗಳಿಸಿದ್ದರೂ ಖ್ಯಾತ ಜಾನಪದತಜ್ಞರಾಗಿ, ಬಹುಮುಖ ಪ್ರತಿಭೆಯ ಸಾಹಿತಿಯಾಗಿ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಅವಿಸ್ಮರಣೀಯ ವ್ಯಕ್ತಿಯಾಗಿ ಮೆರೆದಿದ್ದಾರೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರಾಗಿ, "ಜಾನಪದ ಲೋಕ"ದ ಸ್ಥಾಪಕರಾಗಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ಅಮೂಲ್ಯ ಸೇವೆಯನ್ನು ಮಾಡಿರುತ್ತಾರೆ. ಸೋಬಾನೆ 'ಚಿಕ್ಕಮ್ಮನ ಪದಗಳು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ (1972). ನೀಡಿರುವ ಕ.ಸಾ.ಅಕಾಡಮಿ ಇವರ ಬಹುಮುಖ ಸಾಹಿತ್ಯ ಕೊಡುಗೆಗಳನ್ನು ಗುರುತಿಸಿ 1974ರಲ್ಲಿ ಗೌರವ ಪ್ರಶಸ್ತಿ ನೀಡಿ ಪುರಸ್ಕರಿಸಿದೆ. ಇವರ ಪ್ರಮುಖ ಕೃತಿಗಳು: ದೊಡ್ಡಮನೆ, ಸೊನ್ನೆಯಿಂದ ಸೊನ್ನೆಗೆ, ಭೂಮಿಗೆ ಬಂದ ಗಂಧರ್ವ (ಕಾದಂಬರಿಗಳು), 'ನಾನಾಗುವೆ ಗೀಜಗನ ಹಕ್ಕಿ' (ಕವನ ಸಂಕಲನ); ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ (ಸಂಶೋಧನಾ ಗ್ರಂಥ); ನಾ ಕಂಡ ಪ್ರಪಂಚ; ಪ್ರವಾಸಿ ಕಂಡ ಇಂಡಿಯಾ (ಪ್ರವಾಸ ಸಾಹಿತ್ಯ) ಇನ್ನೂ ಮುಂತಾಗಿ ಹಲವು ಗ್ರಂಥಗಳನ್ನು ರಚಿಸಿರುತ್ತಾರೆ. 'ಪಂಪಪ್ರಶಸ್ತಿ' ಪುರಸ್ಕಾರ (2004)

**6. ಕೆ.ವಿ.ಸುಬ್ಬಣ್ಣ** (20.02.1932-16.07.2005) : ಖ್ಯಾತ ನಾಟಕಕಾರ ಕೆ.ವಿ. ಸುಬ್ಬಣ್ಣ 16.07.05 ರಂದು ನಿಧನರಾದರು. ಇತ್ತೀಚೆಗೆ 'ಪದ್ಮಶ್ರೀ' ಪ್ರಶಸ್ತಿಗೆ ಭಾಜನರಾಗಿದ್ದರು. ಬಹುಮುಖ ಪ್ರತಿಭೆಯ ಸುಬ್ಬಣ್ಣ ಒಳ್ಳೆಯ ಲೇಖಕರು, ನಾಟಕ

ನಿರ್ದೇಶಕರು, ಸಂಪಾದಕರು ಹಾಗೂ ವಿಮರ್ಶಕರು, 'ನೀನಾಸಂ' ಹಾಗೂ 'ಅಕ್ಷರ ಪ್ರಕಾಶನ' ಸಂಸ್ಥೆಗಳ ಸ್ಥಾಪಕರು. ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತರು (1984); 'ನಮ್ಮ ತವಕ ತಲ್ಲಣಗಳು' ಕೃತಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ (1995). ಅಂತಾರಾಷ್ಟ್ರೀಯ ಮ್ಯಾಗ್ಸೇಸೆ ಪ್ರಶಸ್ತಿ ಪುರಸ್ಕೃತರು (1991); 'ರಂಗದಲ್ಲಿ ಅಂತರಂಗ' ಕೃತಿಗೆ ಅಕಾಡೆಮಿ ಬಹುಮಾನ ಲಭಿಸಿದೆ. ಪ್ರಮುಖ ಕೃತಿಗಳು : ಅಂಚೆಮನೆ, ಕಾಡಿನಲ್ಲಿ ಕಥೆ, ಜಯಂತ್ ಮಾಮಾ ನಾಟಕಗಳು; ಬೆಟ್ಟಕ್ಕೆ ಚಳಿಯಾದರೆ; ಚಲನಚಿತ್ರದ ಸ್ವರೂಪ ವಿಮರ್ಶೆ ಮುಂತಾದವು. 1989ರಲ್ಲಿ ರಾಜ್ಯ ಪ್ರಶಸ್ತಿ ಲಭಿಸಿರುತ್ತದೆ.

7. **ಆಳವಂದಾರ್ ಗೋಪಾಲಾಚಾರ್** (11.02.1929–2005) : ಇತ್ತೀಚೆಗೆ ನಿಧನರಾದ ಕಾದಂಬರಿಕಾರ ಆಳವಂದಾಚಾರ್ ಮೈಸೂರು ಜಿಲ್ಲೆ ಕಳಲೆ ಗ್ರಾಮದಲ್ಲಿ ಜನಿಸಿದವರು. ಶ್ರೀಯುತರು ಪೋಲಿಸ್ ಇಲಾಖೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಸಾಹಿತಿಯಗಿ ರಂಗಭೂಮಿ ಕಲಾವಿದರಾಗಿ ಸಾಹಿತ್ಯ ಮತ್ತು ಕಲಾರಂಗಕ್ಕೆ ಅನನ್ಯ ಸೇವೆ ಸಲ್ಲಿಸಿದ್ದರು. 50ಕ್ಕೂ ಹೆಚ್ಚು ಸೃಜನಾತ್ಮಕ ಕೃತಿಗಳನ್ನು ರಚಿಸಿದ್ದರು. 'ಶ್ರೇಷ್ಠ ಕತೆಗಾರ;, 'ಸಾಹಿತ್ಯರತ್ನ', 'ಕನ್ನಡ ಸೌರಭ' ಮುಂತಾದ ಪ್ರಶಸ್ತಿಗಳಿಗೆ ಭಾಜನರಾಗಿದ್ದರು. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ (1996) ಸನ್ಮಾನಿತರಾಗಿದ್ದರು. ಇವರ ಪ್ರಮುಖ ಕೃತಿಗಳು: ಸಜೀವವಾಹಿನಿ, ತವರಿನಕುಡಿ, ವಿರುಪೇರು, ದತ್ತಪುತ್ರ, ಎಲ್ಲಿಂದಲೋ ಬಂದವಳು, ಸಂಜಯಮುಗಿಲು ಮುಂತಾದ ಕಾದಂಬರಿಗಳು 'ಭಾರತ ಪ್ರವಾಸ ಕಥನ' (ಪ್ರವಾಸ ಸಾಹಿತ್ಯ); ಕಣ್ಣೀರ ಭಾಷೆ (ನಾಟಕ) 'ಕೀರ್ತಿ ಕಾಮನೆ–ಕಾಂಚನ' ಇತ್ತೀಚಿನ ಕಾದಂಬರಿ.

8. **ಪ್ರೊ॥ ಸಿ.ಜಿ. ಕೃಷ್ಣಸ್ವಾಮಿ** : (27.06.1950–11.01.2006 ಮಂಡ್ಯದಲ್ಲಿ ಜನನ) ಹಿರಿಯ ರಂಗಕರ್ಮಿ ಪ್ರೊ॥ ಸಿ.ಜಿ.ಕೆ. ಹೃದಯಾಘಾತದಿಂದ ಜನವರಿ 11, 2006 ರಂದು ನಿಧನರಾದರು. ಅವರಿಗೆ ಕೇವಲ 56 ವರ್ಷವಾಗಿತ್ತು. ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಶ್ರೀಯುತರು ಗಾಂಧಿ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಸಾಣೆಹಳ್ಳಿ ಶಿವ ಸಂಚಾರ ನಾಟಕಗಳ ರಂಗ ಪ್ರಯೋಗವನ್ನು ಹಾಗೂ ಪ್ರಗತಿ ಪರ ಚಳುವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಕಳೆದ ಸಾಲಿನಲ್ಲಿ ನಾಟಕ ಅಧ್ಯಕ್ಷರಾಗಿದ್ದರು. (1998–2001) "ರಂಗ ನಿರಂತರ" ಕಟ್ಟಿ ಅನೇಕ ಯುವ ನಿರ್ದೇಶಕರನ್ನು ಬೆಳಕಿಗೆ ತಂದಿದ್ದಾರೆ. 'ಸಮುದಾಯ' ರಂಗ ಚಳುವಳಿಯ ನೇತಾರರಾಗಿ ಸಂಘಟನೆ ಕಟ್ಟಿದ ಅವರು 'ಕತ್ತಾಲೆ–ಬೆಳದಿಂಗಳೊಳಗ' ಹೆಸರಿನ ತಮ್ಮ ಆತ್ಮಕಥೆಯನ್ನು ರಚಿಸಿದ್ದಾರೆ.

9. **ಪ್ರೊ॥ ಎಸ್.ಕೆ. ರಾಮಚಂದ್ರರಾವ್** : (09.02.1927– 2.02.2006) ಹಾಸನದಲ್ಲಿ ಜನಿಸಿದ್ದ ಶ್ರೀಯುತರು ಬಹುಭಾಷಾ ವಿದ್ವಾಂಸರಾಗಿದ್ದರು. ಭಾರತೀಯ

ವಿಜ್ಞಾನ ಸಂಸ್ಥೆಯಲ್ಲಿ ಸಂಶೋಧಕರಾಗಿ, 'ನಿಮಾನ್ಸ್'ನಲ್ಲಿ ಸಹಾಯಕ ಪ್ರೊಫೆಸರ್ ಆಗಿ ಸೇವೆ ಸಲ್ಲಿಸಿದ್ದಾರೆ. ಸಾಹಿತ್ಯ, ಕಲೆ, ಸಂಗೀತ, ತತ್ವಶಾಸ್ತ್ರ, ಶಿಲ್ಪಶಾಸ್ತ್ರ ಮೊದಲಾದ ಕ್ಷೇತ್ರದಲ್ಲಿ ಅಪಾರ ಪಾಂಡಿತ್ಯ ಪಡೆದಿದ್ದರು. ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದರು. ಬಹುಮುಖ ಪ್ರತಿಭೆಯ ಇವರು ರಚಿಸಿರುವ ಕೃತಿಗಳು ವೈವಿಧ್ಯಮಯವಾಗಿದೆ. ಮುಖ್ಯವಾದವು, ಪ್ರಾಚೀನ ಸಂಸ್ಕೃತಿ, ಮೂರ್ತಿಶಿಲ್ಪ, ತಿರುಪತಿ ತಿಮ್ಮಪ್ಪ, ಬೋಧಿಯ ಬೆಳಕಿನಲ್ಲಿ ಬೆಂಗಳೂರಿನ ಕರಗ, ಮಹರ್ಷಿ ದೈವದಾತರು. ತ್ಯಾಗರಾಜ, ಭದ್ರಬಾಹುಸ್ವಾಮಿ ಮುಂತಾದವು.

**10. ಹಾಸ್ಯ ಸಾಹಿತಿ ಟಿ. ಸುನಂದಮ್ಮ** : (08.08.1917– 28.01.2006 ಮೈಸೂರಿನಲ್ಲಿ ಜನನ) ಹಾಸ್ಯ, ವಿಡಂಬನ ಸಾಹಿತ್ಯ ಕ್ಷೇತ್ರದಲ್ಲಿ ಅನುಮಪ ಸೇವೆ ಸಲ್ಲಿಸಿದ್ದಾರೆ. ರೇಡಿಯೋ ನಾಟಕ, ಪ್ರಹಸನ ಮೂಲಕ ಜನಮನದಲ್ಲಿ ನೆಲೆಸಿದ್ದರೆ. ರಾಜ್ಯೋತ್ಸವ ಪ್ರಶಸ್ತಿ (1998) ದಾನಚಿಂತಾಮಣಿ ಪ್ರಶಸ್ತಿ (1996) ಲಭಿಸಿವೆ. 'ಸುನಂದಾಭಿನಂದನ' ಅವರಿಗೆ ಸಂದಿದವ ಗೌರವ ಗ್ರಂಥ. ಇವರ ಪ್ರಮುಖ ಕೃತಿಗಳು: ಜಂಬದ ಚೀಲ. ವೃಕ್ಷವಾಹನ, ಗೃಹಲಕ್ಷ್ಮಿ, ಚಿಕ್ಕಪ್ಪನ ಉಯಿಲು, ಆದರ್ಶದ ಆಡಂಬರ, ಮಡದಿಯ ಪತ್ರ, ರೂಢಿಗಾಡಿ, ತೆನಾಲಿ ರಾಮಕೃಷ್ಣ, ಚಕ್ರ ಚುಕ್ಕೆ, ನನ್ನ ಅತ್ತೆಗಿರಿ ಮುಂತಾದವು.

**11. ಡಾ॥ ಡಿ.ಎಂ.ನಂಜುಡಪ್ಪ**: (25.10.1930–26.09.2005) ಅಕಾಡೆಮಿ ಅರ್ಥಶಾಸ್ತ್ರ ಪ್ರವೀಣ, ನಿವೃತ್ತ ಕುಲಪತಿಗಳು ಸಮುದಾಯ ಅಭಿವೃದ್ಧಿ ಮತ್ತು ಉದ್ಯೋಗ (ಅರ್ಥಶಾಸ್ತ್ರ) ಅಧಿಕ ಮಾನವಶಾಸ್ತ್ರ ಮತ್ತು ಆರ್ಥಿಕ ಅಭಿವೃದ್ಧಿ ಇವರು ರಚಿಸಿರುವ ಪ್ರಸಿದ್ಧ ಕೃತಿಗಳು.

**12. ಎಂ.ಕೆ. ಭಾರತೀರಮಣಾಚಾರ್** : ನಿವೃತ್ತ ಹಿಂದಿ ಪ್ರಾಧ್ಯಾಪಕರೂ ಸಾಹಿತಿಗಳೂ ಆಗಿದ್ದ ಎಂ.ಕೆ. ಭಾರತೀರಮಣಾಚಾರ್ ಅವರು 22.01.2006 ರಂದು ನಮ್ಮನ್ನಗಲಿದರು. ಹಿಂದಿಯಿಂದ ಕನ್ನಡಕ್ಕೆ ಮತ್ತು ಕನ್ನಡದಿಂದ ಹಿಂದಿಗೆ ಹಲವು ಕೃತಿಗಳನ್ನು ಭಾಷಾಂತರ ಮಾಡಿರುವ ಭಾರತೀರಮಣಾಚಾರ್ಯರ ಮುಖ್ಯ ಕೃತಿಯೆಂದರೆ ಹಿಂದಿಯ ತುಳಸೀದಾಸರ ಶ್ರೀರಾಮಚರಿತ ಮಾನಸದ ಕನ್ನಡಾನುವಾದ. ಇದು ಕೇವಲ ಅನುವಾದವಾಗಿರದೆ ಸ್ವಂತ ವ್ಯಾಖ್ಯಾನದ ಸ್ವತಂತ್ರ ಕೃತಿಯಾಗಿದೆ. ಇದಕ್ಕೆ ಲೇಖಕರು ಬರೆದಿರುವ ಮಕರಂದ ವ್ಯಾಖ್ಯೆಯಿಂದ ಈ ಕೃತಿ ವಿದ್ವತ್‌ಪೂರ್ಣ ಗ್ರಂಥವಾಗಿ ವಿದ್ವಾಂಸರ ಗಮನ ಸೆಳೆದಿದೆ. 10 ಸಂಪುಟಗಳಲ್ಲಿ ವಿಸ್ತಾರವಾದ ವ್ಯಾಖ್ಯಾನದಲ್ಲಿ ಮೂಲ ಮತ್ತು ಅನುವಾದದೊಂದಿಗೆ ಪ್ರಕಟವಾಗಿರುವ ಈ ಕೃತಿಮಾಲೆಯಿಂದ ದಿವಂಗತರು ಕನ್ನಡ ಸಾಹಿತ್ಯ ಲೋಕದಲ್ಲಿ ಶಾಶ್ವತವಾಗಿ ನಿಲ್ಲುತ್ತಾರೆ.

ಬಿ.ಎಂ.ಶ್ರೀ ಪ್ರತಿಷ್ಠಾನದ ಸಕ್ರಿಯ ಸದಸ್ಯರಾಗಿದ್ದ ಹಿತೈಷಿಗಳಾಗಿದ್ದ ದಿವಂಗತರು

ಪ್ರತಿಷ್ಠಾನದ ಕಟ್ಟಡನಿಧಿಗಾಗಿ ತಮ್ಮ ಕೃತಿಸಂಪುಟ ಹತ್ತು ಸೆಟ್ (10 ಸಂಪುಟ-10,000/-ರೂ ಮೌಲ್ಯ) ಅನ್ನು ಉದಾರ ಕೊಡುಗೆಯಾಗಿ ನೀಡಿ ಉಪಕರಿಸಿದ್ದರು.

**13. ಎಚ್.ಎಲ್.ಶೇಷಚಂದ್ರ :** ಖ್ಯಾತ ಸಂಗೀತ ನಿರ್ದೇಶಕರೂ ಚಿತ್ರ ಸಾಹಿತಿಗಳೂ ಆಗಿದ್ದ ಎಚ್.ಎಲ್.ಎನ್. ಸಿಂಹ ಅವರ ಪುತ್ರರಾಗಿ ತಾವೂ ಸಂಗೀತ ಕ್ಷೇತ್ರದಲ್ಲಿ ಸಾಧನೆ ಮಾಡಿ ಸಂಗೀತ ನಿರ್ದೇಶಕರಾಗಿ ಸಾಹಿತ್ಯ ರಚನೆಕಾರರಾಗಿ ಪ್ರಸಿದ್ಧರಾಗಿದ್ದ ಎಚ್.ಎಲ್. ಶೇಷಚಂದ್ರ ಅವರು 02.06.06 ರಂದು ನಿಧನರಾದರು. ರಜತೋತ್ಸವ ಸಮಾರಂಭದಲ್ಲಿ ಸಕ್ರಿಯವಾಗಿ ಸಹಕರಿಸಿದ್ದ ದಿವಂಗತರು ಪ್ರತಿಷ್ಠಾನದ ಸದಸ್ಯರೂ ಆಗಿದ್ದರು. ಈಚೆಗಷ್ಟೇ (2004) ತಮ್ಮ ತಂದೆಯವರ ಶತಮಾನೋತ್ಸವ ಸಮಾರಂಭವನ್ನು ಸರ್ಕಾರದ ಮೂಲಕ ಯಶಸ್ವಿಯಾಗಿ ನಡೆಸುವಲ್ಲಿ ಮತ್ತು ಸರ್ಕಾರದಿಂದ ಎಚ್.ಎಲ್.ಎಸ್. ಸಿಂಹ ಅವರ ಹೆಸರಿನಲ್ಲಿ ರಾಜ್ಯ ಪ್ರಶಸ್ತಿ ಸ್ಥಾಪಿಸುವಲ್ಲಿ ಯಶಸ್ವಿಯಾಗಿದ್ದರು.

* * *

## ಲೋಚನ ಲೇಖಕರ ವಿಳಾಸಗಳು

1. ಪ್ರೊ॥ ಜಿ. ಅಶ್ವತ್ಥನಾರಾಯಣ
95(ಮಹಡಿ), 34ನೇ 'ಬಿ' ಕ್ರಾಸ್,
16ನೇ ಮೇನ್, 4ನೇ 'ಟಿ' ಬ್ಲಾಕ್,
ಜಯನಗರ,
ಬೆಂಗಳೂರು - 560 011.

2. ಡಾ॥ ವ್ಹಿ.ಜಿ. ಪೂಜಾರ
'ಚೇತನ' ಸರಸ್ವತಿಪುರ,
ಕುಸನೂರ ರಸ್ತೆ,
ವಿಶ್ವವಿದ್ಯಾಲಯ ಅಂಚೆ,
ಗುಲ್ಬರ್ಗಾ - 585 106.

3. ಡಾ॥ ಎಸ್. ಎಸ್. ಅಂಗಡಿ,
ಅಧ್ಯಾಪಕ (ಹಿರಿಯ ಶ್ರೇಣಿ)
ಹಸ್ತ ಪ್ರತಿಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯಪುರ - ಕಮಲಾಪುರ,
ಪಿನ್ - 583276

4. ವಿ. ವೆಂಕಟರಾವ್,
'ಶ್ರೀನಿಲಯ'
ನಾಯಕರಹಟ್ಟಿ,
ಶಿರಾ - 572137.

5. ವಿ. ರಾಣಿಗೋವಿಂದರಾಜು
ನಂ. 100, 3ನೇ ಮಹಡಿ,
14ನೇ ಕ್ರಾಸ್, ಕಿಲಾರಿ ರಸ್ತೆ,
ಬೆಂಗಳೂರು - 560 053.

6. ಎಸ್.ವಿ. ಶ್ರೀನಿವಾಸರಾವ್
ನಂ. 430, ಸೌರಭ,
4ನೇ ಮುಖ್ಯರಸ್ತೆ, ಶ್ರೀನಗರ,
ಬೆಂಗಳೂರು - 560 050

7. ಶ್ರೀಮತಿ, ಇಂದಿರಾ ಹೆಗ್ಗಡೆ
ಕರಾವಳಿ ಟ್ರೇಡರ್ಸ್,
ವಿಜಯನಗರ,
ಬೆಂಗಳೂರು - 560 040.

8. ಪ್ರೊ॥ ನಾ.ಗೀತಾಚಾರ್ಯ,
ಕಾರ್ಯದರ್ಶಿ ಬಿ.ಎಂ.ಶ್ರೀ
ಸ್ಮಾರಕ ಪ್ರತಿಷ್ಠಾನ
ಎನ್.ಆರ್.ಕಾಲೋನಿ,
ಬೆಂಗಳೂರು-560 050.

9. ಡಾ॥ ಕೆ.ಜಿ. ವೆಂಕಟೇಶ ಜೋಯಿಸ್
ಕ್ಯಾರೇಟರ್, ಕೆಳದಿ ವಸ್ತು
ಸಂಗ್ರಹಾಲಯ, ಕೆಳದಿ-577401.

10. ಕೆ. ರಘುರಾಮಭಟ್
# 15, ಶ್ರೀ ಗಣೇಶ, ನೆಲ ಅಂತಸ್ತು,
14ನೇ ಅಡ್ಡರಸ್ತೆ,
ಶ್ರೀ ಕೃಷ್ಣದೇವಾಲಯದ ಮುಖ್ಯರಸ್ತೆ,
ಅಂಚೆ: ಬನಶಂಕರಿ 3ನೇ ಹಂತ,
ಹೊಸಕೆರೆ ಹಳ್ಳಿ, ದ್ವಾರಕಾನಗರ,
ಬೆಂಗಳೂರು-560 085.

## ಪ್ರತಿಷ್ಠಾನದ ಗೌರವ ಸದಸ್ಯರು

1. ವಿದ್ವಾನ್ ಎನ್. ರಂಗನಾಥಶರ್ಮ
2. ಪ್ರೊ॥ ಜಿ. ವೆಂಕಟಸುಬ್ಬಯ್ಯ
3. ಡಾ॥ ಜಿ.ಎಸ್. ಶಿವರುದ್ರಪ್ಪ
4. ಪ್ರೊ॥ ಕೆ.ಟಿ. ಪಾಂಡುರಂಗಿ
5. ಶ್ರೀಮತಿ ಸಾವಿತ್ರಮ್ಮ ರಾಮಸ್ವಾಮಿ
6. ಕಯ್ಯಾರ ಕಿಞ್ಞಣ್ಣರೈ, ಕಾಸರಗೋಡು
7. ಡಾ॥ ದೇ. ಜವರೇಗೌಡ, ಮೈಸೂರು
8. ಡಾ॥ ಚನ್ನವೀರ ಕಣವಿ, ದಾರವಾಡ
9. ಶ್ರೀ ಬೆಳಗೆರೆ ಕೃಷ್ಣಶಾಸ್ತ್ರೀ, ಬೆಳಗೆರೆ
10. ಶ್ರೀ ವಾಮದೇವ ದೀಕ್ಷಿತ್, ಗುಲ್ಬರ್ಗ

## ಕಾರ್ಯಸಮಿತಿ ಸದಸ್ಯರು

ಜಿ. ನಾರಾಯಣ,(ಗೌರವ ಅಧ್ಯಕ್ಷರು)

1. ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ,(ಅಧ್ಯಕ್ಷರು),
2. ಪ್ರೊ॥ ನಾ.ಗೀತಾಚಾರ್ಯ,(ಗೌ॥ ಕಾರ್ಯದರ್ಶಿ),
3. ಶ್ರೀ ಎಸ್.ಟಿ. ರಾಧಾಕೃಷ್ಣ, (ಕೋಶಾಧಿಕಾರಿ),
4. ಶ್ರೀ ಎಸ್.ವಿ.ಶ್ರೀನಿವಾಸರಾವ್(ವ್ಯ. ಕಾರ್ಯದರ್ಶಿ)
5. ಪ್ರೊ॥ ಎಲ್.ಎಸ್. ಶೇಷಗಿರಿರಾವ್,
6. ಪ್ರೊ॥ ಎನ್.ಬಸವಾರಾಧ್ಯ
7. ಡಾ॥ ಎಂ. ಚಿದಾನಂದಮೂರ್ತಿ,
8. ಪ್ರೊ॥ ಅ.ರಾ.ಮಿತ್ರ,
9. ಪ್ರೊ॥ ಎಂ.ಎಚ್. ಕೃಷ್ಣಯ್ಯ,
10. ಡಾ॥ ಎಂ.ಎಲ್.ಲಲಿತಮ್ಮ,
11. ಪ್ರೊ॥ ಜಿ.ಅಶ್ವತ್ಥನಾರಾಯಣ,
12. ಪ್ರೊ॥ ಡಿ.ಲಿಂಗಯ್ಯ,
13. ಪ್ರೊ॥ ಸದಾಶ್ ಧಾವನ್‌ಕರ್
14. ಪ್ರೊ॥ ಟಿ.ಎಸ್. ನಾಗಭೂಷಣ,
15. ಡಾ॥ ನ. ಸುಬ್ರಹ್ಮಣ್ಯಂ,
16. ಟಿ. ನಾಗರಾಜು
17. ಎನ್.ಎಸ್.ಕೃಷ್ಣಸ್ವಾಮಿ
18. ಎಸ್.ಕೃಷ್ಣಮೂರ್ತಿ, ಬೆಳ್ಳೂರು ಸಮಿತಿ
19. ಪ್ರೊ॥ ಜಿ. ಶ್ರೀನಿವಾಸರಾಜು
20. ಡಾ॥ ಕೆ.ವಿ. ನಾರಾಯಣ

## ವಿನಿಮಯ ಪತ್ರಿಕೆಗಳು

1. ಪ್ರಬುದ್ಧ ಕರ್ಣಾಟಕ, ಮೈಸೂರು, 2. ಸಾಧನೆ, 3. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ 4.ಮಿಥಿಕ್ ಸೊಸೈಟಿ ಜರ್ನಲ್, 5.ಬಸವಪಥ 6. ಶಂಕರ ಭಾಸ್ಕರ, 7.ಜಾನಪದ ಜಗತ್ತು, 8. ಸಂಕ್ರಮಣ, 9. ಅಪರಂಜಿ 10. ಸುಗುಣಮಾಲಾ, ಉಡುಪಿ, 11. ತರಳಬಾಳು, ಸಿರಿಗೆರೆ, 12. ಸಂಚಯ, 13. ಹೊಸತು, 14. ಕರುಣ ಕಾವ್ಯ ಪತ್ರಿಕೆ, 15. ಭೂಮಿಕಾ 16. ವಿನೋದ, 17. ಕನಕಸ್ಫೂರ್ತಿ, 18.ಆದಿಚುಂಚನ ಗಿರಿ, 19. ಶ್ರೀ ಗುರು ಸಾರ್ವಭೌಮ ಮತ್ತು ವಿಜಯಸಂಪದ, ಮಂತ್ರಾಲಯ, 21. ಮಲ್ಲಾರ, ಕೈವಾರ.

## ಕರ್ನಾಟಕ ಲೋಚನ ಚಂದಾ ವಿವರ

| | | |
|---|---|---|
| ವಾರ್ಷಿಕ ಚಂದಾ | : | ವ್ಯಕ್ತಿಗಳಿಗೆ – ರೂ. 40.00 |
| | : | ಗ್ರಂಥಾಲಯ, ಸಂಘ ಸಂಸ್ಥೆಗಳಿಗೆ – ರೂ.100.00 |
| ಆಜೀವ ಚಂದಾ | : | ರೂ. 400.00 |
| | | ಬಿಡಿ ಪ್ರತಿ ರೂ. 25.00 |

**ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ ಮತ್ತು ಪ್ರಕಟಣೆಗಳಿಗೆ ಶೇ। 50. ರಿಯಾಯಿತಿ**

| | | |
|---|---|---|
| ಪ್ರತಿಷ್ಠಾನದ ಸದಸ್ಯತ್ವ | : | ವಾರ್ಷಿಕ ರೂ. 50.00 : ಆಜೀವ ರೂ. 500.00 |

KARNATAKA LOCHANA-Half-yearly Research Journal,
Published by B.M.Sri. Smaraka Prathisthana, B.M.Sri Kala Bhavan,
3rd Main, N.R.Colony, Bangalore-560 019.
Ph: 26615877, E-mail: bmsri/trust@yahoo.com
Website: http://in.members,tripodosia.com/bmsri/
Printed by : Prathibha Printers, Bangalore-560 019.
Ph:26916918, 26692113

## ರಜತೋತ್ಸವ ಗ್ರಂಥಮಾಲೆ

| | | |
|---|---|---|
| 1. | ಸಾಹಿತ್ಯೋಪಾಸಕರು (19ನೇ ಶತಮಾನದ ಸಾಹಿತಿ ವಿದ್ವಾಂಸರ ಸಾಧನೆಗಳು) | 200–00 |
| 2. | ಗ್ರಂಥಸಂಪಾದನ ಪರಿಭಾಷಾಕೋಶ | 36–00 |
| 3. | ಶ್ರೀಕೃಷ್ಣ ಲೀಲಾಗಾನಂ | 100–00 |
| 4. | ಕನ್ನಡ ತಿರುಕ್ಕುರಳ್ (ಅನುವಾದ) | 100–00 |
| 5. | ಕಾರಂತ ಕಿರಣ | 30–00 |
| 6. | ತಿಮ್ಮಪ್ಪದಾಸರ ಕೀರ್ತನೆಗಳು | 75–00 |
| 7. | ವೆಂಕಟದಾಸರು ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು | 100–00 |
| 8. | ಬಿ.ಎಂ.ಶ್ರೀ. (ಕಿರು ಪರಿಚಯ ಮತ್ತು ಸೂಕ್ತಿಗಳು) | 20–00 |
| 9. | ಎಂ.ವಿ.ಸೀ. (ಕಿರು ಪರಿಚಯ ಮತ್ತು ಸೂಕ್ತಿಗಳು) | 20–00 |
| 10. | ಬಿ.ಎಂ.ಶ್ರೀ. ಪ್ರತಿಷ್ಠಾನ – 25 (ಮುದ್ರಣದಲ್ಲಿ) | |

**ಈಚಿನ ಪ್ರಕಟಣೆಗಳು**

| | | |
|---|---|---|
| 1. | ಅಲಿಗೆ ಮೇಲಿನ ಮನೆಯ ಹಸ್ತಪ್ರತಿಗಳು | 100–00 |
| 2. | ಇಂಗ್ಲೀಷ್ ಗೀತಗಳು (ಮೂಲದೊಂದಿಗೆ) | |
| 3. | ಹೊಸಗನ್ನಡ ವ್ಯಾಕರಣ | |





ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ